K. G. BUTI

# ರಾಣೀ ಅಜ್ಞಾತಾ

ನವಗಿರಿನಂದ

ವಾಹಿನಿ ಪ್ರಕಾಶನ
ಜಯಚಾಮರಾಜ ರಸ್ತೆ, ಬೆಂಗಳೂರು-೨





# ಮೊದಲ ಅರಿಕೆ

ಕನ್ನಡನಾಡಿನ ಚರಿತ್ರೆಗೆ ಸಂಬಂಧಪಟ್ಟ ಕಾದಂಬರಿಗಳು ಬಲು ವಿರಳ. ಈ ಕೊರತೆಗೆ ನನ್ನ ಇದೊಂದು ಅಳಿಲಸೇವೆಯ ಪ್ರಯತ್ನ.

ಇದರ ರಚನೆಗೆ ಕನ್ನಡ, ತೆಲುಗು ಭಾಷೆಗಳ ಹಲವು ಚರಿತ್ರ ಗ್ರಂಥಗಳು ತುಂಬಾ ಸಹಾಯಕವಾಗಿವೆ. ಅವುಗಳ ಸಹಾಯದಿಂದ ಇನ್ನೂ ಕೆಲವು ಕನ್ನಡ ಐತಿಹಾಸಿಕ ಕಾದಂಬರಿಗಳನ್ನು ಬರೆಯ ಬೇಕೆಂದಿದ್ದೇನೆ. ಬರೆಸುವುದು ಕನ್ನಡಿಗರ ಪ್ರೋತ್ಸಾಹವನ್ನು ಅವಲಂಬಿಸಿದೆ - ಎಂದಷ್ಟೇ ಹೇಳಬಲ್ಲೆ.

ಇನ್ನು ಈ ಗ್ರಂಥವನ್ನು ನಿಮ್ಮ ಕೈಗೊಪ್ಪಿಸಲು ಸಹಾಯಕರಾದ 'ವಾಹಿನಿ ಪ್ರಕಾಶನ'ದವರಿಗೆ ನನ್ನ ಕೃತಜ್ಞತೆಯನ್ನು ಸಮರ್ಪಿಸಿ ಕೊಳ್ಳುತ್ತೇನೆ.

ಇಂತು ಕನ್ನಡಿಗರೊಲವನ್ನು ಆಶಿಸುವ,

**ನವಗಿರಿನಂದ.**

# ೧

ಶ್ರೀಮತ್ಕರ್ಣಾಟಕ ರಾಜ್ಯರಮಾರಮಣ ಕೃಷ್ಣದೇವರಾಯನ ವರಾಹಚಿಹ್ನಾಂಕಿತ ವಿಜಯ ಧ್ವಜವು, ಮಹೋನ್ನತವಾದ ಉದಯಗಿರಿಯ ದುರ್ಗಶಿಖರದ ಮೇಲೆ ತಕತಕನೆ ಕುಣಿಯುತ್ತಿತ್ತು. ಸಂಜೆಯ ಸೂರ್ಯನು ಹೂಮೋಡಗಳೆಡೆಯಿಂದ ಇಣಿಕಿಕೊಂಡು ಆ ಧ್ವಜನರ್ತನದ ಬೆಡಗನ್ನು ನೋಡುತ್ತ ಕೆಳಗಿಳಿಯುತ್ತಿದ್ದನು. ದುರ್ಗಶಿಖರಗಳ ಮೇಲೆಯೂ, ಅದರ ಕೋಡುಗಲ್ಲುಗಳ ಮೇಲೆಯೂ ಅಲ್ಲಲ್ಲಿ ಇಷ್ಟಿಷ್ಟು ಹೊಂಬಿಸಿಲು ಲೇಪಿತವಾಗಿತ್ತು. ಆ ಹೆಬ್ಬೆಟ್ಟದ ಬುಡವು ದಟ್ಟವಾದ ನೆರಳಿನಿಂದ ಆವೃತವಾಗಿರುವುದನ್ನು ನೋಡಿದರೆ, ದುರ್ಗಶಿಖರವು ಕನ್ನಡರಾಯನ ವಿಜಯಚಿಹ್ನೆಯ ಬಿಸಿಲ ಹೊಮ್ಮುಕುಟವನ್ನು ಧರಿಸಿ ಕಂಗೊಳಿಸುವಂತಿತ್ತು.

ಆ ದುರ್ಗದ ಮೇಲಕ್ಕೆ ಹೋಗುವ ಕಾಲುದಾರಿಯಲ್ಲಿ ಕೆಲವು ಹುಲ್ಲಿನ ಹೊರೆಯವರು ಹೋಗುತ್ತಿದ್ದರು. ಅವರಲ್ಲಿ ಒಬ್ಬಳು ಹೆಂಗಸು. ಅವಳ ನಡಿಗೆಯ ಬೆಡಗೇ ಒಂದು ಬೆಡಗು. ಹುಲ್ಲಿನ ಹೊರೆಯ ಮರೆಯಿಂದ ಅವಳ ಬಟ್ಟಮೊಗವು ಸರಿಯಾಗಿ ಕಾಣಿಸದಿದ್ದರೂ, ಅದು ಮರದೆಲೆಗಳ ಸಂದಿನಲ್ಲಿ ಕಣ್ಗೆಸೆಯುವ ಪೂರ್ಣಚಂದ್ರನಂತೆಯೇ ತೋರುತ್ತಿತ್ತು. ಕಮಲದ ಮಧ್ಯದಲ್ಲಿ ಸುಳಿದಾಡುವ ಭ್ರಮರಗಳಂತೆ ಕಣ್ಣುಗಳು ಚಂಚಲತೆಯಿಂದ ತಿರುಗುತ್ತಿದ್ದುವು. ಮೂಗಿನಲ್ಲಿ ದೊಡ್ಡದೊಂದು

ಉಂಗುರ ಮೂಗುತಿ; ಹಣೆಯಲ್ಲಿ ಅಗಲವಾದ ಕುಂಕುಮದ ಬೊಟ್ಟು; ಕೊರಳಿನಲ್ಲಿ ಬಗೆಬಗೆ ಬಣ್ಣಗಳ ಗಾಜು ಮಣಿಮಾಲೆಗಳು; ಮಾಸಿದ ರವಿಕೆ; ಮಾಸಿದ ಸೀರೆಯನ್ನು ಬೇಡರ ಜಾತಿಯವಳಂತೆ ಉಟ್ಟಿದ್ದಾಳೆ. ಕೈಗಳಲ್ಲಿ ಬಣ್ಣಬಣ್ಣದ ಗಾಜಿನ ಬಳೆಗಳು ಕಣಕಣಿಸುತ್ತಿದ್ದುವು. ಹೊರೆಯ ಭಾರದಿಂದ ಕೊರಳು ಕೊಂಕುತ್ತಿತ್ತು ಬಡನಡು ಬಳುಕುತ್ತಿತ್ತು ಹಜ್ಜೆ ಹಜ್ಜೆಗೂ ಕಾಲುಂಗುರಗಳ ಠಣತ್ಕಾರ. ಅದಕ್ಕೆ ಮೇಳ ಬೀಳು ವಂತೆ ಅವಳ ಇನಿಗೊರಳಿನಿಂದ ಆಗಾಗ "ಹುಲ್ಲಮ್ಮೋ ಹುಲ್ಲು" ಎಂಬ ಗಿಳಿರಾಗ. ಯಾರಾದರೂ ಕರೆದು ವಿಚಾರಿಸಿದರೆ ಅವರೆಲ್ಲರ ಹುಲ್ಲಿನ ಬೆಲೆಯೂ ಬಲು ದುಬಾರಿ. "ದುರ್ಗಕ್ಕೆ ಹೋದರೆ ಒಳ್ಳೇ ಲಾಭ ಬರುತ್ತೆ" ಎಂದು ಮುಂದೆ ಮುಂದೆ ಕಾಲು ಹಾಕುತ್ತಿದ್ದರು.

ಒಮ್ಮೆಗೇ ಎಲ್ಲರೂ ಗಕ್ಕನೆ ನಿಂತುಬಿಟ್ಟರು. ಒಂದು ದೊಡ್ಡ ಮನೆಯ ದೃಶ್ಯವೇ ಅವರನ್ನು ಹಾಗೆ ನಿಲ್ಲಿಸಿತ್ತು. ಅನೇಕ ಸ್ತ್ರೀ ಪುರು ಷರು ಗುಂಪು ಗುಂಪಾಗಿ ಆ ಮನೆಗೆ ಹೋಗುತ್ತಾ ಬರುತ್ತಾ ಇದ್ದರು. ಅಲ್ಲಿಂದ ಹಿಂದಿರುಗುವವರ ಆಶ್ಚರ್ಯದ ಹಾವಭಾವ ಸಂಭಾಷಣೆಗಳಿಂದ ಆ ಮನೆಯೊಳಗೆ, ಊರಿಗೆ ಹೊಸಬನಾದೊಬ್ಬ ಜೋಯಿಸನು ಬಂದು ತನ್ನ ಪ್ರಭಾವವನ್ನು ಬೀರುತ್ತಿರುವನೆಂದು ಗೊತ್ತಾಯಿತು. ಎರಡೇ ದಿನದೊಳಗೆ ಅವನ ಪ್ರಭಾವವು, ದುರ್ಗಾಧೀಶ ರಾಮನಾಯಕನ ಕಿವಿ ಯನ್ನೇರಿ, ಅವನು ಜೋಯಿಸನನ್ನು ಆಮಂತ್ರಿಸಿ, ಅಲ್ಲಿ ಕಾಣುವ ಆ ಪಲ್ಲಕ್ಕಿಯನ್ನು ಕೊಟ್ಟು ಕಳುಹಿಸಿದ್ದನಂತೆ.

ಹುಲ್ಲಿನವಳು ಹುಲ್ಲಿನ ಹೊರೆಯನ್ನು ಅಲ್ಲಿಯೇ ಹಾಕಿ ಸಂಗಡಿ ಗರನ್ನು ಒಂದು ಬಗೆಯ ಸನ್ನೆ ನೋಟದಿಂದ ನೋಡಿದಳು. ಬಳಿಕ ಸರಸರನೆ ಆ ಮನೆಯೊಳಗೆ ಹೊರಟಳು. ಸಂಗಡಿಗರು ಅವಳ ನೋಟದ ಭಾವಕ್ಕೆ ತಲೆದೂಗಿ ಮುಂದೆ ನಡೆದರು.

ಆ ಮನೆಯ ಬಾಗಿಲಲ್ಲಿ ನಿಂತಿದ್ದ ದಂಡಧಾರಿಯೊಬ್ಬನು, ಒಬ್ಬರು ಒಳಗೆ ಹೋಗಿ ಹೊರಗೆ ಬಂದಮೇಲೆ ಇನ್ನೊಬ್ಬರನ್ನು ಒಳಗೆ ಬಿಡುತ್ತಿದ್ದನು. ಸ್ವಲ್ಪಹೊತ್ತು ಕಾದುನಿಂತ ಮೇಲೆ ಹುಲ್ಲಿನವಳು ಒಳಗೆ ಪ್ರವೇಶಿಸಿದಳು. ವಿಶಾಲವಾದ ಹಜಾರವನ್ನು ದಾಟಿ, ಸುಭದ್ರವಾದೊಂದು

ಕೋಣೆಯೊಳಗೆ, ತಕ್ಕ ಪರಿಕರಗಳೊಂದಿಗೆ ಜಮುಖಾನೆಯ ಮೇಲೆ ಮಂಡಿಸಿರುವ ಆ ಪ್ರತಿಭಾಶಾಲಿ ಜೋಯಿಸನ ಇದಿರಿನಲ್ಲಿ ಅವಳು ನಿಂತಳು.

ಅವಳ ವಿದ್ಯುತ್ಕಟಾಕ್ಷವು ಅವನ ಸರ್ವಾಂಗವನ್ನೂ ಒಮ್ಮೆಗೇ ಹೀರಿ ಬಿಡುವಂತೆ ನೋಡಿತು. ಅವನ ಹುಬ್ಬಿನ ಮೇಲೆ ಸೂಕ್ಷ್ಮವಾಗಿ ಕಾಣುವ ಮತ್ಸ್ಯಾಕಾರವನ್ನು ಕಾಣುತ್ತಲೇ, ಅವಳ ಮುಖದಲ್ಲಿ ಹಾರಿದ ಗೆಲುವಿನ ತೆರೆಯೊಂದು, ಅಚ್ಚರಿಯ ಮಿರುಗೊಂದು, ಆ ಚಾಣಾಕ್ಷ ಜೋಯಿಸನ ಹದ್ದಿನ ದೃಷ್ಟಿಗೆ ಬೀಳದೆ ಮಾಯವಾಗಿ ಹೋಯಿತು. ಅವಳು "ದಂಡಂ ಸ್ವಾಮಿಾ" ಎನ್ನುತ್ತಾ ಆ ಹಿರಿಯನಿಗೆ ಅಡ್ಡ ಬಿದ್ದಳು.

"ದೀರ್ಘ ಸುಮಂಗಲೀ ಭವ!"—ಜೋಯಿಸನ ಈ ಹರಕೆಯನ್ನು ಕೇಳಿ ಅವಳು ಕಪೋಲದ ಮೇಲೆ ಕಿರುಬೆರಳನ್ನಿಟ್ಟುಕೊಂಡು–"ಅಯ್ಯಯ್ಯೋ! ಇದೇನು ಸ್ವಾಮಿ! ಮೊದಲ ತುತ್ತಿಗೇ ನೊಣಬಿದ್ದ ಹಾಗೆ, ಹೀಗೆ ಹರಸಿದಿರಲ್ಲ!"

ಮುಳ್ಳು ಚುಚ್ಚಿದ ಹಾಗಾಯಿತು ಜೋಯಿಸನಿಗೆ! "ಓ! ಹಾಗೇನು? ನಿನ್ನ ದೊಡ್ಡ ಕುಂಕುಮವೇ ಮೊದಲಾದ ಸುಮಂಗಲೀ ಚಿಹ್ನೆಗಳನ್ನು ನೋಡಿ ಹರಸಿದೆ. ಎಲ್ಲಿ ನಿನ್ನ ಕೈಯನ್ನು ಮುಂದೆ ಚಾಚು ನೋಡೋಣ."

ಹುಲ್ಲಿನವಳು ಅಚ್ಚುಕಟ್ಟಾಗಿ ಕುಳಿತು, ಸೆರಗನ್ನು ಬಿಗಿದುಕೊಂಡು, ತನ್ನ ಎಡಗೈಯನ್ನು ಮುಂದಕ್ಕೆ ಚಾಚಿದಳು. ಅವಳ ಹೂವೊಗ್ಗೆಯಂತಹ ನಡುವೆರಳಿನಲ್ಲಿದ್ದ ಉಂಗುರವನ್ನು ನೋಡುತ್ತಲೇ ಆ ಜೋಯಿಸನ ಕಣ್ಣಿನಲ್ಲಿ ಅತ್ಯಾಶ್ಚರ್ಯದ ಮಿಂಚು ಹಾರಿತು! ಇದನ್ನರಿತ ಹುಲ್ಲಿನವಳೂ ಕೌತುಕಗೊಂಡಳು. ಜೋಯಿಸನು ಬಾಗಿ ಅವಳ ಹಸ್ತರೇಖೆಯನ್ನು ಪರೀಕ್ಷಿಸುವನಂತೆಯೇ, ಅವಳನ್ನು ನಖಶಿಖಾಂತವಾಗಿ ನೋಡಿದನು. ಒಡನೇ ಅವನು ವಿದ್ಯುದ್ವೇಗದಿಂದ ಎದ್ದು ಹುಡುಗನಂತೆ ಹಾರಿ ಆ ಕೋಣೆಯ ವರೆಗೆ ಹೋಗಿ, ಬಾಗಿಲು ಎಳೆದು ತಾಳ ಜಡಿದುಬಿಟ್ಟನು! ಆ ಮುದುಕನ ಆಶ್ಚರ್ಯಕರವಾದ

ಲಾಘವಲೀಲೆಯನ್ನು ನೋಡಿ, ಆ ಹೆಂಗಸು ಬೆರಗಾದಳು.

ಆದರೆ ಆ ದಿಟ್ಟೆ ಬಂದಿಯಾದೆನೆಂದು ಬೆದರಲಿಲ್ಲ. ಆ ಜೋಯಿಸನ ಬುದ್ಧಿಮತ್ತೆಗಾಗಿ ಆಶ್ಚರ್ಯಪಡುತ್ತಿದ್ದಳು. 'ನನ್ನ ಕೈಯನ್ನು ನೋಡುತ್ತಲೇ, ನನ್ನ ರಹಸ್ಯವನ್ನೆಲ್ಲಾ ಕ್ಷಣಮಾತ್ರದಲ್ಲಿ ಹೇಗೆ ಅರಿತನು?....ಓಹೋ! ನನ್ನ ಕೈಯಲ್ಲಿ ಮಹಾರಾಣಿಯ ಲಕ್ಷಣ ರೇಖೆಯುಂಟೆಂದು ನನ್ನ ತಾಯಿ ಹೇಳುತ್ತಿದ್ದಳು,' ಎಂದು ಗೊಣಗಿಕೊಳ್ಳುತ್ತ ತನ್ನ ಹಸ್ತವನ್ನು ತಾನೇ ನೋಡಿಕೊಳ್ಳುತ್ತಿದ್ದಳು.

ಅತ್ತ ಜೋಯಿಸನು ಹೊರಗಿನ ಜನರನ್ನೆಲ್ಲಾ ತಕ್ಕ ಮಾತಿನಿಂದ ಕಳುಹಿಸಿಕೊಟ್ಟು, ಹೊರಬಾಗಿಲಿನಲ್ಲಿ ಬಲವಾದ ಕಾವಲಿಗರನ್ನಿಟ್ಟು, ಕೈಯಲ್ಲೊಂದು ದೊಣ್ಣೆಯನ್ನು ಹಿಡಿದುಕೊಂಡು ಮೆಲ್ಲನೆ ಬಾಗಿಲು ತೆರೆದನು. ಆದರೆ ಅವನು ಊಹಿಸಿದಂತೆ, ಆ ಹೆಂಗಸು ಏನೂ ಅಪಾಯಕಾರಿಣಿಯಾಗಿ ಕಾಣದೆ, ಪಾಪದವಳಂತೆ ಕುಳಿತಿರುವುದನ್ನು ನೋಡಿ, ತನ್ನೊಳಗೆ ತಾನೇ ನಾಚಿಕೊಂಡು, ಒಳಹೊಕ್ಕು ದೊಣ್ಣೆಯನ್ನು ಬದಿಗಿಟ್ಟು, ಬಾಗಿಲು ಹಾಕಿಕೊಂಡನು.

"ಫಕ್ಕನೆ ಹಾರಿ ಓಡಿದಿರೇಕೆ ಸ್ವಾಮಿ? ಮತ್ತೀಗ ದೊಣ್ಣೆಗಿಣ್ಣೆ. ಅಬ್ಬ! ನಾನೇನು ಹುಲಿಯೆ? ಹಾವೆ?" — ಹುಲ್ಲಿನವಳ ಈ ಕೆಣಕು ಮಾತನ್ನು ಕೇಳಿಯಂತೂ ಜೋಯಿಸನಿಗೆ ಮತ್ತಷ್ಟು ನಾಚಿಕೆಯಾಯಿತು. ಆದರೆ ಅವನು ತುಟಿಯಮೇಲೆ ಮುಗುಳುನಗೆಯನ್ನಾಡಿಸುತ್ತ– "ಹೆದರಿಬಿಟ್ಟೆಯೇನಮ್ಮ? ಮನ್ನಿಸಿಬಿಡು. ಪತ್ತೇದಾರಿಣಿಯಾದ ನಿನ್ನ ಗುಟ್ಟು ಬಹಿರಂಗವಾಗಬಾರದೆಂತಲೇ ಎಲ್ಲಾ ಭದ್ರಪಡಿಸಿಕೊಂಡು ಬಂದೆ. ಹುಂ. ನಿನ್ನ ವೃತ್ತಾಂತವನ್ನು ಇದ್ದುದು ಇದ್ದಹಾಗೆಯೇ ಹೇಳಿಬಿಡುತ್ತೇನೆ. ನಾನು ಕೇಳುವ ಕಾಣಿಕೆಯನ್ನು ಕೊಡಬೇಕು" ಎನ್ನುತ್ತಾ ಅವಳ ಮುಂದೆ ಕುಳಿತನು.

ಹುಲ್ಲಿನವಳು ಕೌತುಕದಿಂದ "ಅದೇನು ಕಾಣಿಕೆಯೋ?"

"ನಿನ್ನ ಬೆರಳಿನಲ್ಲಿರುವ ಈ ಉಂಗುರವನ್ನು ನನಗೆ ಕೊಡಬೇಕು."

"ಈ ಉಂಗುರ?"

ಹುಲ್ಲಿನವಳಿಗೆ ಈಗ ತಾನೇ ಸತ್ಯವು ಹೊಳೆದು ಮೋಸಹೋದಂತೆ

ಅಚ್ಚರಿಗೊಂಡಳು. ಆ ಉಂಗುರದ ಮಹತ್ವವು ಈಗಷ್ಟೇ ಅವಳಿಗೆ ಗೊತ್ತಾದುದು.

ಜೋಯಿಸನು ಅವಳನ್ನು ಮುಂದೆ ಮಾತಾಡಗೊಡದೆ, "ಹೌದು, ಇದೇ ನನಗೆ ಬೇಕು. ನೀನು ಸುಲಭವಾಗಿ ಕೊಡಲಾರೆ ಎಂದೂ ನಾನು ಬಲ್ಲೆ. ಎಲೆ ಚತುರೆ! ನನ್ನನ್ನು ಹಿಡಿದುಕೊಡುವುದಾಗಿ ನೀನೇ ಜಂಭ ಹೊಡೆದುಕೊಂಡು ಬಂದೆಯೋ, ಅಲ್ಲ ಆ ಕೃಷ್ಣದೇವನೇ ನಿನ್ನನ್ನು ಕಳುಹಿಸಿದನೊ?"

"ಎಲೆಲ! ನನ್ನನ್ನು ಯಾರೆಂದು ತಿಳಿಯುವಿರಿ ಸ್ವಾಮಿ?"

"ಚೆನ್ನಾಗಿ ತಿಳಿದೆ. ವಿಜಯನಗರದ ರಾಜಚಿಹ್ನೆಯಿರುವ ಈ ಉಂಗುರವೇ ನಿನಗೂ ಆ ರಾಯನಿಗೂ ಇರುವ ಸಂಬಂಧವನ್ನು ಹೇಳುತ್ತಿದೆ."

ಹುಲ್ಲಿನವಳು ತನ್ನ ಉಂಗುರವನ್ನು ಇನ್ನೊಮ್ಮೆ ನೋಡಿ, ಎದ್ದ ಅಚ್ಚರಿಯನ್ನು ಬಚ್ಚಿಟ್ಟುಕೊಂಡು, ಮಂದಹಾಸದಿಂದ ನಗುತ್ತ, "ಓಹೊ! ಖಂಡಿತವಾಗಿ ನೀವು ಮೋಸಹೋದಿರಿ. ಈ ಉಂಗುರವು ಹೇಗೆ ನನ್ನ ಕೈಸೇರಿತೆಂಬುದನ್ನರಿಯದೆ ನೀವು ಮಾತಾಡುತ್ತೀರಿ. ಅಂತೂ ನೀವೀಗ ಕೃಷ್ಣದೇವನ ಶತ್ರುವೆಂಬುದನ್ನು ಸೂಚಿಸಿಬಿಟ್ಟಿರಿ. ಆದ್ದರಿಂದ ನನ್ನ ನಿಜವೃತ್ತಾಂತವನ್ನು ನಿಮ್ಮೊಡನೆ ಹೇಳಬಹುದೆಂಪಾಯಿತು. ನಾನೂ ನಿಮ್ಮ ಹಾಗೆಯೇ ಆ ಘಾತಕ ಕೃಷ್ಣದೇವನ ಕಟು ವೈರಿ!"

"ಆ! ನನ್ನ ಮೇಲೆ ಕಲ್ಪನೆಯ ಬಲೆ ಬೀಸುವಿಯಾ?"

"ನಿಮ್ಮ ಮೇಲೆ ಬಲೆ ಬೀಸಿ ನನಗೇನಾಗಬೇಕು ಸ್ವಾಮಿ? ಮೊದಲು ನೀವು ಯಾರೆಂಬುದೇ ನಾನು ಅರಿಯೆ. ಯಾರೋ ದೊಡ್ಡ ಜೋಯಿಸರೆಂದು ಕೇಳಿ ಎಲ್ಲರಹಾಗೆ ಇಲ್ಲಿಗೆ ಬಂದೆ. 'ಕಳ್ಳನ ಜೀವ ಹುಳ್ಳಹುಳ್ಳಗೆ' ಎಂಬ ಹಾಗೆ ನೀವಾಗಿಯೇ ನಿಮ್ಮ ಕಪಟ ವೇಷವನ್ನು ಸೂಚಿಸಿಬಿಟ್ಟಿರಿ. ಸ್ವಾಮಿ, ನೀವು ಊಹಿಸುವಂತೆ ನಾನು ನಿಜವಾಗಿ ನಿಮ್ಮ ಅಹಿತಳಾಗಿದ್ದರೆ, ನೀವೀಗ ಅಪಾಯದಲ್ಲಿಯೇ ಸಿಕ್ಕಿರುತ್ತಿದ್ದಿರಿ!"

"ಎಚ್ಚರದಿಂದ ಮಾತಾಡಮ್ಮ—ನೀನು ನನ್ನ ಬಂದಿಯೆಂಬುದನ್ನು

ಅರಿತು ಎಚ್ಚರದಿಂದ ಮಾತಾಡು!"

"ಓಹೋ! ಓಹೊ! ಎಚ್ಚರೆಚ್ಚರ ಜೋಯಿಸರೆ! ನೀವೂ ನಿಮ್ಮ ಈ ಮನೆಯೂ, ಪರಿವಾರವೂ, ನನ್ನ ಅಜ್ಞಾತ ಬಂಧುಗಳಿಂದ ಮುತ್ತಲ್ಪಟ್ಟಿದೆಯಲ್ಲಾ!"

"ಏನೇನು? ಯಾರು-ಯಾರು-ಯಾರು ನೀ-ನು?" ಜೋಯಿಸನು ಬೆದರಿಬಿದ್ದನು.

"ಕೇಳಿರುವಿರಾ ರಾಣೀ ಅಜ್ಞಾತಾದೇವಿಯ ಹೆಸರನ್ನು?"

"ಹಾ! ರಾಣೀ ಅಜ್ಞಾತಾ! ನೀನು?"

ಹುಲ್ಲಿನವಳು ಗಂಭೀರಭಾವದಿಂದ ತಲೆದೂಗಿದಳು. ರಾಣಿಯ ಶ್ರೀಮದ್ಗಾಂಭೀರ್ಯವೇ ಅವಳ ಮುಖದಲ್ಲಿ ಲೇಪನವಾಯಿತು. ಜೋಯಿಸನು ಟಕಮಕನೆ ಅವಳ ಮುಖವನ್ನು ನೋಡುತ್ತ "ನೀನೇ ಏನು ಆ ಯಶಸ್ವಿನಿ? ಕರ್ಣಾಟಕ ಪ್ರಾಂತವಷ್ಟೇ ನಿನ್ನ ಕರ್ಮಭೂಮಿಯೆಂದು ಕೇಳಿದ್ದೆ. ಈಗ ಆಂಧ್ರಪ್ರಾಂತಗಳಿಗೂ ಕಾಲು ಚಾಚಲಾರಂಭಿಸಿರುವಿಯಾ?"

"ನಮ್ಮ ಅಭಿವೃದ್ಧಿಯ ಲಕ್ಷಣವಿದು!"

"ಈಗ ನಿನ್ನ ಉದ್ದೇಶ ಬರೀ ಕೊಳ್ಳೆಯೋ ಅಥವಾ ರಾಜಕೀಯವೊ?"

"ಅದೆಲ್ಲಾ ನಾನೇ ಹೇಳಿದರೆ ನಿಮ್ಮ ಜೋತಿಷ್ಯದ ಪ್ರಭಾವಕ್ಕೆ ಬೆಲೆಯೇನಿದೆ? ನೋಡಿ ನೀವೇ"

ಅವಳು ಚಾಚಿದ ಹಸ್ತದ ರೇಖೆಗಳನ್ನು, ಈ ಬಾರಿ ಜೋಯಿಸನು ನಿಜವಾಗಿಯೂ ಪರೀಕ್ಷಿಸಿ "ಆಹಾ! ಇದು ವಿಧವೆಯ ಹಸ್ತವೇ ಅಲ್ಲ! ಮಹಾರಾಜ್ಞಿಯ ಹಸ್ತ!" ಎಂದು ಅವಳ ಮುಖವನ್ನು ಆಶ್ಚರ್ಯದಿಂದ ನೋಡಿದನು.

"ಆಶ್ಚರ್ಯವೇನಿದೆ? ರಾಣಿ ಎಂಬ ಬಿರುದು ನನಗೆ ಉಂಟೇ ಉಂಟಲ್ಲ?"

"ಹೌದು. ರಾಣಿ ಬಿರುದಿನೊಂದಿಗೆ ಈ ಉಂಗುರವೂ ಇರುವುದರಿಂದ ರಾಜಕೀಯಕ್ಕೂ ಕೈ ಹಾಕಿರುವಿಯೆಂದಾಯಿತು."

"ಸುಳ್ಳಲ್ಲ, ನಾನು ವಿಜಯನಗರದ ರಾಯನ ಮೇಲೆ ಹಗೆ ತೊಟ್ಟ ಸರ್ಪಿಣಿಯಾಗಿದ್ದೇನೆ!"

"ನಂಬಲಾರೆ. ಕಟಕಸೇನೆಗೆ ವಿಘ್ನವನ್ನುಂಟು ಮಾಡಿ, ಉದಯಗಿರಿಯ ಯುದ್ಧದಲ್ಲಿ ರಾಯನಿಗೆ ಸಹಾಯ ಮಾಡಿದ್ದು ನೀನೇ ಅಲ್ಲವೆ?"

"ಆ ರಾಜಕೀಯಕ್ಕೂ ನಮಗೂ ಏನೂ ಸಂಬಂಧವಿಲ್ಲ. ಕೊಳ್ಳೆ ಹೊಡೆಯುವುದೊಂದೇ ನಮ್ಮ ಉದ್ದೇಶ. ಗಜಪತಿ ಸೈನ್ಯದಲ್ಲಿ ಕೊಳ್ಳೆ ಹೊಡೆದ ಹಾಗೆಯೇ, ವಿಜಯನಗರದ ಸೇನೆಯಲ್ಲಿಯೂ ಅಪಾರವಾದ ಕೊಳ್ಳೆ ಹೊಡೆದಿದ್ದೇವೆ."

"ಓಹೊ! ಹೋಗಲಿ. ಈ ಮುದ್ರೆಯುಂಗುರವು ನಿನಗೆ ಹೇಗೆ ಸಿಕ್ಕಿತು?"

"ಉಪಾಯದಿಂದ. ನನಗೊಬ್ಬ ಅಣ್ಣನಿದ್ದಾನೆ, ಅನೇಕ ಮದ್ದು ಮಾಯೆ, ಮಂತ್ರಗಳನ್ನು ಬಲ್ಲವನು. ಅವನು ಚಾತುರ್ಯದಿಂದ ಇದನ್ನು ತಂದು ನನಗೆ ಕೊಟ್ಟಿದ್ದಾನೆ. ಇದು ಅಪಹೃತವಾಯಿತೆಂದು ಕೂಡ ಆ ಮೂಢ ರಾಯನಿಗೆ ಗೊತ್ತೇ ಇಲ್ಲ. ಆ ನನ್ನ ಅಣ್ಣನನ್ನು ನಾನು ಉದಯಗಿರಿಯ ಬೊಕ್ಕಸವನ್ನು ಹರಣ ಮಾಡಿಸಲಿಕ್ಕಾಗಿ ಕಳುಹಿಸಿದ್ದೆ. ಹೇಗೋ ಅಚಾತುರ್ಯದಿಂದ ಅಲ್ಲಿ ಸಿಕ್ಕಿ ಬಿದ್ದಿದ್ದಾನೆ. ಆತನನ್ನು ಬಿಡಿಸಿಕೊಂಡು ಹಾಗೆಯೇ ಬೊಕ್ಕಸವನ್ನು ಕೂಡ ಕಳವು ಮಾಡಿಕೊಂಡು ಹೋಗಬೇಕೆಂದೇ ನಾನು ಬಂದದ್ದು."

"ಭಲೆ! 'ಸೋರುವ ಮನೆಯಲ್ಲಿ ಸಿಕ್ಕಿದ್ದೇ ಲಾಭ' ಎಂಬ ಹಾಗೆ ಯುದ್ಧದ ಮಧ್ಯೆ ಕದ್ದುಕೊಳ್ಳಲು ತೂರಿಕೊಂಡಿರುತ್ತೀ. ಹಳ್ಳೀ ಬೇಡಳ ವೇಷದಿಂದ ಏನು ಮಾಡುತ್ತೀ?"

"ಅದೆಲ್ಲಾ ಸಮಯಾನುಸಾರವಾಗಿ ನೋಡಬೇಕು. ಹೀಗೆಯೇ ದುರ್ಗಕ್ಕೆ ಹೋಗುತ್ತಾ ಬರುತ್ತಾ ಇದ್ದು, ಏನಾದರೂ ಎಡೆ ಹುಡುಕ ಬೇಕು. ಅದಿರಲಿ, ತಮಗೆ ಈ ಉಂಗುರವು ಯಾವ ಮಹಾ ಕಾರ್ಯ ವನ್ನು ಸಾಧಿಸುವುದಕ್ಕೊ?"

ಜೋಯಿಸನು ಸ್ವಲ್ಪ ಹೊತ್ತು ಯೋಚಿಸಿ ಸ್ಥಿರಮನಸ್ಕನಾಗಿ

"ಬಹಳ ಚಾಣಾಕ್ಷಳಾದ ನೀನು ನಿನ್ನ ರಹಸ್ಯವನ್ನೆಲ್ಲಾ ನನ್ನೊಡನೆ ಹೇಳುವುದನ್ನು ನೋಡಿದರೆ, ನಾನು ಯಾರೆಂದು ನಿನಗೆ ಗೊತ್ತಾಗಿರ ಬೇಕು. ನಿಜವೆ?"

"ಸುಮಾರಾಗಿ ನಿಜ. ಊಹಿಸುವುದಾದರೆ, ಈಗ ಕೃಷ್ಣದೇವ ರಾಯನು ಉದಯಗಿರಿಯನ್ನು ಹಿಡಿದುಕೊಂಡು, ಗಜಪತಿರಾಜರನ್ನು ಸಕುಟುಂಬವಾಗಿ ಸೆರೆ ಹಿಡಿದೊಯ್ದಿರುವನಲ್ಲವೆ? ಆ ರಾಜಕುಟುಂಬಕ್ಕೆ ಸಂಬಂಧಪಟ್ಟವರಲ್ಲಿ ತಾವೊಬ್ಬರಿರಬಹುದು. ಕೈತಪ್ಪಿದ ಉದಯ ಗಿರಿಯನ್ನು, ಪುನಃ ವಶಪಡಿಸಿಕೊಳ್ಳಲಿಕ್ಕಾಗಿ ನೀವು ಈ ಕಪಟವೇಷ ಹಾಕಿರಬೇಕು."

"ಹೂಂ! ನಾನು ಕಪಟ ಜೋಯಿಸನಾದರೆ ನೀನು ಊಹನೆಯ ಜೋಯಿಸಳು! ಆದರೆ ಚೋರ ರಾಣಿಯಾದ ನೀನು ವಿಜಯನಗರಕ್ಕೆ ಮಾತ್ರವೇ ಅಹಿತಳಲ್ಲ; ನಮಗೂ ಅಹಿತಳೇ. ನಮ್ಮ ರಾಜ ಬೊಕ್ಕಸ ವನ್ನೇ ಕಳವು ಮಾಡಲು ಬಂದಿರುತ್ತೀ. ನಿನ್ನನ್ನು ಹಿಡಿದು ದಂಡಿ ಸುವುದೇ ನನಗೆ ನ್ಯಾಯವೂ ಧರ್ಮವೂ ಆಗಿದೆ."

"ಆದರೆ ನನ್ನದೊಂದು ಹುಂಕಾರಕ್ಕೆ ಕಾದುಕೊಂಡಿರುವ ನನ್ನ ಬಂಧುಗಳ ಬಿರುಗಾಳಿಯಿಂದ, ನಿಮ್ಮ ವೇಷವೆಲ್ಲ ಹಾರಿಹೋಗಿ, ನಿಮ್ಮ ಶತ್ರುವಿನ ಕೈಗೆ ನೀವು ಬಿದ್ದೀರಿ ಎಂಬುದನ್ನೂ ನೀವು ಯೋಚಿಸಬೇಕಾಗಿದೆ!"

"ನಿನ್ನ ಗುಮ್ಮನ ಬೆದರಿಕೆ ಹಾಗಿರಲಿ. ಮುಖ್ಯ ನೀನು ಒಳ್ಳೆಯ ಮಾತಿನಲ್ಲಿ ಈ ಉಂಗುರವನ್ನು ನನಗೆ ಕೊಟ್ಟರಷ್ಟೇ ನಿನಗೆ ವಿಮೋಚನೆ!"

"ನಾನೂ ಅದೇ ಹೇಳಲಿಕ್ಕಿರುವೆ. ನಿಮ್ಮ ಕಾರ್ಯದೊಂದಿಗೆ ನನ್ನ ಕಾರ್ಯವೂ ನೆರವೇರುವುದಾದರೆ ಮಾತ್ರ ಈ ಉಂಗುರದ ಉಪಯೋಗವಾಗಬಹುದು."

"ನಿನ್ನ ಕಾರ್ಯವೆಂದರೆ—ಬೊಕ್ಕಸದ ಹರಣ?"

"ಅದೊಂದು ಮತ್ತೂ, ತಿಮ್ಮರಸ-ಕೃಷ್ಣದೇವರ ಮೇಲೆ ಹಗೆ ತೀರಿಸುವ ಕಾರ್ಯ ಕೂಡಾ."

"ಅಬ್ಬಬ್ಬ! ಅಷ್ಟು ಶಕ್ತಿ ಯಃಕಶ್ಚಿತ ಮುದುಕನಾದ ನನಗೆಲ್ಲಿಯದಮ್ಮ?"

"ಇನ್ನು ಮುಚ್ಚುಮರೆ ಏಕೆ ಸ್ವಾಮಿ? ಮಹಾಮಂತ್ರಿಯ ಲಕ್ಷಣಗಳೆಲ್ಲಾ ನಿಮ್ಮಲ್ಲಿವೆ. ಗಜಪತಿ ಹಿತೈಷಿಗಳೆಂದು ಪ್ರಖ್ಯಾತರಾದ ರಾಮಯಾಮಾತ್ಯರಲ್ಲವೇ ನೀವು?"

ಜೋಯಿಸನು ಚಕಿತನಾದನು. ಅವಳ ಊಹನಾಸಾಮರ್ಥ್ಯಕ್ಕೆ ಮೆಚ್ಚಿ, "ಶಾಭಾಸ್! ನಿನ್ನ ತರ್ಕಶಾಸ್ತ್ರ ಪಾರೀಣತೆಯನ್ನು ಎಷ್ಟು ಕೊಂಡಾಡಿದರೂ ಸಾಲದು!"

"ಹಾಗಾದರೆ, ಮಂತ್ರಿ ಚೂಡಾಮಣಿಗಳೆ, ದೇವರೇ ಇಂದು ಈ ಅಕಲ್ಪಿತ ಯೋಗವನ್ನು ಕಲ್ಪಿಸಿದನು. ಇದು ವಿಜಯನಗರದ ರಾಜಮಂತ್ರಿಗಳಿಗೆ ವೈರಯೋಗವಾಗಿ ಪರಿಣಮಿಸಲಿ! ನಿಮ್ಮ ಬಲವೂ ನನ್ನ ಬಲವೂ ಒಂದಾಗಿ ಸೇರಿದ ಮೇಲೆ, ನನ್ನ ಹಗೆ ತೀರಲು ಇನ್ನು ತಡವಿಲ್ಲ."

"ನಾಳೆ ನನಗೆ ದುರ್ಗಾಧೀಶನ ನಿಮಂತ್ರಣವೇ ಬಂದಿದೆ. ಆಗಲೇ ........ತಡೆ, ಕತ್ತಲಾಯಿತು. ದೀಪವನ್ನು ತರುವೆನು."

ರಾಮಯಾಮಾತ್ಯನು ಎದ್ದನು.

"ನಾನೂ ಹೋಗಿ ನನ್ನ ಸಂಗಡಿಗರನ್ನು ಕರೆದುಕೊಂಡು ಬರುವೆನು" ಎಂದು ಅಜ್ಞಾತಾ ದೇವಿಯೂ ಎದ್ದಳು.

೨

ಮರುದಿನ ಬೆಳಗಾದ ಮೇಲೆ ಜೋಯಿಸನ ಸವಾರಿ ಬಹಳ ಆಡಂಬರದಿಂದ ದುರ್ಗಾರೋಹಣ ಮಾಡಿತು. ರಾಮನಾಯಕನು ಆ ಜೋಯಿಸನನ್ನು ಪರೀಕ್ಷಿಸಬೇಕೆಂದೇ, ಪಲ್ಲಕ್ಕಿ ಕಳುಹಿಸಿ ಕರೆಗೊಟ್ಟಿದ್ದನು. ಅಲ್ಲದೆ ಸ್ವಾಭಾವಿಕವಾಗಿ ಅವನಿಗೆ ಜ್ಯೋತಿಷ್ಯದಲ್ಲಿ ಬಹಳ ಕುತೂಹಲವೂ ಇತ್ತು. ನಿಜವಾಗಿ ಜೋಯಿಸನು ವೇಷಧಾರಿಯೇ ಆದರೂ ಅವನಿಗೆ ಕಿಂಚಿತ್ ಜ್ಯೋತಿಷ್ಯ ಜ್ಞಾನವೂ ಇಲ್ಲದಿಲ್ಲ. ಅಂತೆಯೇ ಒಳ್ಳೇ ಕುಶಲ ಜೋಯಿಸನಂತೆ ಗ್ರಹಕುಂಡಲಿಯನ್ನು ಬರೆದು, ಮಂಡಲಿಯನ್ನು ಬರೆದು, ಮಂಡಲಿಯಲ್ಲಿ ಕವಡೆಗಳನ್ನು ಓಡಾಡಿಸಿ, ಗುಣಿಸಿ ಮಣಿಮಣಿಸಿ, ರಾಮನಾಯಕನು ತಂದಿಟ್ಟ ಅವನ ಮತ್ತು ಅವನ ಹೆಂಡತಿ ಮಕ್ಕಳ ಜಾತಕಗಳನ್ನು ನೋಡಿ, ಶುಭಾಶುಭಗಳನ್ನೂ ಬರೆದನು. ನಾಯಕನ ಹಸ್ತರೇಖೆಗಳನ್ನು ನೋಡಿ ಅವನ ಮುಖಕ್ಕೆ ತಕ್ಕಹಾಗೆ ಹೇಳುತ್ತ, ಅವನನ್ನು ಉಬ್ಬಿಸಿ, ತಗ್ಗಿಸಿ, ಸಂದೇಹದಲ್ಲಿ ಸಿಕ್ಕಿಸಿ, ನಂಬಿಸಿ, ಆಶ್ಚರ್ಯಪಡಿಸಿ ಮೆಚ್ಚಿಸಿದನು. ಕಟ್ಟ ಕಡೆಗೆ ನಾಯಕನು "ಜ್ಯೋತಿಷ್ಯ ಶಿರೋಮಣಿಗಳೆ, ನಾನು ಇನ್ನೂ ನಿಮ್ಮನ್ನು ಪರೀಕ್ಷಿಸುವುದಕ್ಕಾಗಿ ಮನ್ನಿಸಿರಿ. ಈದಿನ ಸಾಯಂಕಾಲವಾಗುವುದರೊಳಗೆ, ನನಗೆ ಸಂಬಂಧಿಸಿ ಏನೇನು ಸಂಭವಿಸೀತೆನ್ನುವುದನ್ನು ಹೇಳಬಲ್ಲಿರಾ?" ಎಂದನು.

ಈ ಪ್ರಶ್ನೆಯೇ ಜೋಯಿಸನಿಗೂ ಬೇಕಾಗಿತ್ತು.

"ನೋಡೋಣ, ಜ್ಯೋತಿಃ ಪ್ರಕಾಶಕಾರಕನಾದ ಸೂರ್ಯನು ಅಭ್ಯುದಯಕ್ಕೇರುವ ಕಾಲವಾದುದರಿಂದ ಸಾಧ್ಯವಾದೀತು" ಎಂದಂದು ಮತ್ತೆ ನಾಯಕನ ಕೈಯನ್ನು ಹಿಡಿದು ಪರೀಕ್ಷಿಸಿ, ತಲೆದೂಗಿ "ಇಂದು, ಇನ್ನು ಸ್ವಲ್ಪ ಹೊತ್ತಿನಲ್ಲಿ ತಮಗೆ, ವಿಜಾತೀಯ ನೂತನಾಗತ ಅತಿಥಿ ಸತ್ಕಾರದ ಯೋಗವುಂಟು! ನಿಮಗೆ ಅವನಿಂದ ಮೇಲಾಗುವುದು!" ಎಂದನು.

ನಾಯಕನು ಸೋಜಿಗದಿಂದ–"ಆಹ! ಈ ಭವಿಷ್ಯವು ನಿಜವಾದರೆ, ನಿಮಗೆ ನಮ್ಮ ಸಾರ್ವಭೌಮರಿಂದಲೇ ಯೋಗ್ಯ ಬಹುಮಾನವನ್ನು ಕೊಡಿಸುವೆನು. ರಾಯರ ಆಸ್ಥಾನ ವಿದ್ವನ್ಮಂಡಲಿಯಲ್ಲಿ ನಿಮ್ಮನ್ನೂ ಒಬ್ಬನಾಗಿ ಬೆಳಗಿಸುವೆನು!" ಎಂದನು.

"ಏನೋ ಎಲ್ಲಾ ಭಗವಾನ್ ಮತ್ತು ಭವದೀಯ ಅನುಗ್ರಹ."

ಕುತೂಹಲದಿಂದ ನಿರೀಕ್ಷಿಸುತ್ತಿದ್ದಂತೆಯೇ ಹೊತ್ತು ತಿರುಗಿತು. ಅಪರಾಹ್ನವಾಯಿತು. ಆಗ ದುರ್ಗದ ಮುಖ್ಯದ್ವಾರರಕ್ಷಕರಲ್ಲೊಬ್ಬನು ಕುದುರೆಯನ್ನು ದೌಡಾಯಿಸಿಕೊಂಡು ಅಲ್ಲಿಗೆ ಬರುವುದು ಕಾಣಿಸಿತು. ಅವನು ಬಂದು ಇಳಿಯುವಷ್ಟರಲ್ಲಿ "ಏನು?" ಎಂದು ನಾಯಕನು ಆತುರದಿಂದ ಕೇಳಿದನು.

"ಸಾರ್ವಭೌಮರ ಕಡೆಯಿಂದ ಉನ್ನತಾಧಿಕಾರಿಗಳೊಬ್ಬರು ಸೇವಕ ಪರಿವಾರದೊಂದಿಗೆ ಬಿಜಯಮಾಡಿಸಿದ್ದಾರೆ. ಇದೋ, ಅವರ ಗುರುತು" ಎಂದು ಆ ಭಟನು ಒಂದು ಪತ್ರದ ತುಂಡನ್ನು ನಾಯಕನ ಕೈಗಿತ್ತನು. ಅದರಲ್ಲಿ 'ಮೆ ಕ್ರಿಸ್ತೊವಾ ಡಿ ಫಿಗರಿಡೊ, ಇವರ ಕಾರ್ಯದರ್ಶಿ ಲಾರ್ಡ್ ಲೂಯಿಸ್-ಸಾರ್ವಭೌಮ ಕೃಷ್ಣದೇವರಾಯರಿಂದ ನಿಯಮಿಸಲ್ಪಟ್ಟ ಉದಯಗಿರಿ ದುರ್ಗ ಪರೀಕ್ಷಾಧಿಕಾರಿ' ಎಂದಿತ್ತು. ಈ ಒಕ್ಕಣೆಯ ಬುಡದಲ್ಲಿ ಪುಟ್ಟದೊಂದು ವರಾಹ ಚಿಹ್ನವೂ, ಅದರ ಸುತ್ತು 'ಶ್ರೀ ವಿರೂಪಾಕ್ಷ' ಎಂಬ ಅಂಕಿತವೂ ಇತ್ತು. ಇದೇ ಆಗಿನ ರಾಜಮುದ್ರೆ.

ನಾಯಕನು ಸಂಭ್ರಮದಿಂದ ಜೋಯಿಸನನ್ನು ಶ್ಲಾಘಿಸಿ,

ಆ ನೂತನಾಗತನನ್ನು ಇದಿರುಗೊಳ್ಳಲು ಸಿದ್ಧನಾದನು. ನೋಡ ನೋಡುತ್ತಿರಲು ಹತ್ತು ಹನ್ನೆರಡುಮಂದಿ ಸವಾರರೊಂದಿಗೆ, ದೊಡ್ಡದೊಂದು ಕಂದು ಕುದುರೆಯ ಮೇಲೇರಿಕೊಂಡು ವಿದೇಶೀಯ ಸುಂದರ ಯುವಕನೊಬ್ಬನು ಬರುತ್ತಿದ್ದನು. ಬಹಳ ನೂತನನು! ತಲೆಯಲ್ಲಿ ದೊಡ್ಡದೊಂದು ಮರಿಗೇ ಟೋಪಿ; ಅದರ ನೆರಳು ಗ್ರಹಣ ಹಿಡಿದ ಹಾಗೆ ಅವನ ಮುಖಚಂದ್ರದ ಮೇಲೆ ಕವಿದುಕೊಂಡಿತ್ತು. ಕೃತ್ರಿಮವಾದ ಪಕ್ಷಿಯ ಗರಿಗಳ ಕುಂಚದಿಂದ ಆ ಟೋಪಿ ಒಂದು ಕಿರೀಟದಂತೆ ಒಪ್ಪುತ್ತಿತ್ತು. ಅವನ ಗೌರಾಂಗವನ್ನು ಫಳಫಳನೆ ಹೊಳೆಯುವ ಕರೀ ಕೋಟು ಆಚ್ಛಾದಿಸಿತ್ತು. ಅದರ ಜ್ವಲಿಸುವ ಗುಂಡಿಗಳೂ, ಎದೆಯಗಲಕ್ಕೆ ನೀಡಿಕೊಂಡಿರುವ ವಕ್ಷಾಲಂಕರಣಗಳೂ ಥಳಥಳಿಸುತ್ತಿದ್ದುವು. ಭುಜ, ಕೈ, ಕೊರಳುಗಳಲ್ಲಿ ಸುವರ್ಣ ಪದಕಗಳು ತೊಳಗುತ್ತಿದ್ದುವು. ಎದೆ ಪಟ್ಟಿ, ನಡುಪಟ್ಟಿ, ನೇತಾಡುವ ಒರೆ, ಇವುಗಳಿಂದ ಅವನು ವೀರಯೋಧನಂತೆ ಕಾಣುತ್ತಿದ್ದನು. ಆಜಾನುಬಾಹುವಾದ ದೊಡ್ಡ ಕಟ್ಟಾಳಾಗಿಲ್ಲದಿದ್ದರೂ, ಗಂಭೀರಾಕೃತಿಯ ತೇಜಸ್ವಿಯಾಗಿ, ಸೌಂದರ್ಯ, ಸೌಕುಮಾರ್ಯಗಳಿಂದ ಎಲ್ಲರ ಕಣ್ಮನಗಳನ್ನು ಸೆಳೆಯುವಂತಿದ್ದನು.

ಅವನ ಸೇವಕ ಪರಿವಾರದೊಂದಿಗೆ, ಕೆಲವು ಪೆಟ್ಟಿಗೆ ಗಂಟು ಮೂಟೆಗಳೂ ಬಂದಿದ್ದುವು.

ಲಾರ್ಡ್ ಲೂಯಿಸನು ಗಂಭೀರ ಲಾಘವದಿಂದ ಉನ್ನತವಾದ ಕುದುರೆಯ ಮೇಲಿನಿಂದ ಕೆಳಗಿಳಿದಾಗ, ನಾಯಕನು ಮುಂದೆ ಹೋಗಿ ಅವನಿಗೆ ಹಸ್ತಲಾಘವನ್ನಿತ್ತನು. ಬಳಿಕ ಲೂಯಿಸನು ಜೇಬಿನೊಳಗಿನಿಂದ ತ್ರಿಕೋಣಾಕಾರವಾದೊಂದು ಪದಕವನ್ನು ತೆಗೆದು ನಾಯಕನಿಗೆ ತೋರಿಸಿದನು. ಅದು ವಿಜಯನಗರದ ಮುಖ್ಯ ರಾಜ್ಯಾಂಗ ವ್ಯಕ್ತಿಗೆ ರಾಯನಿಂದಲೇ ಕೊಡಲ್ಪಡುವ ಬಿಲ್ಲೆ. ಅದನ್ನು ನೋಡಿದಂತೆ ಮಾಡಿ ನಾಯಕನು ಅವನನ್ನು ಗೌರವದಿಂದ ಉಪಚರಿಸಿದನು.

ಲೂಯಿಸನಿಗೆ ದ್ರಾವಿಡ ಭಾಷೆಗಳೊಂದೂ ಬಾರದು. ಅದಕ್ಕಾಗಿ ಒಬ್ಬ ದ್ವಿಭಾಷಿಯೂ ಅವನೊಂದಿಗಿದ್ದನು. ಆ ದ್ವಿಭಾಷಿಯ ಮಾಧ್ಯಕ

ವಾಗಿಯೇ ನಾಯಕ ಲೂಯಿಸರೊಳಗೆ ಮಾತುಕತೆಗಳು ನಡೆದುವು. ಲೂಯಿಸನು, ರಾಜಾ ಕೃಷ್ಣದೇವರಾಯನ ಆಜ್ಞಾಪತ್ರವನ್ನು ರಾಮ ನಾಯಕನ ಕೈಗೆ ಸಮರ್ಪಿಸಿದನು, ಅದರಲ್ಲಿ,-

ಉದಯಗಿರಿ ದುರ್ಗದ ನಕಾಶೆಯನ್ನು ಲಾರ್ಡ್ ಲೂಯಿಸರ ಕೈಯಲ್ಲಿ ಕೊಟ್ಟಿರುವುದೆಂತಲೂ, ಅದರಲ್ಲಿ ಗುರುತು ಮಾಡಲ್ಪಟ್ಟ ಸ್ಥಳ ದಲ್ಲಿಹಳೆಯ ಸುರಂಗವನ್ನು ಬಂದುಮಾಡಿ, ಹೊಸ ಮಾರ್ಗವನ್ನು ತೆರೆ ಯಿಸಲು ಅವರಿಗೆ ಬೇಕಾದ ಅನುಕೂಲಗಳನ್ನು ಒದಗಿಸಬೇಕೆಂತಲೂ, ರಾಯನು ನಾಯಕನಿಗೆ ಆಜ್ಞಾಪಿಸಿದ್ದನು. ಹಾಗೆಯೇ ಉದಯ ಗಿರಿಯ ಸೆರೆಯಲ್ಲಿರುವ ಮಾದರಸನೆಂಬವನು ಲೂಯಿಸನ ಸಹಚರ ನೆಂದು ಸಿದ್ಧವಾದುದರಿಂದ, ಅವನನ್ನು ಕೂಡಲೇ ಬಂಧಮುಕ್ತಮಾಡಿ, ಲೂಯಿಸರ ವಶಕ್ಕೆ ಒಪ್ಪಿಸತಕ್ಕುದೆಂದೂ, ಕಳಿಂಗ ವಿಜಯವು ಮುಕ್ತಾ ಯವಾಗಿ ನಡೆದ ಕರಾರಿನಂತೆ ಉದಯಗಿರಿಯ ಬಂದೀಖಾನೆಯಲ್ಲಿ ರುವ, ಐವತ್ತು ಮಂದಿ ಗಜ ಸೈನಿಕರನ್ನು ಮುಕ್ತಗೊಳಿಸಿ ಬಿಡತಕ್ಕು ದೆಂದೂ, ರಾಯನ ಆಜ್ಞೆಗಳು ಕಾಣುತ್ತಿದ್ದುವು.

ಈ ರಾಜಾಜ್ಞೆಗಳನ್ನು ನಾಯಕನು ಒಡನೇ ನೆರವೇರಿಸಿಬಿಟ್ಟನು. ಕಪಟ ಜೋಯಿಸನು ಸಮಯನೋಡಿ "ಇನ್ನೊಮ್ಮೆ ಬಂದು, ತಮ್ಮನ್ನು ಕಾಣುವೆನು" ಎಂದು ಹೇಳಿ ತನ್ನ ಸರಂಜಾಮುಗಳನ್ನೆತ್ತಿ ಕೊಂಡು ಹೊರಟನು, ಆಗ ಲೂಯಿಸನೂ ಜೋಯಿಸನೂ ಅರ್ಥ ವತ್ತಾದ ನೋಟದಿಂದ ನೋಡಿಕೊಂಡರು!

ಜೋಯಿಸನು ದುರ್ಗವನ್ನಿಳಿದು ಹೋಗುವಾಗ ಸೆರೆಮನೆಯಿಂದ ಮುಕ್ತರಾದ ಐವತ್ತುಮಂದಿ ಗಜಸೈನಿಕರನ್ನು ತನ್ನೊಂದಿಗೆ ಸಂಕಲಿಸಿ ಕೊಂಡನು.

ಹಾಗೆಯೇ ಸೆರೆಮನೆಯಿಂದ ಮುಕ್ತನಾದ ಕರೇ ಲಠ್ಠ ಧಾಂಡಿಗ ನೊಬ್ಬನು ಜೋಯಿಸನ ಜೊತೆಗಾರರನ್ನು ಕೂಡಿದನು. ಅವನೇ ಮಾದರಸ. ಜೊತೆಗಾರರು ಅವನ ಕಿವಿಯಲ್ಲಿ ಏನೋ ಊದಿದರು. ಆಗ ಮಾದರಸನು ಲೂಯಿಸನನ್ನು ನೋಡಿದ ನೋಟದಲ್ಲಿ ಭಯ, ಭಕ್ತಿ, ಗೌರವ, ವಿಶ್ವಾಸ ಮೊದಲಾದ ಭಾವಗಳು ತುಂಬಿ ತುಳುಕಿದವು.

ಆಮೇಲೆ ಲೂಯಿಸನು ಏನೋ ಯೋಚಿಸಿಕೊಂಡು ನಾಯಕನಿಗೆ ಹೇಳಿದನು. "ನಾನು ಇಲ್ಲಿಗೆ ಬಂದು ಸೇರಿದುದನ್ನೂ, ನೀವು ರಾಜಾಜ್ಞೆಯನ್ನು ಪಾಲಿಸಿದುದನ್ನೂ, ಕೊಂಡವೀಡು ಮೊಕ್ಕಾಂನಲ್ಲಿರುವ ರಾಯರಿಗೆ ಈಗಲೇ ಅರಿಕೆಯನ್ನು ಕಳುಹಿಸಿರಿ."

"ಹೌದು. ಸಮಯೋಚಿತವಾದ ಪ್ರೇರಣೆ" ಎಂದನು. ರಾಮನಾಯಕ.

೩

ವಿಶಾಲವಾದ ಉದಯಗಿರಿ ದುರ್ಗಮಂದಿರಗಳಲ್ಲಿ ನಕಾಶೆಯಲ್ಲಿ ಗುರುತಿಸಿರುವಂತೆ, ಬೊಕ್ಕಸದ ಪಕ್ಕದ ಅಂತರ್ಗೃಹವನ್ನೇ ಲೂಯಿಸನ ಬಿಡದಿಯಾಗಿ ಬಿಟ್ಟುಕೊಡಬೇಕಾಗಿತ್ತು. ಲೂಯಿಸನು ರಾತ್ರಿಯಲ್ಲಿ ರಾಮನಾಯಕನನ್ನು ಬರಮಾಡಿಕೊಂಡು, ಬೇಗನೇ ಕೆಲಸ ತೀರಿಸಿಕೊಂಡು ಹೋಗಬೇಕಾಗಿರುವುದರಿಂದ, ಈಗಲೇ ಸುರಂಗದ್ವಾರದ ಕೊಠಡಿಯನ್ನು ಪರೀಕ್ಷಿಸಬೇಕೆಂದು ಕೋರಿದನು. ಹಾಗೆಯೇ ನಾಯಕನು ಪಕ್ಕದ ಕೋಣೆಯ ಬಾಗಿಲನ್ನು ತೆರೆದು ತೋರಿಸಿದನು.

ದೀಪವು ಉರಿಸಲ್ಪಟ್ಟಿತು. ಉತ್ತರದ ಗೋಡೆಯಲ್ಲಿರುವ ಹಳೆಯ ಸುರಂಗದ್ವಾರದ ಶಿಲ್ಪಕೌಶಲಕ್ಕೆ ಮೆಚ್ಚಿ ಲೂಯಿಸನು ತಲೆಯೊಲಿದನು. ಹಾಗೆಯೇ ದಕ್ಷಿಣದ ಗೋಡೆಯಲ್ಲಿ ಕಾಣುವ ಆಳುದ್ದದ ವಿಷ್ಣುಪ್ರತಿಮೆಯನ್ನು ನೋಡಿ ತಲೆದೂಗುತ್ತ, “ಈ ಪ್ರತಿಮೆಯನ್ನು ಇಲ್ಲಿಂದ ಕದಲಿಸಿ ಹೊಸದ್ವಾರವನ್ನು ಇಲ್ಲಿ ತೆಗೆಯಬೇಕು” ಎನ್ನಲು ನಾಯಕನು ಬಹಳ ಆಶ್ಚರ್ಯಪಟ್ಟು, “ಆಹಾ! ನೀವು ಅಸಾಮಾನ್ಯರಾದ ಶಿಲ್ಪಕಲಾಭಿಜ್ಞರೇ ಸರಿ! ಈ ಪ್ರತಿಮೆ ಬೊಕ್ಕಸದ ಗುಪ್ತದ್ವಾರವೇ ಆಗಿದೆ!”

“ಹಾಗೇನು! ಬಹಳ ಬುದ್ಧಿವಂತಿಕೆಯೆ ಸರಿ! ದುರ್ಗಕ್ಕೆ ಅಪಾಯ ಬಂದಾಗ ಬೊಕ್ಕಸವನ್ನು ಪಾರುಗೊಳಿಸಲಿಕ್ಕೆ, ಸುರಂಗದ ಕೋಣೆಗೆ ಹೊಂದಿ ಗುಪ್ತ ದ್ವಾರವಿರಿಸಿದ್ದು ಹೊಗಳತಕ್ಕದ್ದಾಗಿದೆ. ಎಲ್ಲಿ

ಇದರ ರಚನಾ ಕೌಶಲವನ್ನಿಷ್ಟು ನೋಡೋಣ."

ನಾಯಕನು ತನ್ನ ಟೊಂಕದ ಗೊಂಚಲಿನಿಂದ ವಿಚಿತ್ರಾಕಾರವಾದೊಂದು ಕೀಲಿಯನ್ನು ತೆಗೆದು, ವಿಷ್ಣು ಪ್ರತಿಮೆಯ ಎದೆಯ ಮೇಲಿನ ಪದಕವನ್ನೆತ್ತಿ, ಅಲ್ಲಿರುವ ತೂತಿನಲ್ಲಿ ಹಾಕಿ ತಿರುಗಿಸಿ ಎಳೆದನು. ಆ ಪ್ರತಿಮೆ ಒಂದು ಬಾಗಿಲಿನಂತೆ ತೆರೆಯಿತು. ಲೂಯಿಸನು ಆಶ್ಚರ್ಯಪಡುತ್ತ, ಅದನ್ನು ಪರಿಶೀಲಿಸುವವನಂತೆ, ತಾನೇ ಎರಡು ಮೂರು ಬಾರಿ ತೆರೆದೂ ಮುಚ್ಚಿಯೂ, ಆಮೇಲೆ ಬೀಗವನ್ನು ಹಾಕಿ, ಕೀಲಿಕೈಯನ್ನು ನಾಯಕನ ಕೈಗೆ ಕೊಡುತ್ತ– "ಬಹಳ ವಿಚಿತ್ರವಾದ ರಚನೆ. ಒಟ್ಟಾರೆ ಈ ಮಂದಿರದಲ್ಲಿ ಎರಡು ಗುಪ್ತದ್ವಾರಗಳಿರುವುದರಿಂದ ಇನ್ನೊಂದನ್ನು ತೆರೆಯಲಾಗದು. ಅದನ್ನು ಕುರಿತು ನಾಳೆ ಯೋಚಿಸೋಣ. ಈಗ ಆಹಾ! ಚಂದ್ರಪ್ರಕಾಶವು ಎಷ್ಟು ಸೊಗಸಾಗಿದೆ. ಬನ್ನಿ, ಸ್ವಲ್ಪ ಹೊರಗೆ ತಿರುಗಾಡಿ ಬೆಟ್ಟದ ಯಾವ ಭಾಗದಲ್ಲಿ ಹೊರಗಿನ ಬಾಯಿಯನ್ನು ತೆರೆಯಬಹುದೆಂದು ಅಂದಾಜು ಹಾಕೋಣ." ಎಂದುದನ್ನು ದ್ವಿಭಾಷಿ ಪರಿವರ್ತಿಸಿ ಹೇಳುತ್ತಾ ಇರುವಾಗ, ನಾಯಕನು ಪ್ರತಿಮೆಗೆ ಬಲವಾಗಿ ಬೀಗ ಬಿದ್ದಿದೆಯೋ ಎಂದು ಶಾಸ್ತ್ರಕ್ಕೆ ಒಂದಿಷ್ಟು ಎಳೆದುನೋಡಿ ಲೂಯಿಸನ ಹಿಂದೆಯೇ ನಡೆದನು. ಅವನು ಹಾಗೆ ಎಳೆಯುತ್ತಿದ್ದಾಗ ಆ ಪ್ರತಿಮೆಯ ಹೊಟ್ಟೆಯನ್ನು ಮಾದರಸನು ಒತ್ತಿಕೊಂಡಿದ್ದನೆಂದು ನೆರಳಿನ ದೆಸೆಯಿಂದ ಅವನಿಗೆ ಕಾಣಲಿಲ್ಲ.

ಅಂದು ಪೂರ್ಣಿಮಾ. ಚಂದ್ರಗೋಲಕದೊಳಗಿನಿಂದ ಶುಭ್ರ ಸುಧಾರಸವು ಆ ದುರ್ಗ ಶಿಖರದ ಮೇಲೆಲ್ಲಾ ಮಂದ ಮಂದವಾಗಿ ಸುರಿಯುತ್ತಿತ್ತು. ದುರ್ಗಾಂತರಾಳವು ಬೆಟ್ಟದ ನೆರಳಿನಿಂದ ಪಾತಾಳ ಗುಹೆಯಂತೆ ಮಸೀಮಯ. ಆದರಾಚೆಗೆ ಬೆಳುದಿಂಗಳ ಸಾಗರ. ಮಂಜೀಮಯವಾದ ಮೌನ ಸೃಷ್ಟಿ ಸೌಂದರ್ಯ.

ಹಾಗೆ ಸುತ್ತುಮುತ್ತು ನೋಡುತ್ತ ದೂರದಲ್ಲಿ ಕಾಣುವ ಬೆಟ್ಟದ ಬುಡದ ಒಂದು ಅರಣ್ಯ ಭಾಗದಲ್ಲಿ ಸುರಂಗದ ಬಾಯಿಯನ್ನು ನಿರ್ಮಿಸಬಹುದೆಂದು ಲೂಯಿಸನೂ ನಾಯಕನೂ ಮಾತಾಡಿಕೊಂಡರು. ಮಾದರಸನು ತನಗೆ ಆ ಪ್ರದೇಶದ ಅನುಭವವು ಚೆನ್ನಾಗಿದೆ ಎಂದನು.

ಹಿಂದೆ ರಾಯನು ಉದಯಗಿರಿಯನ್ನು ಮುತ್ತಿಗೆ ಹಾಕಿದ್ದಾಗ ಮಾದರಸನು ಗಜಸೈನಿಕ ವೇಷದಲ್ಲಿ ಅಲ್ಲೆಲ್ಲಾ ಸುತ್ತಾಡಿದ್ದನಂತೆ. ಆದುದರಿಂದ ಉಷಃಕಾಲದಲ್ಲಿ ಮಾದರಸನೊಂದಿಗೆ ಲೂಯಿಸನ ಕೆಲವು ಸೇವಕರನ್ನೂ, ಕೆಲಸದ ಪರಿಕರಗಳನ್ನೂ ಅಲ್ಲಿಗೆ ಕಳುಹಿಸುವುದೆಂದು ಗೊತ್ತು ಮಾಡಲ್ಪಟ್ಟಿತು! ಕೆಲಸವು ಶೀಘ್ರವಾಗಿಯೂ ರಹಸ್ಯವಾಗಿಯೂ ನಡೆಯಬೇಕಾದುದರಿಂದ, ಮಾದರಸಾದಿಗಳು ಬೆಳಕು ಹರಿಯುವುದಕ್ಕೆ ಮೊದಲೇ ಅಲ್ಲಿಗೆ ಹೋಗಿ ಸೇರಬೇಕಾಗಿತ್ತು. ಹಾಗೆ ಉಷಃಕಾಲದಲ್ಲಿ ಅವರು ಹೊರಟು ಹೋಗುವಾಗ, ದ್ವಾರರಕ್ಷಕರಿಂದ ತೊಂದರೆಯಾಗದಂತೆ ರಾಮನಾಯಕನು ಏರ್ಪಾಡು 'ಮಾಡಿದನು. ಆಮೇಲೆ ನಾಯಕನು ಮಲಗಲಿಕ್ಕೆ ಹೋದನು.

ಈಗ ಅಲ್ಲಿರುವ ಎಲ್ಲರೂ ತನ್ನವರೇ ಆಗಿರುವುದನ್ನು ನೋಡಿ, ಮಾದರಸನು ಕೃತಜ್ಞತೆಯ ಭಾರವನ್ನು ತಾಳಲಾರದೆ, "ತಾಯೆ! ಇಷ್ಟು ಬೇಗನೆ ನನ್ನ ಬಿಡುಗಡೆಗಾಗಿ ಬಂದೆಯಲ್ಲ! ನಿನ್ನ ಬಂಧು ಪ್ರೇಮವೇ ಪ್ರೇಮ!" ಎನ್ನುತ್ತಾ ಲೂಯಿಸನ ಪಾದಕ್ಕೆ ಅಡ್ಡ ಬಿದ್ದನು.

"ನಾಯಕ ಬಂಧು! ನಿನ್ನೊಬ್ಬನ ಬಿಡುಗಡೆಗಾಗಿ ನಾನು ಬಂದಿಲ್ಲ ಈ ಬೊಕ್ಕಸದೊಳಗಿರುವ ಒಂದು ಮುಖ್ಯ ವಸ್ತುವಿಗಾಗಿ ಬಂದಿದ್ದೇನೆ. ಬಂಧುಗಳೆ, ಇನ್ನು ನಿಮ್ಮ ಕಾರ್ಯಕ್ಕೆ ಪ್ರಾರಂಭಿಸಿರಿ. ಎಚ್ಚರ! ಆಚೆಯ ಬದಿಯಲ್ಲಿ ಕಾವಲುಂಟು!" ಎನ್ನುತ್ತಾ ಲೂಯಿಸನು ತನ್ನ ತಲೆಯಲ್ಲಿದ್ದ ಮರಿಗೇ ಟೋಪಿಯನ್ನು ತೆಗೆದನು.

ಆ ಹುಲ್ಲಿನವಳೇ ಅಜ್ಞಾತಾ! ರಾಣೀ ಅಜ್ಞಾತಾ! ದಟ್ಟವಾದ ಕೃಷ್ಣಕುಂತಳಗಳ ಮಧ್ಯದಲ್ಲಿ ಅವಳ ಬಟ್ಟ ಮೊಗವು ಪ್ರತಿಚಂದ್ರನಂತೆ ದೀಪದ ಕಾಂತಿಗೆ ಬೆಳಗಿತು!

ವಿಷ್ಣು ಪ್ರತಿಮೆಯ ಬಾಗಿಲನ್ನು ಬಲವಾಗಿ ಎಳೆಯುತ್ತಲೇ ಅದು ತೆರೆದುಕೊಂಡಿತು. ಅಜ್ಞಾತೆ, ಮಾದರಸಾದಿಗಳೊಂದಿಗೆ ಅದ ರೊಳಗೆ ಹೊಕ್ಕಳು. ಆಹ! ಧನಕನಕ ಮಣಿರಾಶಿಗಳ ತವರು ಮನೆ ಯಾಗಿತ್ತು ಅದು! ವಜ್ರ ವೈಢೂರ್ಯ ಮೊದಲಾದ ಐಸಿರಿಮಣಿಗಳ ಕಾಂತಿಯಿಂದ ಆ ಕತ್ತಲೆ ಕೋಣೆ ಬೆಳಕಾಗಿತ್ತು.

ಅಜ್ಞಾತ ಬಂಧುಗಳು ತಮ್ಮ ಚೋರ ಕಾರ್ಯವನ್ನು ಜಾಗ್ರತೆಯಾಗಿ ನೆರವೇರಿಸಿಕೊಳ್ಳುತ್ತಿದ್ದಾಗ ಕೊಂಚವೂ ಸದ್ದಾಗಲಿಲ್ಲ. ಒಳ್ಳೇ ಕೈ ನುರಿತ ಕಳ್ಳರವರು. ಅವರ ಪೆಟ್ಟಿಗೆ ಸಂಚಿಕೆಗಳಲ್ಲಿದ್ದ ಕಸಗುಪ್ಪೆಗಳು ನೆಲವನ್ನು ಸೇರಿ, ಐಸಿರಿಯ ಮಣಿ ರತ್ನ ಧನಕನಕಗಳಿಂದ ಆ ಪೆಟ್ಟಿಗೆಗಳು ತುಂಬಿದುವು.

ಆಗ ಅಜ್ಞಾತೆ ಮೊದಲೇ ಗುರುತು ತಿಳಿದವಳಂತೆ ಒಂದು ಮೂಲೆಯಿಂದ ಸಣ್ಣದೊಂದು ತೊಗಲ ಪೆಟ್ಟಿಗೆಯನ್ನು ತೆಗೆದು ಕತ್ತಿಯಿಂದ ಹರಿದು, ಅದರೊಳಗಿನಿಂದ ಎರಡು ಪತ್ರಗಳನ್ನು ಹೊರಕ್ಕೆ ತೆಗೆದು ದೀಪದ ಬೆಳಕಿನಲ್ಲಿ ನೋಡಿದಳು. ಗೆಲುವಿನಿಂದ ಆ ಪತ್ರಗಳನ್ನು ಜೇಬಿಗೆ ಹಾಕಿಕೊಂಡಳು.

ಎಲ್ಲಿಯೋ ಕೋಳಿಯ ಕೂಗು ಕೇಳಿಸಿತು. ಜಿಲ್ಲೆಂಬ ತಂಗಾಳಿಯ ಸುಳಿದಾಟಕ್ಕೆ ಪ್ರಾರಂಭವಾಯಿತು. ಬೆಳ್ಳಿ ಮೂಡುವ ಸಮಯ. ಅಜ್ಞಾತ ಬಂಧುಗಳು ತಮ್ಮ ಕುದುರೆಗಳನ್ನು ಲಾಯದಿಂದ ತಂದು, ಗಂಟು ಪೆಟ್ಟಿಗೆಗಳನ್ನು ಅವುಗಳ ಮೇಲೆ ಏರಿಸಿ ತಾವೂ ಏರಿಕೊಂಡರು. ಮಾದರಸನು ಆ ಮಂದಿರಗಳ ದ್ವಾರಗಳನ್ನು ಭದ್ರಪಡಿಸಿ, ಕುದುರೆಯ ಮೇಲೆ ಏರಿದನು. ಅಜ್ಞಾತಾದೇವಿ ಅವನ ಹಿಂದಿನಿಂದ ಮೂಟೆಗಳ ನಡುವೆ ಹುದುಗಿ ಕುಳಿತಳು. ಅವಳ ಮೇಲೊಂದು ಕಂಬಳಿ ಹಾಕಿ ಮೇಲೆ ಬಿಗಿಯಲ್ಪಟ್ಟಿತು.

ಮೊದಲೇ ದುರ್ಗಾಧೀಶನ ಅಪ್ಪಣೆಯಾಗಿದ್ದುದರಿಂದ ಕೋಟೆಯ ಬಾಗಿಲುಗಳೆಲ್ಲ ಅವರಿಗೆ ತೆರೆದು ಬಿಡಲ್ಪಟ್ಟವು. ಪಶ್ಚಿಮಾಕಾಶದಿಂದ ಬೆಳುದಿಂಗಳು ಸುರಿಯುತ್ತಲೇ ಇದ್ದುದರಿಂದ ಅವರಿಗೆ ಗಿರಿಯನ್ನಿಳಿಯುವುದು ಸುಲಭವಾಯಿತು. ಬೆಳಗಾಗುವಾಗ ಗಿರಿಯ ತಳವನ್ನು ಸೇರಿ, ಒಂದು ಅಡವಿಯ ಕಡೆಗೆ ತಿರುಗಿದರು. ಆಗ ಒಂದು ದಿನ್ನೆಯ ಹಿಂದೆ ಅಡಗಿದ್ದ ಯಾರೋ ಇಬ್ಬರು ಅಶ್ವಾರೋಹಿಗಳು, ದೂರದಿಂದ ಅವರಿಗೆ ತಿಳಿಯದ ಹಾಗೆ ಅವರನ್ನು ಅನುಸರಿಸಿಕೊಂಡು ಹೋಗುತ್ತಿದ್ದರು. ಕಳ್ಳರ ಮೇಲೆ ಕಳ್ಳರಾಗಿ ಹೊರಟ ಅವರು ಯಾರೋ?

ಬಹುದೂರದ ಗೊಂಡಡವಿಯೊಂದರಲ್ಲಿ ಇನ್ನೂ ಕೆಲವು ಬಂಧುಗಳು ಕುದುರೆಯೊಡನೆ ತಂಗಿದ್ದರು. ಚೋರಪರಿವಾರವು ಅವರೊಡನೆ ಕಲೆತು ಶ್ರಮ ನಿವಾರಣೆ ಮಾಡಿಕೊಂಡಿತು.

ಅಜ್ಞಾತಾದೇವಿ ಅವರನ್ನು ಕುರಿತು, "ವೀರಬಂಧುಗಳೆ, ನೀವೆಲ್ಲರೂ ಛದ್ಮವೇಷಗಳಿಂದ, ಈ ಅಪಹೃತ ವಸ್ತುಗಳನ್ನು ಸಾಗಿಸಿಕೊಂಡು ಶೈಲಭವನಕ್ಕೆ ತೆರಳಿರಿ. ಈ ಪತ್ರಗಳನ್ನು ಬಹು ಜಾಗರೂಕತೆಯಿಂದ ವೀರರುದ್ರಾರ್ಯರ ಕೈಗೆ ಒಪ್ಪಿಸಿರಿ. ನನಗೆ ಇನ್ನೂ ಸ್ವಲ್ಪ ಕೆಲಸವಿದೆ. ಕಟಕಪುರಿಯವರೆಗೆ ಹೋಗಬೇಕಾದೀತು. ಬಾಲರಾಣಿಗೂ ತಿಳಿಸಿರಿ" ಎಂದು ಹೇಳಿ ಮಾದರಸನೊಂದಿಗೆ ಅಲ್ಲಿಂದ ಹೊರಟು ಇನ್ನೊಂದು ಅಟವೀಪ್ರಾಂತಕ್ಕೆ ನಡೆದಳು.

ಅಲ್ಲಿ ಸುಮಾರು ಮುನ್ನೂರು ಮಂದಿ ಅಜ್ಞಾತವೀರರು ದಂಡಿನಂಗಿ ದಂತೆ ತಂಗಿದ್ದರು. ಅವರಿಗೂ, ತಾನು ಇನ್ನೊಮ್ಮೆ ತಿಳಿಸುವವರೆಗೆ ಅಲ್ಲಿಯೇ ಅಡಗಿರಬೇಕೆಂದು ಹೇಳಿ ಮಾದರಸನೊಂದಿಗೆ ಮತ್ತೆ ಅಲ್ಲಿಂದ ಹೊರಟಳು. ಅಲ್ಲಿ ಅಡಗಿರುವ ಅಷ್ಟು ಮಂದಿ ಕಟ್ಟಾಳುಗಳಿಗೆಲ್ಲಾ ಆ ಒಬ್ಬಳು ಹೆಂಗಸಿನ ಮೇಲೆ ಅದೆಷ್ಟು ಭಕ್ತಿ! ಅದೆಷ್ಟು ವಿಶ್ವಾಸ! ಅದೆಷ್ಟು ಗೌರವ!

* * *

ಉದಯಗಿರಿಯ ನೆರೆಗ್ರಾಮಕ್ಕೆ ಹೋಗುವ ದಾರಿಯಲ್ಲಿ ಒಂದು ದೊಡ್ಡ ವಟವೃಕ್ಷವಿದೆ. ಅದರ ಬುಡದಲ್ಲಿ ರಾಮಯಾಮಾತ್ಯನು, ದಾರಿಹೋಕ ಗಿಂಡೀ ಹಾರುವನಹಾಗೆ ಕುಳಿತುಕೊಂಡು, ಅಜ್ಞಾತಾ ದೇವಿಯ ಆಗಮನವನ್ನು ನಿರೀಕ್ಷಿಸಿಕೊಂಡಿದ್ದನು. ಅವನೂ ಅಜ್ಞಾತಾ ದೇವಿಯೂ ಮಾಡಿಕೊಂಡ ತಂತ್ರವು, ರಾತ್ರಿ ಬೆಳಗಾಗುವವರೆಗೆ ಮಾತ್ರವೇ ಬಾಳುವಂತಹದಾದುದರಿಂದ, ಈಗ ರಾಮಯಾಮಾತ್ಯನು ಆ ಉದ್ದುದ್ದವಾದ ದಾಡಿಮೀಸೆ ಮೊದಲಾದ ಜೋಯಿಸವೇಷದಿಂದ ಮುಕ್ತನಾಗಿದ್ದನು. ಆ ವಟವೃಕ್ಷವು ಅಜ್ಞಾತಾದೇವಿಗೆ ಮೊದಲೇ ಗುರುತಿಸಲ್ಪಟ್ಟಿತ್ತು. ಈಗ ಅವನಿಗೆ ಅಜ್ಞಾತಾದೇವಿಯ ಆಗಮನ ಕ್ಕಿಂತಲೂ ಇನ್ನೊಬ್ಬ ಸೇವಕನ ಆಗಮನವೇ ಬಹುಮುಖ್ಯವಾಗಿತ್ತು.

ಸಮಯವು ಕ್ರಮಿಸುತ್ತಿರುವಂತೆ ಸಂದೇಹವು ಅಧಿಕವಾಗುತ್ತಿತ್ತು. ಹಾಗೆ ನೋಡುತ್ತಿರಲು ಆ ಸೇವಕನ ಬದಲಾಗಿ ಅಜ್ಞಾತಾದೇವಿಯೂ ಮಾದರಸನೂ ಅವನಿದುರು ಬಂದು ನಿಂತರು. "ಸ್ವಾಮೀಜಿ, ಈತನೇ ನನ್ನ ಆ ಅಣ್ಣ" ಎಂದು ಅಜ್ಞಾತೆ ಮಾದರಸನನ್ನು ತೋರಿಸಲು, ಅವನು ರಾಮಯಾಮಾತ್ಯನಿಗೆ "ರಾಮರಾಮ" ಮಾಡಿದನು.

ರಾಮಯಾಮಾತ್ಯನು ಕರೀ ಕೊಣಪ, ಮಾದರಸನನ್ನು ನೋಡಿ ತನ್ನಲ್ಲಿ, "ಇವನೆಂತಹ ಅಣ್ಣ?" ಎಂದುಕೊಂಡು, ದೇವಿಯನ್ನು ಕುರಿತು "ಕಾರ್ಯವು ಸರಿಯಾಗಿ ಕೈಗೂಡಿತೆ?" ಎಂದು ಪ್ರಶ್ನಿಸಿದನು.

"ಕೂಡಿತು. ಬಂಧಮುಕ್ತರಾದ ಸೈನಿಕರು ನಿಮ್ಮೊಂದಿಗೆ ಕೂಡಿದರಷ್ಟೇ?"—ಅಜ್ಞಾತಾ ಕೇಳಿದಳು.

"ಕೂಡಿದರು. ಆದರೆ ನೀನು ಆ ಸುರಂಗದ ಬಾಯಿಯ ಕೀಲು ತಾಳಗಳನ್ನು ಕಳಚಿಸಿರುವೆಯಾ?"

"ಓಹೊ! ಇನ್ನು ನೀವು ಸೇನೆಯೊಂದಿಗೆ ಒಳಗೆ ನುಸುಳುವುದೊಂದೇ ಬಾಕಿ"

"ಹಾಗಿದ್ದರೆ, ಅಲ್ಲಿ ಹೊರಗೆ ಕಾದಿರುವಂತೆ ನಾನು ಕಳುಹಿಸಿದ ನನ್ನ ಸೇವಕನು ಇನ್ನೂ ಬಂದಿಲ್ಲವೇಕೆ? ಅವನಿಗೆ ದೃಷ್ಟಾಂತವಾಗಿದೆಯೆ?" ಎಂದು ರಾಮಯಾಮಾತ್ಯನು ದೂರಕ್ಕೆ ಕಣ್ಣು ಹರಿಸುತ್ತಾ ಅಂದನು.

"ಅದೇನೋ? ನಾವಿಬ್ಬರೂ ಸ್ವಯಂ ಸುರಂಗದೊಳಗೆ ಹೊಕ್ಕು ನೀವು ಸೂಚಿಸಿದೆಡೆಯಲ್ಲಿ ಶಾಖಾ ಸುರಂಗವನ್ನು ಕಂಡುಹಿಡಿದು, ಹೋಗಿ ಅದರ ಬಾಯಿಯ ಬಂಡೆಯಬಾಗಿಲಿಗೆ ತಟ್ಟತಟ್ಟಿ ಎಷ್ಟೋ ಶಬ್ದ ಮಾಡಿದೆವು. ಹೊರಗಿನಿಂದ ನಿಮ್ಮಾತನ ಪ್ರತ್ಯುತ್ತರವೇ ಬರಲಿಲ್ಲ. ಅವನನ್ನು ಹುಲಿ ಗಿಲಿ ಹಿಡಿಯಿತೋ ಏನೊ? ಬಂಡೆಯ ಬಾಗಿಲನ್ನು ತೆರೆದೇ ನೋಡೋಣವೆಂದರೆ, ನಾವಿಬ್ಬರೇ ಇದ್ದುದರಿಂದ ಅಸಾಧ್ಯವಾಗಿತ್ತು. ಅಂತೂ ಬಾಗಿಲು ತೆರವಾಗಿದೆ. ಹೊರಗಿನಿಂದ ಎಬ್ಬಿದರೆ ಸಾಕು"ಎಂದಳು ಅಜ್ಞಾತಾ.

'ಹಾಗಾದರೆ ಆ ಸೇವಕನೆತ್ತ ಸತ್ತ? ಈ ಚೋರನಾಯಕಿಯ ಮಾತನ್ನು ನಂಬಬಹುದೇ?' ಎಂದು ತನ್ನೊಳಗೇ ರಾಮಯಾಮಾತ್ಯನು

ಚಡಪಡಿಸಿಕೊಳ್ಳುತ್ತ, ಇನ್ನೊಬ್ಬ ಸೇವಕನನ್ನು ಕರೆದನು. ಬಳಿಯಲ್ಲಿಯೇ ಇದ್ದ ಅವನ ಪರಿವಾರದಿಂದ, ಒಬ್ಬ ಸೇವಕನು ಇತ್ತ ಬಂದನು. ಮೊದಲನೇ ಸೇವಕನನ್ನು ನೋಡಿಕೊಂಡು ಬರುವಂತೆ ಆ ಸೇವಕನನ್ನು ಓಡಿಸಿದನು.

ಆ ಸೇವಕನು ಮೊದಲನೇ ಸೇವಕನನ್ನು ಹುಡುಕಿಕೊಂಡು ಬರುವಾಗ ರಾತ್ರಿಯಾಗಿ ಹೋಯಿತು. ಮೊದಲನೇ ಸೇವಕನು ಬಹಳ ದೀನಾವಸ್ಥೆಯಲ್ಲಿದ್ದನು. ಅವನು ತನ್ನ ಶೋಚನೀಯಾವಸ್ಥೆಯನ್ನು ಕುರಿತು —"ಸ್ವಾಮಿ, ತಮ್ಮ ಆಜ್ಞೆಯಂತೆ ನಾನು ನಿನ್ನೆ ಕತ್ತಲಾಗುವಾಗಲೇ, ಆ ದುರ್ಗದ ಬುಡಕ್ಕೆ ಹೋಗಿ ಆ ಸುರಂಗದ ಬಾಯಿಯ ಬದಿಯಲ್ಲಿಯೇ ಕಾದಿದ್ದೆ. ಆಗ ಯಾರೋ ಇಬ್ಬರು ಠೊಣಪರು ಪಕ್ಕನೆ ಹಾರಿಬಂದು, ನನ್ನನ್ನು ಕೈಕಾಲುಕಟ್ಟಿ ಕೆಡವಿ ಓಡಿಹೋದರು. ಇನ್ನೇನೂ ನನಗೆ ತಿಳಿಯದು ಸ್ವಾಮಿ. ತಾವು ಈಗ ಜನವನ್ನು ಕಳುಹದಿರುತ್ತಿದ್ದರೆ ನಾನು ಆ ಕಾಡಿನಲ್ಲಿಯೇ ಸತ್ತುಹೋಗುತ್ತಿದ್ದೆ" ಎಂದು ಆರ್ತಾಲಾಪ ಮಾಡಿದನು.

ಇದನ್ನು ಕೇಳಿ ರಾಮಯಾಮಾತ್ಯನ ಸಂದೇಹವು ಇಮ್ಮಡಿಸಿತು. "ಈ ಸೇವಕನನ್ನು ಹಾಗೆ ವಿಚಾರ ಸಚಾರವಿಲ್ಲದೆ ಕಟ್ಟಿಹಾಕಿದವರು ಯಾರಿರಬಹುದು ? ನಮ್ಮ ರಹಸ್ಯಕಾರ್ಯಗಳೇನಾದರೂ ಶತ್ರುಗಳಿಗೆ ತಿಳಿದಿರಬಹುದೇ ?" ಎಂದನು.

ಅದಕ್ಕೆ ಅಜ್ಞಾತೆ – "ಇಲ್ಲ ಇಲ್ಲ. ನಿಮ್ಮ ಸೇವಕನು ಬೆಟ್ಟದ ಬುಡದಲ್ಲಿ, ಅದೂ ರಾತ್ರಿಯಲ್ಲಿ ಸುತ್ತುವುದನ್ನು ನೋಡಿ, ಯಾರೋ ಕಳ್ಳರೋ, ರಾಜಸೇವಕರೋ ಬಂಧಿಸಿರಬೇಕು. ಆಮೇಲೆ ವಿಚಾರ ಮಾಡೋಣ ಎಂಬಷ್ಟರೊಳಗೆ, ಏನೋ ಮೃಗಭಯದಿಂದ ಹೆದರಿ ಓಡಿದರೋ, ಅಲ್ಲ ಹುಲಿಯೇ ಹಿಡಿಯಿತೋ ಅವನನ್ನು! ಅಂತೂ ನಾನು ಮಾಡಿದ ಕೆಲಸ ಖಂಡಿತವಾಗಿಯೂ ಬಯಲಾಗಲಿಲ್ಲ ಹಾಗಿದ್ದರೆ ನಮ್ಮೆಲ್ಲರನ್ನೂ ಹಿಡಿದು ಹಾಕಬೇಕಿತ್ತು ಕೂಡಲೇ. ನೀವು ಸಂದೇಹಿಸಬೇಡಿ ಸ್ವಾಮಿ" ಎಂದಳು.

ರಾಮಯಾಮಾತ್ಯನು ತೀಕ್ಷ್ಣವಾಗಿ ಅವಳ ಮುಖವನ್ನು

ನೋಡುತ್ತ, "ಅಂತೂ ಇವಳ ಕಾರ್ಯವೇನೋ ನಿರ್ವಿಘ್ನವಾಗಿ ನೆರವೇರಿತು. ನನ್ನದೇ ಸಂದೇಹಾಸ್ಪದವಾಗಿದೆ" ಎಂದು ನೆನೆದನು.

ಆದರೆ ಅವಳ ಮುಖಭಾವಗಳಿಂದ ಅವನಿಗೆ ಯಾವ ಕಪಟವೂ ಕಂಡುಬರಲಿಲ್ಲ. ಅವನ ಮಿಡುಕಾಟವನ್ನು ನೋಡುತ್ತಾ, ಅವಳು ಒಳಗೊಳಗೇ ಸಂತಸಪಡುತ್ತಿರುವುದು ಅವನಿಗೆ ಗೊತ್ತೇ ಆಗಲಿಲ್ಲ. ಅವಳು ಪೂರಾ ಮೋಸವೇ ಮಾಡಿದ್ದಳು ಅವನಿಗೆ! ಶಾಖಾ ಸುರಂಗದ ಬಾಯಿಯ ಹೊರಗೆ ರಾಮಯಾಮಾತ್ಯನಿಂದ ಕಳುಹಿಸಲ್ಪಟ್ಟ ಆ ಸೇವಕನನ್ನು ಹಾಗೆ ಕಟ್ಟಿಹಾಕಿಸಿದ್ದು ಅವಳೇ. ಈಗ ಅವಳು ರಾಮಯಾಮಾತ್ಯನೊಂದಿಗೆ ಕಟಕಪುರಿಯವರೆಗೂ ಹೋಗಬೇಕೆಂದು ಇದ್ದಾಳೆ. ಅಲ್ಲಿ ಪ್ರತಾಪರುದ್ರಗಜಪತಿಯನ್ನು ಕಂಡು, ಅವಳ ಪ್ರಚಂಡ ಘೋರ ಸೇನೆಯೆಲ್ಲವನ್ನೂ ಕೃಷ್ಣದೇವರಾಯನ ನಿರ್ಮೂಲನಕ್ಕಾಗಿ, ಅವರ ವಶಪಡಿಸುವೆನೆಂದು ರಾಮಯಾಮಾತ್ಯನಿಗೆ ಅವಳು ಭರವಸೆ ಕೊಟ್ಟಿದ್ದಳು.

ರಾಮಯ್ಯನು ಕಳ್ಳರಸಿಯಾದ ಅವಳ ಭರವಸೆಯ ಬೂಟಾಟಿಕೆಯನ್ನೆಲ್ಲ ಗಟ್ಟಿಯಾಗಿ ನಂಬಿರಲಿಲ್ಲ. ಏನಾದರೂ ಹೆಚ್ಚು ಕಡಿಮೆಯಾದರೆ ಅವಳನ್ನು ಬಂಧಿಸಬೇಕೆಂಬ ಹೊಂಚಿನಲ್ಲಿಯೇ ಇದ್ದನು. ಕೈತಪ್ಪಿದ ಉದಯಗಿರಿಯನ್ನು ಪುನಃ ವಶಪಡಿಸಿಕೊಳ್ಳಲು ಅವಳ ಉಂಗುರವು ಬಹಳ ಮಹತ್ವವಾಗಿತ್ತು. ಅದರಿಂದ ಬೇರೆ ಉಪಾಯವಿಲ್ಲದೆ ಅವಳ ಸ್ನೇಹ ಮಾಡಿಕೊಂಡಿದ್ದನು. ಅವಳು ಲಾರ್ಡ್ ಲೂಯಿಸನಾಗಿ ಹೋಗುವಾಗ, ತನ್ನೊಬ್ಬ ಆಳನ್ನು ಜತೆಯಲ್ಲಿ ಕರೆದುಕೊಂಡು ಹೋಗುವಂತೆ ಹೇಳಿದ್ದನು. ಅವಳು ಒಪ್ಪಿರಲಿಲ್ಲ. ಅದಕ್ಕಾಗಿ ಅವನು ಹೊರಗಿನಿಂದ ಕಳುಹಿಸಿದ ಸೇವಕನ ಗತಿ ಹೀಗಾಯಿತು. ಅವಳ ಬರೀ ಮಾತನ್ನೇ ನಂಬಬೇಕಾಗಿ ಬಂತೀಗ. ಸಂದೇಹ ನಿವಾರಣೆಗಾಗಿ ಈಗ ಒಮ್ಮೆ ಆ ಶಾಖಾ ಸುರಂಗದ ಬಾಯಿಯ ಬಳಿಗೆ ಹೋಗಿ ಪರೀಕ್ಷಿಸಿಯೇ ಬಿಡೋಣವೆಂದರೆ, ದುರ್ಗದಲ್ಲಿ ಕಳೆದ ರಾತ್ರಿಯಲ್ಲಿ ನಡೆದ ಮೋಸವೀಗ ಬಯಲಾಗಿ, ದುರ್ಗದ ಸುತ್ತಮುತ್ತಣ ಕಾವಲಿಗರೆಲ್ಲಾ ಎಚ್ಚರದಿಂದ ತಿರುಗಾಡುತ್ತಿದ್ದರು. ಅದರಿಂದ ಇದುವರೆಗೆ

ಶತ್ರುಗಳಿಗೆ ತಿಳಿಯದೇ ಇದ್ದ ಆ ಶಾಖಾ ಸುರಂಗದ ರಹಸ್ಯವು ತಿಳಿದು ಹೋಗಿ, ತಕ್ಕ ಬಂದೋಬಸ್ತು ಮಾಡಿಯಾರು. ಈಗ ಇವಳ ಮಾತನ್ನೇ ನಂಬಿ, ದೇವರ ಮೇಲೆ ಭಾರಹಾಕಿ, ಸೇನೆಯನ್ನು ಕರಿಸಿಯೇ ನೋಡೋಣವೆಂದು ರಾಮಯ್ಯಾಮಾತ್ಯನು ತೀರ್ಮಾನಿಸಿ, ಜೆಲ್ಲಂಗೊಂಡದ ಮಹೇಶ್ವರಪಾತ್ರನಿಗೆ ಒಂದು ಪತ್ರವನ್ನು ಬರೆದು, ಶೀಘ್ರಗಾಮಿಯಾದ ಸೇವಕನ ಕೈಯಲ್ಲಿ ಕೊಟ್ಟು ಓಡಿಸಿದನು.

* * *

ಉತ್ಕಲ ಹಾಗು ನೆಲ್ಲೂರುಮಂಡಲವೆಂಬ ಉಭಯ ಗಜ ಸಾಮ್ರಾಜ್ಯದ ಮುಖ್ಯಾಮಾತ್ಯನಾದ ರಾಮಯ್ಯನಿಗೆ ಬಹಳ ದೊಡ್ಡ ಪ್ರಾಮುಖ್ಯತೆಯಿತ್ತು. ಪ್ರತಿರಾಜನೇ ಅವನೆಂದರೂ ಅತಿಶಯೋಕ್ತಿಯಲ್ಲ. ನೆಲ್ಲೂರು ಮಂಡಲದ ಉದಯಗಿರಿ ರಾಜಧಾನಿಯಲ್ಲಿ ವೀರರುದ್ರ ಗಜಪತಿಯೂ, ಉತ್ಕಲದ ಕಟಕ ರಾಜಧಾನಿಯಲ್ಲಿ ವೀರರುದ್ರನ ಭಾವ ನೆಂಟನಾದ ಪ್ರತಾಪ ರುದ್ರಗಜಪತಿಯೂ, ಪ್ರಬಲ ಪ್ರತಾಪಿಗಳಾಗಿ ಆಳಿಕೊಂಡಿದ್ದರು. ಅಲ್ಲದೆ ಉತ್ಕಲದ ಆಯಕಟ್ಟುಗಳಾದ ಅನೇಕ ದುರ್ಗಗಳಲ್ಲಿ 'ಪಾತ್ರ'ರೆಂಬ ವೀರ ದುರ್ಗಾಧೀಶರು, ಗಜಪತಿಗಳಿಗೆ ವಿಧೇಯರಾಗಿ, ರಾಜ್ಯದ ಮಣಿಗಂಟುಗಳಂತೆ ಬಲಿಷ್ಠರಾಗಿದ್ದರು.

ಮದುವೆಯ ನೆಂಟಸ್ತಿಕೆಯ ಕಾರಣದಿಂದಾಗಿ, ವಿಜಯನಗರದ ರಾಯನು ಗಜಪತಿಗಳೊಡನೆ ಯುದ್ಧಕ್ಕೆ ತೊಡಗಿದ್ದನು. ಪ್ರತಾಪ ರುದ್ರ ಗಜಪತಿಗೆ ಸೌಂದರ್ಯದಲ್ಲಿ "ಜಗನ್ಮೋಹಿನಿ" ಎಂದು ಪ್ರಖ್ಯಾತಳಾದ "ರುಚೀದೇವಿ" ಎಂಬ ಕುಮಾರಿಯೊಬ್ಬಳಿದ್ದಳು. ಅವಳನ್ನು ರಾಯನಿಗೆ ವಿವಾಹ ಮಾಡಿಕೊಡಬೇಕೆಂದು ಸಂಧಾನ ಮಾಡಲ್ಪಟ್ಟಿತು. ಅದಕ್ಕೆ ಉತ್ಕಲ ವಂಶಾಭಿಮಾನಿಯಾದ ಉತ್ಕಲಾಧೀಶನು, ಕೀಳು ತರಗತಿಯ ತಾಳುವಂಶಿಯ ದ್ರಾವಿಡರಾಯನಿಗೆ ಕನ್ಯೆಯನ್ನು ಕೊಡಲಾರೆನೆಂದು ತುಚ್ಛೀಕಾರಮಾಡಿ ಪ್ರತ್ಯುತ್ತರವಿತ್ತನು. ತುಳುವಂಶವು ಚಂದ್ರಕುಲದ "ತುರ್ವಸು"ವಿನ ಸಂಭವವೆಂಬ ಸೂಕ್ಷ್ಮಾಂಶವು ಗಜರಾಜನಿಗೆ ತಿಳಿಯಲಿಲ್ಲ. ಅದರಿಂದ ಕೋಪೋದ್ದೀಪಿತನಾದ ಕೃಷ್ಣದೇವರಾಯನು, ದಕ್ಷಿಣ ದಿಗ್ವಿಜಯವನ್ನು ಮುಗಿಸಿ

ಕೊಂಡು ಬಂದ ಹುಮ್ಮಸ್ಸಿನಲ್ಲಿಯೇ, ಉದಯಗಿರಿಯ ಕಡೆಗೆ ದಂಡ ಯಾತ್ರೆ ಹೊರಟನು. ಉಭಯ ಗಜಪತಿಗಳೊಡನೆ ಒಂದೇ ಬಾರಿಗೆ ಕಾದಲು ಸಾಧ್ಯವಿರಲಿಲ್ಲ. ಮೊದಲು ಪೂರ್ವ ಪ್ರಾಂತದ ಉದಯ ಗಿರಿಯ ಮೇಲೆ ಬಿದ್ದರೆ, ಅದನ್ನು ಕಾಪಾಡಲು ಪ್ರತಾಪರುದ್ರನ ಬಲವು ಬಂದೇ ಬರುವುದಲ್ಲವೇ ?

ಉದಯಗಿರಿ ದುರ್ಗವು ಅಸಾಮಾನ್ಯವೂ ಅಸಾಧ್ಯವೂ ಆಗಿತ್ತು. ರಾಯನು ಅದನ್ನು ಮುತ್ತಿ ಪಕ್ಷ, ತಿಂಗಳು, ಅಯನ, ವರ್ಷ ಹೀಗೆ ಕಾಲವು ಸಾಗುತ್ತ, ಅನೇಕ ಯುದ್ಧಗಳು ಜರುಗಿದರೂ ಪ್ರಯೋಜನ ವಾಗಲಿಲ್ಲ. 'ಆಯುಷ್ಯ ತೀರುವವರೆಗೂ ನೋಡುವೆನು. ಈ ದುರ್ಗವನ್ನು ಜಯಿಸದೆ ಹಿಂದಿರುಗುವುದಿಲ್ಲ' ಎಂದು ರಾಯನು ಶಪಥ ಹಾಕಿ ಕೊಳ್ಳುವಷ್ಟರ ಮಟ್ಟಿಗೆ ಆಗಿತ್ತು.

ವೀರರುದ್ರ ಗಜಪತಿ ದುರ್ಗದ ಮೇಲೆ ಸುಖವಾಗಿಯೇ ಇದ್ದನು. ಕಟಕ ನಗರಿಯಿಂದ ಸೇನೆಯ ಸಹಾಯವೂ ಬಂದೊದಗಿತ್ತು. ರಹಸ್ಯ ವಾದೊಂದು ಸುರಂಗ ಮಾರ್ಗದಿಂದ, ದುರ್ಗಕ್ಕೂ ಹೊರಗಣ ಕಟಕದ ಸಾಹಾಯಕ ಸೈನ್ಯಕ್ಕೂ ಸಂಬಂಧವು ಸಾಗಿಕೊಂಡೇ ಇತ್ತು.

ಒಮ್ಮೆ ರಾಮಯಾಮಾತ್ಯನು ಕಟಕದ ಒಂದು ತುಂಡು ಸೇನೆ ಯನ್ನು ದುರ್ಗಕ್ಕೆ ಕೊಂಡೊಯ್ಯಲಿಕ್ಕಾಗಿ ಸುರಂಗ ಮಾರ್ಗದಿಂದ ಹೊರಗೆ ಹೋಗಿದ್ದನು. ಆ ಸುರಂಗದ ಹೊರಬಾಗಿಲು, ಒಂದು ದೇವಾಲಯದಲ್ಲಿತ್ತು. ಅವನು ತುಂಡು ಸೇನೆಯೊಂದಿಗೆ ಹೊರಟು ಬರುವಾಗ, ವಿಜಯನಗರದ ಸೈನ್ಯವು ನಡುದಾರಿಯಲ್ಲಿಯೇ ಅಡ್ಡ ಗಟ್ಟಿ ಧೂಳು ಹಾರಿಸಿ ಬಿಟ್ಟಿತು. ರಾಮಯಾಮಾತ್ಯನು ಭೀತಿಯಿಂದ ದೇವಾಲಯಕ್ಕೆ ಬಂದು ನೋಡಲು, ಅವನ ಸಂದೇಹ ನಿಜವಾಗಿತ್ತು.

ಸುಮಾರು ನೂರು ಮಂದಿ ಗಜಸೈನಿಕ ವೇಷಧಾರಿಗಳು, ಅವರ ಸಂಕೇತ ಶಬ್ದವನ್ನುಚ್ಚರಿಸಿ, ಸುರಂಗದೊಳಗೆ ಹೊಕ್ಕಿರುವರೆಂದು ತಿಳಿಯಿತು. ನೋಡಿದರೆ ಸುರಂಗದ ಬಾಯಿಯೂ ಒಳಗಿನಿಂದ ಭದ್ರಪಡಿಸಲ್ಪಟ್ಟಿತ್ತು. ಅಯ್ಯೋ! ಆಗ ಅವನ ತಲ್ಲಣಿಕೆಗೆ ಮೇರೆ ಇರಲಿಲ್ಲ. ದುರ್ಗದಲ್ಲಿ ನಿಶ್ಚಿಂತನಾಗಿರುವ ವೀರರುದ್ರನು, ರಾಮಯಾ

ಮಾತ್ಯನ ಕಣ್ಣೆದಿರಿನಲ್ಲಿಯೇ ಶತ್ರುವಿನ ಕೈಗೆ ಸಿಕ್ಕುತ್ತಿರುವನಲ್ಲಾ! ವರ್ಷಗಟ್ಟಲೆ ಮುತ್ತಿದರೂ ಮಣಿಯಲಾರದ ದುರ್ಗವು ನಿಮಿಷ ಮಾತ್ರದಲ್ಲಿ ಶತ್ರುವಿನ ಕೈಗೆ ಸಿಕ್ಕುತ್ತಿದೆಯಲ್ಲಾ! ಅಂಗಾತ ಬಿದ್ದ ಅಕ್ಕಳೆಯ ಹಾಗೆ ಚಡಪಡಿಸಿದನು ರಾಮಯಾಮಾತ್ಯ.

ಬೆಳಗಾಗುವಷ್ಟರಲ್ಲಿ ಉದಯಗಿರಿ ದುರ್ಗದ ಕೊತ್ತಳದ ಮೇಲಣ ಗಜಲಾಂಛನ ಧ್ವಜವನ್ನು ಬೀಳಗೆಡಹಿ, ವರಾಹಲಾಂಛನ ಧ್ವಜವು ನರ್ತಿಸುತ್ತಿತ್ತು! ವೀರರುದ್ರನು ಕುಟುಂಬ ಸಮೇತನಾಗಿ ರಾಯನ ಸೆರೆಯಾಳಾದನೆಂದೂ ಅವನಿಗೆ ತಿಳಿದು ಬಂತು!

ಆಮೇಲೆ ರಾಯನು ರಾಮನಾಯಕನನ್ನು ದುರ್ಗಾಧಿಪತ್ಯಕ್ಕೆ ನಿಯಮಿಸಿ, ರಾಜಖೈದಿಗಳನ್ನು ಸಾಗಿಸಿಕೊಂಡು ವಿಜಯನಗರಕ್ಕೆ ತೆರಳಿದ್ದನು. ತೆರಳಿ ಸುಮ್ಮನಿರದೆ, ಅದೇ ವಿಜಯದ ಉಸಿರಿನಲ್ಲಿಯೇ ಉತ್ಕಲದ ಮೇಲೂ ದಂಡಯಾತ್ರೆ ಹೊರಟಿದ್ದನು. ಈಗ ಉತ್ಕಲದ ಹೆಬ್ಬಾಗಿಲಿನಂತಿದ್ದ ಕೊಂಡವೀಡಿನಲ್ಲಿ ಘೋರಕಾಳಗವು ಜರುಗುತ್ತಿತ್ತು.

ತನ್ನಂತಹ ಮಹಾಮಂತ್ರಿಯ ಕಣ್ಣೆದುರೇ ಹಾಗಾದುದನ್ನು ನೋಡಿ ರಾಮಯ್ಯ ಮಂತ್ರಿಗೆ ತುಂಬಾ ನಾಚಿಕೆಯಾಗಿತ್ತು. ಈ ಹಾಳು ಮುಖವನ್ನು ಹೊತ್ತುಕೊಂಡು ಪ್ರತಾಪರುದ್ರ ಗಜಪತಿಯನ್ನು ನೋಡು ವುದು ಹೇಗೆ? ಯಾವ ತಂತ್ರದಿಂದಾದರೂ ಕೈತಪ್ಪಿದ ಉದಯಗಿರಿ ಯನ್ನು ಪುನರ್ವಶ ಮಾಡಿಕೊಂಡು, ತನಗೆ ಬಂದ ಕಳಂಕವನ್ನು ಕಳೆದುಕೊಳ್ಳಬೇಕೆಂದು ಆ ಪ್ರಾಂತದಲ್ಲಿಯೇ ಅಡಗಿದ್ದನು. ಕಡೆಗೆ ಜೋಯಿಸನ ವೇಷವನ್ನು ಹಾಕಿಕೊಂಡನು. ಆ ದುರ್ಗದ ಮುಖ್ಯ ಸುರಂಗಮಾರ್ಗವು ಶತ್ರುಗಳಿಗೆ ಗೊತ್ತಾಗಿದ್ದರೂ, ಶಾಖಾ ಸುರಂಗದ ರಹಸ್ಯವು ಇನ್ನೂ ತಿಳಿದಿರಲಿಲ್ಲ. ಹಿಂದೆ ಯುದ್ಧದಲ್ಲಿ ಮಡಿದು ಹೋದ ವಿಜಯನಗರದ ಸೇನಾಧಿಪತಿಗಳ ಹಾಗು, ಸೈನಿಕರ ಮುಖ್ಯವಾದ ಮುದ್ರಾಪದಕಗಳು ಕೆಲವು ಅವನಿಗೆ ಸಿಕ್ಕಿದ್ದುವು. ಇವುಗಳ ಸಹಾಯ ದಿಂದೇನಾದರೂ ಕಾರ್ಯ ಸಾಧಿಸಿಕೊಳ್ಳಬೇಕೆಂದು ಹೊಂಚು ಹಾಕು ತ್ತಿದ್ದಾಗ, ಅಕಸ್ಮಾತ್ತಾಗಿ ಅವನಿಗೆ ಅಜ್ಞಾತಾ ದೇವಿಯ ಯೋಗ ವುಂಟಾಯಿತು. ಇದು ಅವನನ್ನು ಮತ್ತಷ್ಟು ಸಿಕ್ಕಾಟದಲ್ಲಿಯೇ

ಕೆಡವಿತು.

ವೇಷಧಾರಿ ಲಾರ್ಡ್ ಲೂಯಿಸನ ಒಳ ಮೋಸದಿಂದಾಗಿ. ರಾಮ ನಾಯಕನು ರಾಯನ ಕಡೆಗೆ ಕಳುಹಿಸಿದ, ಲಾರ್ಡ್ ಲೂಯಿಸನ ವಿಷ ಯಕವಾದ ಪತ್ರವು, ಕೊಂಡವೀಡಿನಲ್ಲಿದ್ದ ರಾಯ ಮಂತ್ರಿಗಳನ್ನು ಚಕಿತಗೊಳಿಸಿತ್ತು. ಅವರು ಆ ಮೋಸದ ಮರ್ಮವನ್ನು ತಡೆಗಟ್ಟಲಿ ಕ್ಕಾಗಿ, ಸ್ವಲ್ಪ ಸೈನ್ಯವನ್ನೂ ಕೆಲವು ಗುಪ್ತ ಹೇರರನ್ನೂ ಉದಯಗಿರಿ ಪ್ರಾಂತಕ್ಕೆ ಓಡಿಸಿದರು. ಮೋಸ ಹೋದ ರಾಮನಾಯಕನು, ಜೊಕ್ಕಸ ವನ್ನು ಕಪ್ಪೊಯ್ದ ಕಳ್ಳರನ್ನೂ, ಕಪಟ ಜೋಯಿಸನನ್ನೂ ತೀವ್ರ ವಾಗಿ ಹುಡುಕಿಸುತ್ತಿದ್ದನು. ಗುಪ್ತಚಾರರ ಬಲೆ ರಾಮಯಾ ಮಾತ್ಯನು ನೆನೆದುಕೊಂಡುದಕ್ಕಿಂತಲೂ ಜಟಿಲವಾಯಿತು. ಇಷ್ಟು ಶೀಘ್ರವಾಗಿ ಕೊಂಡವೀಡಿನಲ್ಲಿರುವ ರಾಯನಿಗೆ ವರ್ತಮಾನ ಹೋಗು ವುದೆಂದು ಅವನು ಭಾವಿಸಿರಲಿಲ್ಲ. ಅವನು 'ಪಾತಪಲ್ಲಿ' ಎಂಬ ಗ್ರಾಮ ದಲ್ಲಿ ಅಡಗಿದ್ದು, ತೀವ್ರವೇ ಮಹೇಶ್ವರಪಾತ್ರನಿಂದ ಸೈನ್ಯವನ್ನು ಬರಮಾಡಿಸಿ, ಅವರೊಳಗೆ ಚತುರರಾದ ಕೆಲವರನ್ನಾರಿಸಿ, ಇಂತಹ ಸ್ಥಳದಲ್ಲಿರುವ ಶಾಖಾ ಸುರಂಗದ ಬಾಯಿಯೊಳಗೆ ಹೊಕ್ಕು ದುರ್ಗವನ್ನು ಸೇರಿ ಹೀಗೆ ಹೀಗೆ ಮಾಡಬೇಕು ಎಂದು ಉಪಾಯಗಳ ಪಾಠವನ್ನು ಕಲಿಸಿ ಕಳುಹಿಸಿದನು.

ಆದರೆ ಅಜ್ಞಾತಾದೇವಿ ಆ ಶಾಖಾ ಸುರಂಗದ ಬಾಯಿಯನ್ನು ಕದಲಿಸಿದ್ದರೆ ತಾನೇ? ಆ ಸೈನಿಕರು ಅಲ್ಲಿಗೆ ಹೋಗಿ ಅಲೆದಾಡು ತ್ತಿದ್ದಾಗ, ಶತ್ರುಪಕ್ಷದ ಗುಪ್ತಚಾರರು ಅವರೆಲ್ಲರನ್ನೂ ಹಿಡಿದುಹಾಕಿ ಬಿಟ್ಟರು. ಅಷ್ಟರಲ್ಲಿಯೇ ಕೊಂಡವೀಡಿನಿಂದ ಹೊಸ ಸೈನ್ಯವೂ ಬಂದು, ಮಹೇಶ್ವರಪಾತ್ರನಿಂದೊದಗಿದ, ರಾಮಯಾಮಾತ್ಯನ ಸೇನೆಯ ಬಹುಭಾಗವನ್ನೆಲ್ಲಾ ಸೆರೆಹಿಡಿದು ಉಳಿದುದನ್ನು ಓಡಿಸಿ ಬಿಟ್ಟಿತು.

ಅಷ್ಟು ಬೇಗನೆ ರಾಯನಿಗೆ ಸುದ್ದಿ ಮುಟ್ಟಿ ಹೀಗಾದುದನ್ನು ನೋಡಿ, ರಾಮಯಾಮಾತ್ಯನು ಚಿಂತಾಶ್ಚರ್ಯಗಳಿಂದ ತೊಳಲಾಡಿ ದನು. ಅದನ್ನು ನೋಡಿ ಅಜ್ಞಾತಾದೇವಿ ಒಳಗೊಳಗೇ ನಗುತ್ತ,

ಅವನಿಗೆ ಏನೇನೋ ಸಮಾಧಾನ ಹೇಳಿದಳು.

ಯೋಚಿಸಿ ನೋಡಿದರೆ ರಾಮಯಾಮಾತ್ಯನಿಗೆ ಅವಳಿಂದ ಕಾಸಿನ ಸಹಾಯವಾದುದೂ ಕಾಣುವುದಿಲ್ಲ. ಇವಳು ವಿಜಯನಗರದ ಗೂಢಚಾರಳೋ ಏನೋ? ಎಂಬ ಸಂಶಯಕ್ಕೇ ಬಲ ಕಾಣುತ್ತಿತ್ತು. ಹಿಂದೆ ಉದಯಗಿರಿಯ ರಕ್ಷಣಾರ್ಥವಾಗಿ, ಕಟಕಸೇನೆ ಆ ಪ್ರಾಂತಕ್ಕೆ ಬಂದಾಗ "ಅಜ್ಞಾತ ಬಂಧುವೃಂದದ" ಚೋರರ ಗುಂಪು ಆ ಸೈನ್ಯದಲ್ಲಿ ಆಗಾಗ ಕೊಳ್ಳೆ ಹೊಡೆದು ಉಪದ್ರ ಕೊಟ್ಟಿತ್ತು. ಆ ಕೊಳ್ಳೆಯಲ್ಲಿ ಗಜಸೈನಿಕರ ಉಡುಗೆತೊಡುಗೆಗಳೂ ಕೊಳ್ಳೆಹೋಗಿದ್ದುವು. ಆ ಉಡುಗೆತೊಡುಗೆಗಳ ಸಹಾಯದಿಂದಲೇ ದುರ್ಗವು ಥಕ್ಕನೆ ರಾಯನಿಗೆ ಸಿಕ್ಕುವಹಾಗೆ ಮೋಸವಾಗಿತ್ತು. ಹಾಗಾದರೆ ಇವಳ ಆ ಚೋರವೃಂದವು ರಾಯನಿಗೆ ಸಹಾಯ ಮಾಡಿದಂತೆಯೇ ಆಯಿತಲ್ಲ? ಅಂತಹ ಇವಳೇ ಈಗ ಗಜಪತಿ ಹಿತೈಷಿಣಿ ಎಂದು ಹೊರಟಿರುವುದನ್ನು ನಂಬುವುದು ಹೇಗೆ? ಹಾಗಾದರೆ ಇವಳು ಕಟಕನಗರಿಗೆ ಅವನೊಂದಿಗೆ ಹೊರಟಿರುವುದೇಕೋ? ಆದರೆ ರಾಮಯಾಮಾತ್ಯನು ಸೋಲಿನ ಕರಿಮೋರೆಯನ್ನು ಹೊತ್ತುಕೊಂಡು ಕಟಕನಗರಿಗೆ ಹೋಗುವುದು ಹೇಗೆ?

ಪಾತಪಲ್ಲಿಯಲ್ಲಿದ್ದುಕೊಂಡು ರಾಮಯಾಮಾತ್ಯನು ಚಿಂತಿಸುತ್ತಿದ್ದನು. ಆಗ ಒಬ್ಬ ಯವನ ಸರದಾರನು ಅವನನ್ನು ಹುಡುಕುತ್ತಾ ಅಲ್ಲಿಗೆ ಬಂದು—"ಓಹೊ! ರಾಮಯಾಮಾತ್ಯರೆ, ಸಲಾಂ ಸಲಾಂ" ಎಂದನು.

"ಅರೆರೆ! ಬಹಳ ಅಪರೂಪ! ತೋಪಲ್‌ಖಾ! ಇತ್ತೆತ್ತ ಸವಾರಿ?" ಎಂದನು ರಾಮಯಾಮಾತ್ಯ.

"ತಮ್ಮ ಬಳಿಗೇ. ತಾವು ಈ ಗ್ರಾಮದಲ್ಲಿರುವುದಾಗಿ ಬೆಲ್ಲಂಗೊಂಡದ ಮಹೇಶ್ವರಪಾತ್ರರು ತಿಳಿಸಿದರು" ಎಂದು ತೋಪಲ್‌ಖಾನನು, ಬಳಿಯಲ್ಲಿಯೇ ಕುದುರೆಗೆ ಮಾಲೀಸು ಮಾಡುತ್ತಿದ್ದ ಮಾದರಸನನ್ನೂ, ಅವನ ಬಳಿಯಲ್ಲಿ ನಿಂತಿದ್ದ ಅಜ್ಞಾತಾದೇವಿಯನ್ನೂ ನೋಡಿ—'ಇವರಾರೋ?' ಎಂಬ ಭಾವವನ್ನು ವ್ಯಕ್ತಪಡಿಸಿದನು.

'ಇವನಾರೋ' ಎಂದು ಅಜ್ಞಾತೆಯೂ ಗಮನಿಸುತ್ತಿದ್ದಳು.

"ಅವರೂ ನಮ್ಮವರೆ. ಮಿತ್ರರೆ, ನೀವಿಂದು ನನ್ನ ಅತಿಥಿಗಳಾಗಿ ಇಲ್ಲಿಯೇ ಇರಿ. ನಿಧಾನವಾಗಿ ಮಾತಾಡೋಣ" ಎಂದು ರಾಮಯಾಮಾತ್ಯನು ಬೇರೆ ಬೇರೆ ವಿಷಯಗಳನ್ನು ಮಾತಿಗೆ ಎತ್ತಿಕೊಂಡನು.

ಆ ಛತ್ರದ ಬದಿಯಲ್ಲಿಯೇ ಒಂದು ಕೊಳವಿತ್ತು. ತೋಪಲ್ ಖಾನನೊಡನೆ ಮಾತಾಡುತ್ತಿದ್ದಾಗ, ರಾಮಯಾಮಾತ್ಯನ ಕೊರಳ ಸನ್ನೆಗಳನ್ನು ಪರೀಕ್ಷಿಸಿದ ಅಜ್ಞಾತಾದೇವಿ, ಮುಚ್ಚಂಜೆಯಾಗುವಾಗ ಅಂಗಡಿಗೆ ಹೋಗುವೆನೆಂದು ಹೊರಟುಹೋಗಿ, ಮೆಲ್ಲನೆ ಸುತ್ತಿಕೊಂಡು ಬಂದು, ಕತ್ತಲೆಯಲ್ಲಿ ಯಾರಿಗೂ ಕಾಣಿಸದಂತೆ ಆ ಕೊಳವನ್ನಿಳಿದು, ಮೆಟ್ಟಲಿನ ಬದಿಯಲ್ಲಿದ್ದೊಂದು ದಪ್ಪವಾದ ಮರದ ಹಿಂದೆ ಅವಿತು ಕೊಂಡಳು.

ಸ್ವಲ್ಪ ಹೊತ್ತಿನಲ್ಲಿ ರಾಮಯಾಮಾತ್ಯನು ಆ ಕೊಳಕ್ಕಿಳಿದು, ಕತ್ತಲೆಯಲ್ಲಿ ಸುತ್ತುಮುತ್ತು ಪರೀಕ್ಷಿಸಿ ನೋಡಿ ಮಣಮಣನೆ ಮಂತ್ರವನ್ನು ಪಠಿಸುತ್ತಾ ಅರ್ಘ್ಯ ಸಂಧ್ಯಾವಂದನೆಗಳನ್ನು ಚಟಕಿನಲ್ಲಿ ಮುಗಿಸಿದನು. ಅಷ್ಟರೊಳಗೆ ತೋಪಲ್‌ಖಾನನೂ ಅಲ್ಲಿಗೆ ಬಂದು, "ವಿಪ್ರೋತ್ತಮರೆ, ಆಯಿತೇ ನಿಮ್ಮ ಜಪ?" ಎಂದು ಕೇಳುತ್ತಾ ಮೆಟ್ಟಲಲ್ಲಿ ಕುಳಿತನು.

"ಆಯಿತು. ನಿಮ್ಮ ನಮಾಜು ?"

"ಅದೂ ಆಯಿತು. ಅಮಾತ್ಯರೆ, ನಿಮ್ಮ ಜತೆಯಲ್ಲಿರುವ ಆ ಕರಿಯ ಠೊಣಪ, ಮತ್ತು ಆ ಮಿಂಚಿನಂತಹ ಹೆಂಗಸು ಯಾರೊ? ಭಲೇ ದಿಟ್ಟ ಗಟ್ಟಿಗರಾಗಿ ಕಾಣುವರಲ್ಲಾ ?"

"ಅವಳೇ ರಾಣೀ ಅಜ್ಞಾತಾದೇವಿ ! ಅನಾಮಧೇಯಳು. ಅವನು ಅವಳ ಸಹಚರ. ನಾನು ಅವರನ್ನು ಉಪಾಯದಿಂದ ಪುಸಲಾಯಿಸಿ ಒಯ್ಯುತ್ತಿದ್ದೇನೆ, ಕಟಕದ ಗೂಡಿನಲ್ಲಿ ಸೇರಿಸಲಿಕ್ಕೆ!"

"ಭೇಷ್! ಮಂತ್ರ ಮಾಯೆಗಳಿಂದ ಹಾವನ್ನು ಕರೆದೊಯ್ಯುವ ಹಾಗಿದೆ! ಮತ್ತೆ ಸುಮ್ಮನೆಯೇ ಮಂತ್ರಿಶೇಖರರೆಂಬ ಬಿರುದು ನಿಮಗೆ?"

"ಸುಟ್ಟಿತು ನನ್ನ ಬಿರುದು. ಮುಖ್ಯ ವಿಷಯ ಹೇಳಿರಿ ತೋಪಲ್‌ಖಾನ್. ನಮಗೆ ಸಹಾಯ ಮಾಡುವ ವಿಷಯದಲ್ಲಿ ಸುಲ್ತಾನರ ಅಭಿಪ್ರಾಯವೇನಂತೆ ?"

"ಮಿತ್ರರೆ, ನಿಮ್ಮ ವಿನಂತಿಗಳೆಲ್ಲವನ್ನೂ ನಾನು ಸುಲ್ತಾನರೊಡನೆ ಅರಿಕೆ ಮಾಡಿಕೊಂಡೆ. ಪ್ರಕೃತ ನಮ್ಮ ಅದಿಲ್‌ಷಹರಿಗೂ, ರಾಯನಿಗೂ ಸ್ನೇಹನಿಬಂಧನೆಗಳಾಗಿದೆಯಲ್ಲವೆ? ನಿಮಗೆ ಸಹಾಯ ಮಾಡುವು ದೆಂದರೆ, ಆ ಸ್ನೇಹವನ್ನು ಮುರಿಯುವುದೇ ಆಗುತ್ತದೆ. ಪ್ರಬಲ ಕಾರಣವಿಲ್ಲದೆ ಪ್ರಬಲವಾದ ವಿಜಯನಗರದೊಂದಿಗೆ ಹೇಗೆ ವೈರ ಕಟ್ಟಿ ಕೊಳ್ಳುವುದೆಂದು ಸುಲ್ತಾನರು ಹಿಂದೆ ಮುಂದೆ ನೋಡುತ್ತಾರೆ."

"ಓಹೊ, ಗಜಪತಿ-ಅಶ್ವಪತಿಗಳೊಂದಾದರೆ, ನರಪತಿಗಳು ಧೂಳೀಸಮರಾಗುವರೆಂಬುದರಲ್ಲಿ ಸುಲ್ತಾನರಿಗೆ ಸಂದೇಹವೇ ?"

"ಅದಲ್ಲ, ತಕ್ಕ ಪ್ರತಿಫಲವು ದೊರೆಯುವುದಾದರೆ—"

"ಗೆದ್ದ ರಾಜ್ಯಭಾರವು ಪ್ರತಿಫಲವಾಗಿ ಉಂಟೇ ಉಂಟಲ್ಲವೆ ?"

"ಅದು ಸರಿ. ವಿಶೇಷವಾದೊಂದು ಪ್ರತಿಫಲವನ್ನು ಕುರಿತೇ—"

"ವಿಶೇಷ ಪ್ರತಿಫಲವೆಂದರೆ ?"

"ಅಷ್ಟು ದೊಡ್ಡದೇನಲ್ಲ. ನೀವೊಬ್ಬರು ಒಪ್ಪಿದರೆ ಸಾಗು ವಂಥಾದ್ದೇ."

"ಸ್ಪಷ್ಟವಾಗಿ ಹೇಳಿರಿ."

"ನಮ್ಮ ಷಹಾಜಾದಾರಿಗೆ ಹಿಂದೂ ಕನ್ಯೆಯೊಂದಿಗೆ ವಿವಾಹ ಮಾಡಿಸಿ, ಆ ಮೂಲಕವಾಗಿ ಹಿಂದುಗಳೊಂದಿಗೆ ನಿರಂತರ ಸ್ನೇಹ ವನ್ನು ನೆಲೆಗೊಳಿಸಬೇಕೆಂದು ಸುಲ್ತಾನರ ಬಹುದಿನಗಳ ಬಯಕೆ. ನಿಮ್ಮ ನೆಲ್ಲೂರು ಮಂಡಲಾಧೀಶ ವೀರರುದ್ರ ಗಜಪತಿಯವರಿಗೆ ಒಬ್ಬಳು ಕುಮಾರಿ ಇರುವಳಲ್ಲವೆ ?"

ರಾಮಯಾಮಾತ್ಯನಿಗೆ ಚೇಳು ಕುಟುಕಿದಂತಾಯಿತು. "ಓ! ಮುಕ್ತಾಂಬೆಯೆ ? ಅವಳಿಗೆ ಈಗ ಹದಿಮೂರೋ, ಹದಿನಾಲ್ಕೋ ? ಚಿಕ್ಕಹುಡುಗಿ."

"ಹಾಗೆಂದೇ ಕೇಳಿದ್ದೇವೆ. ನಮ್ಮ ಷಹಾಜಾದಾ ಮಾಲೂ

ಖಾನರಿಗೂ ಹಸಿಸಿಂಟೋ ಇಪ್ಪತ್ತೋ."

"ಆದರೆ ಈಗ ವೀರರುದ್ರ ಗಜಪತಿಗಳು ಕುಟುಂಬ ಸಹಿತ ವಿಜಯನಗರದಲ್ಲಿ ಖೈದಿಗಳಾಗಿರುವರಲ್ಲವೇ? ವೀರರುದ್ರರೊಡನೆ ಮಾತಾಡದೆ ಈ ವಿಷಯಗಳಲ್ಲಿ ಒಂದೂ ಹೇಳಲು ನನಗೆ ಸಾಧ್ಯವಿಲ್ಲ."

"ಅದು ನೀವು ಮಾತಾಡಿ ಒಪ್ಪಿಸಿರಿ. ವೀರರುದ್ರರೀಗ ಎಲ್ಲಿರುವರೆಂದಿರಿ?"

"ವಿಜಯನಗರದ ಬಂದೀಖಾನೆಯಲ್ಲಿ?"

"ಛೇ, ನನ್ನೊಡನೆ ಮುಚ್ಚುಮರೆ ಏಕೆ ಅಮಾತ್ಯರೆ? ಖೈದಿಗಳಾಗಿ ಸಿಕ್ಕಿದವರು ನಿಮ್ಮ ರಾಣಿಯೂ, ಕುಮಾರಿಯೂ ಮಾತ್ರವೇ ಅಲ್ಲವೆ?"

ರಾಮಯಾಮಾತ್ಯನು ಆಶ್ಚರ್ಯದಿಂದ—"ಏನು! ವೀರರುದ್ರರು ವಿಜಯನಗರದ ಸೆರೆಯಲ್ಲಿಲ್ಲವೆ?"

"ನಿಮಗೆ ಗೊತ್ತಿಲ್ಲ?"

"ಅಲ್ಲಿ ಖೈದಿಗಳಾಗಿರುವರೆಂದೇ ನಾನು ನಂಬಿದ್ದೇನೆ. ಅವರು ಅಲ್ಲಿಲ್ಲವೆಂದು ನಿಮಗೆ ಹೇಗೆ ಗೊತ್ತು?"

ತೋಪಲ್‌ಖಾನನು ನಕ್ಕು—"ವಿಜಯನಗರದ ಅಂತಃಪುರದೊಳಗೆ ನಮಗೆ ಒಡಗೊಂಡಿರುವ ಒಂದು ಮುಖ್ಯ ವ್ಯಕ್ತಿಯುಂಟು. ಅದರಿಂದ ನಮಗೆಲ್ಲಾ ಗೊತ್ತು."

"ಅದಾವ ವ್ಯಕ್ತಿಯೋ?"

"ಸ್ತ್ರೀ ವ್ಯಕ್ತಿ! ಮುದುಕಿ. ರಾಯನ ಆಜನ್ಮವೈರಿ!"

"ತಿಪ್ಪಾಂಬೆಯೊ?"

"ಅಚ್ಛಾ!"

"ಆ ಮುದುಕಿ ನಿಮಗೆ ಒಡಗೊಂಡಿರುವುದು ಯಾವ ಪ್ರತ್ಯುಪಕಾರಕ್ಕಾಗಿ?"

"ಅದೋ? ಕೇಳಿರಿ. ನಿಮಗೆ ಹೇಳುವಂಥಾದ್ದೇ. ಈಗ ವಿಜಯನಗರದ ಸಿಂಹಾಸನಕ್ಕೇ ಗೆದ್ದಲು ಹಿಡಿದಿರುವುದೆಂದು ಪಾಪ, ಕೃಷ್ಣದೇವನಿಗೆ ತಿಳಿಯದು. ಈಗ ತಿಪ್ಪಾಂಬೆ ರಹಸ್ಯವಾಗಿ ಕೊಡಲಿಯನ್ನು

ಮಸೆಯುತ್ತಿದ್ದಾಳೆ. ಆ ಮುದುಕಿಯ ಸೋದರರಾದ ವಿರೂಪಾಕ್ಷ ರಾಯರನ್ನು, ಕೃಷ್ಣದೇವನು ಹಿಂದೆ ಶೂಲಕ್ಕೇರಿಸಿದ್ದನಲ್ಲವೆ? ಅದನ್ನು ನೆನೆದು ನೆನೆದು ಉರಿಯುತ್ತಿದ್ದಾಳೆ ಈ ಮುದುಕಿ. ಈಗಂತೂ ಕೃಷ್ಣದೇವನ ಉನ್ನತಿಯೂ, ಅವನ ಮೂಲಕವಾಗಿ ಏರಿರುವ ವಿಜಯ ನಗರದ ವೈಭವವೂ ಅವಳ ಕಣ್ಣುಗಳನ್ನು ಕುಟುಕುತ್ತಿವೆ. ಆ ರಾಜ ನನ್ನೂ ರಾಜಧಾನಿಯನ್ನೂ ಮುರಿದು ಹಾಕಿ ಸಂತೋಷದಿಂದ ಸಾಯ ಬೇಕೆಂಬುದೇ ಆ ಮುದುಕಿಯ ಕೋರಿಕೆ. ನಾವು ಶತ್ರುನಿಗ್ರಹಕ್ಕೆ ಇಂತಹ ಹರಿತವಾದ ಆಯುಧವನ್ನು ಸಂಗ್ರಹಿಸಲೇಬೇಕಲ್ಲವೆ? ಅಂತೆಯೇ ಅವಳಿಗೂ ನಮಗೂ ಗುಪ್ತ ಪತ್ರವ್ಯವಹಾರಗಳು ನಡೆಯು ತ್ತಲೇ ಉಂಟು."

"ವಿಜಯನಗರವು ಬಹಳ ಭದ್ರವಾದ ರಾಜಧಾನಿಯಾಗಿರುವಾಗ, ನಿಮಗೂ ಅವಳಿಗೂ ವ್ಯವಹಾರ ಸಂಬಂಧ ಹೇಗೆ? ಅಲ್ಲದೆ ತಿಪ್ಪಾಂಬೆ ಸ್ವಲ್ಪ ನಿರ್ಬಂಧದಲ್ಲಿದ್ದಾಳೆಂದೂ ಕೇಳಿದ್ದೇನೆ."

"ಅದರಿಂದೇನಾಯಿತು? ಅವಳೇನು ಸಾಮಾನ್ಯವಾದ ಮುದು ಕಿಯೆ? ಮೊದಲು ರಾಣಿಯಾಗಿ, ಅನಂತರ ರಾಜಮಾತೆಯಾಗಿ ಭಾರೀ ಭಾರೀ ಕಾರ್ಯಭಾರ ನಡೆಸಿದವಳಲ್ಲವೆ? ಅವಳು ಈಗ ತನ್ನ ಅಂತಃಪುರದೊಳಗಿನಿಂದ 'ಜೋಳದ ರಾಶಿ'ಯ ಗುಡ್ಡದವರೆಗೆ ಒಂದು ಸುರಂಗವನ್ನು ಗುಟ್ಟಾಗಿ ತೋಡಿಸಿರುತ್ತಾಳೆ."

"ಹಾಗಿದೆಯೆ? ಒಳ್ಳೆಯದು. ನಿಮ್ಮ ಸುಲ್ತಾನರ ಹೇಳಿಕೆ ಯಾದರೂ ಏನು ಹಾಗಾದರೆ?"

"ಮಂತ್ರೀಶರೆ, ಕೇಳಿರಿ. ಈಗ ಕೃಷ್ಣದೇವ ತಿಮ್ಮರಸರು ಕಳಿಂಗದ ಮೇಲೆ ದಂಡಯಾತ್ರೆ ಹೊರಟಿದ್ದಾರೆ. ಅಚ್ಯುತರಾಯನು ರಾಜಕಾರ್ಯ ನಿರ್ವಾಹಕನಾಗಿ ರಾಜಧಾನಿಯಲ್ಲಿದ್ದಾನೆ. ಆದ್ದರಿಂದ ರಾಜಧಾನಿಯನ್ನು ಆಕ್ರಮಿಸಲು ಇದೇ ಸರಿಯಾದ ಸಮಯವೆಂದು ತಿಪ್ಪಾಂಬೆಯ ಒತ್ತಾಯವಿದೆ. ಆದರೆ ವಿಜಯನಗರವು ವಿದ್ಯಾರಣ್ಯ ಸ್ವಾಮಿಪಾದರಿಂದ, ಹಿಂದೂಧರ್ಮ ಸಂರಕ್ಷಣಾರ್ಥವಾಗಿ ಸ್ಥಾಪಿಸಲ್ಪಟ್ಟ ಮಹಾನಗರವೆಂಬುದನ್ನು ನಾವು ಬಲ್ಲೆವು. ಆದ್ದರಿಂದ ಅದನ್ನು

ಹಿಡಿದು ಯೋಗ್ಯರಾದ ಹಿಂದೂ ರಾಜೋತ್ತಮರಿಗೇ ಕೊಡಬೇಕೆಂದು ನಮ್ಮ ಸುಲ್ತಾನರ ಯೋಚನೆ. ಅದಕ್ಕೆ ಗಜಪತಿಗಳೇ ಯೋಗ್ಯರೆಂದೂ ನಿರ್ಣಯಿಸಿದ್ದಾರೆ. ಇನ್ನು ವಿಜಯನಗರವು ನಮ್ಮ ವಶವಾಗುತ್ತಲೆ, ಅಲ್ಲಿ ಸೆರೆಯಾಗಿರುವ ನಿಮ್ಮ ಕುಮಾರಿಯೂ ನಮ್ಮ ಕೈಸೇರುತ್ತಾಳೆ. ವಿಜಯನಗರವನ್ನು ನಿಮಗೆ ಒಪ್ಪಿಸಿ, ಗಜಪತಿ ನಂದಿನಿಯನ್ನು ನಿಮ್ಮ ಒಪ್ಪಿಗೆಯಿಂದಲೇ ಷಹಜಾದಾರಿಗೆ ಲಗ್ನ ಮಾಡಿಸಬೇಕೆಂಬುದು ಸುಲ್ತಾನರ ಇಷ್ಟ."

"ತಿಳಿಯಿತು. ಆದರೆ ವೀರರುದ್ರರಾಜರು ಎಲ್ಲಿರುವರೆಂದು ತಿಳಿಯದೆ, ಅವರೊಡನೆ ಮಾತಾಡದೆ, ಈ ವಿಷಯ ನಾನೇ ನಿಶ್ಚಯ ಮಾಡಿ ಹೇಳುವುದು ಹೇಗೆ?"

"ಅವರು ಇರುವ ಸ್ಥಳ ನಿಮಗೆ ಗೊತ್ತಿರುವುದೆಂದು ಮಾಡಿದ್ದೆ. ಹೇಗೂ ವಿಜಯನಗರವು ನಮ್ಮ ವಶವಾಗುತ್ತಲೇ ಅವರು ಎಲ್ಲಿದ್ದರೂ ಪ್ರಕಟರಾದಾರು. ಅವರನ್ನು ಒಪ್ಪಿಸುವುದು ನಿಮ್ಮ ಕೈಯಲ್ಲಿದೆ. ಅವರು ಹೇಗೂ ನಿಮ್ಮ ಕೈಗೊಂಬೆ ತಾನೆ?"

"ಅದು ಹೇಗೆ ಖಾನ್ ಸಾಹೇಬ್?"

"ಮರೆತೇ ಹೋಯಿತೇನು? ವೀರರುದ್ರರ ಪ್ರಥಮ ರಾಣಿಯ ಗತಿ? ನೀವು ನನ್ನಿಂದ ಸೃಷ್ಟನಾಪತ್ರಗಳನ್ನು ಬರೆಯಿಸಿ, ಅವು ವೀರ ರುದ್ರರಿಗೆ ಸಿಕ್ಕುವಂತೆ ಮಾಡಿದಾಗ, ಅವರು ಕೊಂಚವಾದರೂ ವಿಚಾರ ಮಾಡಿಕೊಂಡರೆ? ಪೂರಾ ನಿಮ್ಮ ಕೈಬೊಂಬೆಯಾಗಲಿಲ್ಲವೆ? ಆಗ ನಿಮ್ಮ ಸಲಹೆಯಂತೆ ಪಾಪ, ಗರ್ಭಿಣಿಯಾದ ಸಾಧ್ವೀ ಸುಭದ್ರಾದೇವಿ ಯನ್ನು ಕಾಡುಪಾಲು ಮಾಡಿಬಿಟ್ಟರಲ್ಲ?"

"ಆ ವಿಷಯ ಈಗೇಕೆ ತೋಪಲ್‌ಖಾನ್? ನಲವತ್ತು ವರ್ಷಗಳ ಹಿಂದಿನ ಆ ಕತೆಯನ್ನು ಕೆದರಿ, ನನ್ನ ಹೃದಯದಲ್ಲಿರುವ ಅಗ್ನಿಗೆ ತುಪ್ಪವನ್ನು ಸುರಿಯಬೇಡಿ."

"ಈ ಬಾಧೆ ನಿಮಗೆ ಮಾತ್ರವೆಂದು ತಿಳಿಯುವಿರೇನು? ಅದಕ್ಕೆ ಇಷ್ಟು ಸಹಾಯ ಮಾಡಿದ ನನ್ನ ಹೃದಯವೂ ಸುಡುತ್ತಿದೆ. ಪಾಪ! ಆ ರಾಣಿಯ ಗತಿ ಏನಾಯಿತೊ?"

"ನಿಮ್ಮ ದಯ! ಈಗ ಆದರ ನೆನಪೇ ಬೇಡ!"

"ಈಗ ಇಷ್ಟೇಕೆ ಹೆದರುವಿರಿ? ಪತಿಯಿಂದ ಪರಿತ್ಯಕ್ತಳಾದ ಆ ಸಾಧ್ವೀಮಣಿ ಎಂದಿಗೂ ಬದುಕಿರಲಿಕ್ಕಿಲ್ಲ. ಈಗ ಪಿಶಾಚಿಯಾಗಿ ಬಂದು ನಿಮ್ಮನ್ನು ಭಯಪಡಿಸುತ್ತಾಳೇನು?"

"ಈ ರಾಮಯಾಮಾತ್ಯನು ಪಿಶಾಚಿಗಳಿಗೆಲ್ಲಾ ಹೆದರುವ ಬ್ರಾಹ್ಮಣನಲ್ಲ! ಏನೋ ಎಳೆತನದ ಚಾಪಲ್ಯದಲ್ಲಿ ಅದೊಂದು ಘೋರಕೃತ್ಯವನ್ನೆಸಗಿಬಿಟ್ಟೆ. ಈಗ ನನ್ನೊಳಗೆ ನಾನೇ ಕೊರಗಿ ಕೊರಗಿ ಸಾಯುತ್ತಿದ್ದೇನೆ. ಆ ಪಾಪವನ್ನು ಕಳೆದುಕೊಳ್ಳಬೇಕೆಂದೇ, ನಾನು ನನ್ನ ಊರು ಕೇರಿ ಸಂಸಾರಗಳ ಸಂಬಂಧವನ್ನೇ ಚಲ್ಲಿಗೊಟ್ಟು, ಗಜ ಸಾಮ್ರಾಜ್ಯದ ಏಕನಿಷ್ಠ ಮಂತ್ರಿಯಾಗಿದ್ದೇನೆ. ಹಾಗಿರುತ್ತಾ ತೋಪಲ್‌ಖಾನ್, ಗಜಪತಿ ನಂದಿನಿಯನ್ನು ಯವನರ ಪಾಲುಮಾಡಲು ನಾನು ಒಪ್ಪುವೆನೆಂದು ತಿಳಿಯುವಿರಾ?"

"ತಪ್ಪೇನಯ್ಯ? ಇದರಿಂದ ನಿಮ್ಮ ಸ್ವಾಮಿಗೆ ಅಭ್ಯುದಯವಾಗುವಾಗ ನಿಮ್ಮ ಸ್ವಾಮಿನಿಷ್ಠೆ ಬೆಳಗಲಿಲ್ಲವೆ? ಗಜರಾಣಿಯೊಬ್ಬಳನ್ನು ಅನ್ಯಾಯವಾಗಿ ಕಾಡುಪಾಲು ಮಾಡಿಕೊಂಡ ಪಾಪವನ್ನು, ಗಜರಾಜ ನಂದಿನಿಯೊಬ್ಬಳನ್ನು ಯವನರಿಗೆ ಕಲ್ಯಾಣಮಾಡಿಸಿ, ಆ ಮೂಲಕ ವಾಗಿ ಗಜರಾಜ್ಯವನ್ನು ವಿಸ್ತಾರಗೊಳಿಸಿ ಆ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬಹುದಲ್ಲಾ?"

"ಓಹೊ! ಎಲ್ಲಿಂದೆಲ್ಲಿಗೋ ಗಂಟು ಹಾಕುವಿರಲ್ಲ? ಆದರೆ ನಿಮ್ಮ ಷಹಾಜಾದರು ಕನ್ಯೆಯನ್ನು ನೋಡಿ ಒಪ್ಪಿಕೊಳ್ಳಬೇಡವೇನು?"

"ನೋಡುವ ಅಗತ್ಯವೇ ಇಲ್ಲವೆಂದು ಷಹಾಜಾದರ ಮತ. ಸತ್ಕುಲೀನ ಕನ್ಯೆಯನ್ನು ನೋಡುವ ಅಗತ್ಯವೇನಿದೆ? ಹೀಗೆ ಷಹಾಜಾದರಿಗೆ ನಿಮ್ಮ ಮುಕ್ತಾ ಕುಮಾರಿಯ ಮೇಲೆಯೇ ಮನಸ್ಸು ಹರಿಯಲು ಕಾರಣವೇನು ಗೊತ್ತೆ? ಅಂದು ವೀರರುದ್ರರ ಪ್ರಥಮ ರಾಣಿ ಸುಭದ್ರಾದೇವಿ ಬರೆದ ರಾಮಾಯಣವೆಂಬ ಅರ್ಥ ಪುಸ್ತಕವೊಂದನ್ನು ಅಡಗಿಸಲು ನೀವು ನನ್ನ ಕೈಯಲ್ಲಿ ಕೊಟ್ಟಿದ್ದಿರಷ್ಟೆ? ನಾನು ಅದನ್ನು ನಮ್ಮ ರಾಯಚೂರು ದುರ್ಗದೊಳಗೆ ಭದ್ರವಾಗಿಟ್ಟಿದ್ದೆ. ಅದನ್ನೊಮ್ಮೆ

ಮಾಲೂಖಾನರು ಓದಿ ನೋಡಿ, ಅದರಲ್ಲಿ ಸೀತಮ್ಮನ ಕಲ್ಯಾಣ, ಅವಳು ಕಾಡಿಗೆ ಹೊರಟ ಅವಳ ಪತಿಭಕ್ತಿ ಇವೆಲ್ಲಾ ಅವರ ಮನಸ್ಸಿಗೆ ನಾಟಿ, ಇಂತಹ ಸುಗುಣಗಳಿರುವ ಒಬ್ಬಳು ಹಿಂದೂ ಕನ್ಯೆಯನ್ನೇ ವರಿಸಿಕೊಳ್ಳಬೇಕೆಂದು ನಿಶ್ಚಯಿಸಿದರು. ಉದಯಗಿರಿಯಿಂದ ಬಂದ ಆ ಗ್ರಂಥದ ಮಹಿಮೆಯೋ ಎಂಬಂತೆ, ಅವರು ಉಧಯಗಿರಿಯ ಕನ್ಯೆಯೊಂದಿಗೇ ವಿವಾಹವಾಗಬೇಕೆಂದು ಹಟ ಹಿಡಿದರು. ನಿಮ್ಮ ಮುಕ್ತಾಕನ್ಯೆಯ ಸೌಂದರ್ಯವನ್ನು ಬಲ್ಲವರಿಂದ ಕೇಳಿ ತಿಳಿದುಕೊಂಡಿದ್ದೇವೆ ಬಿಡಿ. ಷಹಾಜಾದಾ ಮಾಲೂಖಾನರೂ ಒಳ್ಳೆಯ ಗುಣ, ರೂಪ, ಸೌಂದರ್ಯ ಶಾಲಿಗಳಾಗಿದ್ದಾರೆ. ಪ್ರಿಯಮಿತ್ರರೆ, ಈಗಿನ ಪರಿಸ್ಥಿತಿಯಲ್ಲಿ ನಿಮ್ಮ ಒಪ್ಪಿಗೆ ಇಲ್ಲದೆಯೇ ನಮ್ಮ ಕೆಲಸವನ್ನು ತೀರಿಸಿಕೊಳ್ಳಲು ನಮಗೆ ಸಾಧ್ಯವುಂಟು! ವಿಚಾರಮಾಡಿ. ನೀವು ಒಪ್ಪಿದರೆ, ಈಗಿನ ಯುದ್ಧದಲ್ಲಿ ನಿಮಗೆ ನಮ್ಮ ಸಹಾಯವೂ ಸಿಗುವುದು; ವಿಜಯನಗರವೂ ನಿಮ್ಮದಾಗುವುದು! ನೀವು ನನ್ನ ಬಾಲ್ಯ ಮಿತ್ರರೆಂದು ನಂಬಿ, ಈ ಎಲ್ಲಾ ರಹಸ್ಯವನ್ನೂ ಬಿಚ್ಚಿ ಹೇಳಿದ್ದೇನೆ. ಇನ್ನು ನಿಮ್ಮ ಇಷ್ಟ."

"ನೋಡೋಣ ಖಾನ್‌ಸಾಹೇಬ್, ಅದರೆ ಒಂದು ಹೇಳುವೆನು; ಆ ತಿಪ್ಪಾಂಬೆಯ ಮೂಲಕವಾಗಿ ಯಾವ ಕಾರ್ಯವು ಸುಲಭವೆಂದು ತಿಳಿದಿರುವಿರೋ ಅದು ಅಷ್ಟು ಸುಲಭವೆಂದು ನಾನು ನಂಬಲಾರೆ. ಅದಿರಲಿ; ನಾನೀಗಲೇ ವೀರರುದ್ರರಾಜರ ಶೋಧಕ್ಕೂ ತೊಡಗಬೇಕಾಯಿತು. ಹಾಗೆಯೇ ಈ ವಿಷಯ ಪ್ರತಾಪರುದ್ರ ಗಜರಾಜರೊಡನೆಯೂ ಯೋಚಿಸಿಕೊಂಡು, ವಿಶೇಷವಿದ್ದರೆ ನಾನೇ ಸುಲ್ತಾನರ ದರ್ಶನಕ್ಕೆ ಬರುತ್ತೇನೆ."

ಹೀಗೆ ಅವರ ಮುಖ್ಯವಾದ ಮಾತುಕತೆ ಮುಗಿಯಿತು. ಅನಂತರ ಅವರು ಬೇರೆ ವಿಷಯ ಮಾತಾಡುತ್ತ ಅಲ್ಲಿಂದೆದ್ದರು.

೪

ಅಂದು ರಾತ್ರಿ ಎಲ್ಲರೂ ಗೊರಕೆ ಹೊಡೆಯುತ್ತಿದ್ದಾಗ, ಅಜ್ಞಾತಾ ದೇವಿ ಮಾದರಸನೊಂದಿಗೆ ಗುಸು ಗುಸು ಮಾತಾಡುತ್ತಿದ್ದಳು. ಅವನು ಬಹಳ ಭಕ್ತಿಶ್ರದ್ಧೆಗಳಿಂದ ಅವಳ ಹೇಳಿಕೆಗಳನ್ನು ಶಿರದೊಳಾಂತು ಕೊಳ್ಳುತ್ತಿದ್ದನು. ಕಟ್ಟಕಡೆಗೆ ಅವಳು, "ಅಣ್ಣಾ! ಬಂಧುನಾಯಕ, ನಿನಗೇನೂ ಹೆಚ್ಚಿಗೆ ಹೇಳಬೇಕಾಗಿಲ್ಲ. ಕೊಬ್ಬಿದ ಘಾತುಕನಾದ ಕೃಷ್ಣದೇವರಾಯನಿಗೆ ನನ್ನ ತಂಗಿ ರುಚೀಕುಮಾರಿಯನ್ನು ಎಂದಿಗೂ ಸಿಕ್ಕಿಸಬೇಡ. ಪ್ರತಾಪರುದ್ರರು ಅವಸರದಿಂದ ಅವಳ ಇಚ್ಛೆಗೆ ವಿರುದ್ಧವಾಗಿ ಮದುವೆ ಮಾಡಲೆಳಸಿದರೆ, ಅದಕ್ಕೆ ಖಂಡಿತ ತಡೆಯನ್ನುಂಟುಮಾಡು. ಮುಖ್ಯ ಅವಳನ್ನು ಹಾರಿಸಿಕೊಂಡೇ ಬರಬೇಕು. ಯಾವಾಗ ವೀರರುದ್ರರು ನನ್ನ ಕೈಯೊಳಗೆ ಸಿಕ್ಕಿರುವರೋ, ಈ ರಾಮಯ್ಯಮಂತ್ರಿ ನನ್ನ ಬಾಯಿಗೆ ಬಿದ್ದ ಹಾಗೆಯೇ ಸರಿ. ನಾಗನ ಹೆಡೆಯ ನೆಳಲಲ್ಲಿರುವ ಕಪ್ಪೆಯ ಹಾಗೆ ಇವನು ಸ್ವಲ್ಪ ಕಾಲ ಸ್ವೇಚ್ಛಾವಿಹಾರಿಯಾಗಿರಲಿ ಬೇಕಾದರೆ. ಅಷ್ಟರೊಳಗೆ ನಾನು ಇವನ ಸಂಬಂಧದ ಬೇರೆ ವಿಷಯಗಳನ್ನು ಶೇಖರಿಸಿಕೊಳ್ಳುತ್ತೇನೆ. ಆಹಾ! ಈ ದಿನ ಎಂತಹ ಅಪೂರ್ವವಾದ ಹೊಸ ವಿಷಯವು ಸಿಕ್ಕಿತು!" ಎಂದಳು.

ಬೆಳಗಾದ ಮೇಲೆ ತೋಪಲ್‌ಖಾನನು ಹೊರಟುಹೋದನು. ಸ್ವಲ್ಪಹೊತ್ತಿನಲ್ಲಿ ರಾಮಯಾಮಾತ್ಯನನ್ನು ಹುಡುಕಿಕೊಂಡು, ಕಟಕ

ನಗರಿಯಿಂದ ದೂತನೊಬ್ಬನು ಬಂದು, "ಸ್ವಾಮಿ, ಅಮಾತ್ಯಶೇಖರರೆ, ಪ್ರತಾಪರುದ್ರ ಗಜರಾಜಪ್ರಭುಗಳು ಆಜ್ಞಾಪಿಸಿರುವುದೇನೆಂದರೆ, ಪ್ರಕೃತ ಉತ್ಕಲಸಾಮ್ರಾಜ್ಯಕ್ಕೆ ದೊಡ್ಡ ಆಪತ್ತು ಬಂದೊದಗಿದೆ. ದುರ್ಗಾಧೀಶರಾದ ಪಾತ್ರ ಪ್ರಭೃತಿಗಳು, ಮಹಾ ಪರಾಕ್ರಮಿಗಳಾಗಿದ್ದರೂ, ತಮ್ಮ ಮಂತ್ರಾಲೋಚನೆಯು ಅತೀ ಅಗತ್ಯವಾಗಿದೆ. ಆದ್ದರಿಂದ ತಾವು ಉದಯಗಿರಿಯ ಸಂಬಂಧದ ಯಾವತ್ತೂ ಕಾರ್ಯವಿಭಾಗಗಳನ್ನು ಸಮರ್ಥರಾದ ಬೇರೆಯವರಿಗೆ ಬಿಟ್ಟುಕೊಟ್ಟು ರಾಜಧಾನಿಗೆ ಬಿಜಯ ಮಾಡಬೇಕು" ಎಂದನು.

ಇದನ್ನು ಕೇಳಿ ರಾಮಯಾಮಾತ್ಯನು, ಬೇರೆ ಯೋಜನೆಗಳನ್ನೆಲ್ಲಾ ಬದಿಗಿಟ್ಟು ಕಟಕಪುರಾಭಿಮುಖನಾದನು. ಆಗ ಅಜ್ಞಾತಾದೇವಿ ಅವನನ್ನು ಕುರಿತು, "ಮಂತ್ರಿ ಮಹಾಶಯರೆ, ಈಗ ಕಾಲ ವಿಳಂಬದಿಂದ ಕಾರ್ಯವು ಕೆಡುವಹಾಗಿದೆ. ನಾನೂ ನಿಮ್ಮೊಂದಿಗೆ ಬಂದು ಗಜರಾಜರ ಅಪ್ಪಣೆ ಪಡೆದು ನನ್ನ ಸಹಾಯವನ್ನು ತರುವುದೆಂದರೆ ವಿಳಂಬವಾಗುತ್ತದೆ. ನನ್ನ ಮಾದರಸಣ್ಣನು ನಿಮ್ಮೊಂದಿಗೆ ಬಂದು ಗಜಪತಿಗಳ ಭೇಟಿ ಮಾಡುವನು. ನಾನೀಗಲೇ ನನ್ನ ಗುಪ್ತಾಗಾರಕ್ಕೆ ಹೋಗಿ, ಬಂಧುಸೇನೆಯನ್ನು ಸಿದ್ಧಗೊಳಿಸಿಕೊಂಡು ಬರುತ್ತೇನೆ. ನಾನು ಹೋದರೇನೇ ಸೇನಾಶೇಖರಣವು ಬೇಗನೇ ಆಗುವುದು" ಎಂದಳು. ರಾಮಯಾಮಾತ್ಯನು ಅದಕ್ಕೆ ತಡೆಯಾಡಿದರೂ ಅವಳು ಕೇಳಲಿಲ್ಲ.

"ಅಮಾತ್ಯಶಿಖಾಮಣಿಗಳೆ, ನೀವು ನನ್ನ ಮಾತನ್ನು ಕೇಳಿರಿ. ನಂಬಿರಿ! ಸಂದೇಹ ಪಡಬೇಡಿರಿ! ನಿಮಗೆ ಗೊತ್ತಿಲ್ಲದ ಅನೇಕ ರಹಸ್ಯಗಳು ನನಗೆ ಗೊತ್ತಿವೆ. ಒಂದೇ ಉದಾಹರಣೆಯಿಂದ ನಿಮಗೆ ಸ್ಪಷ್ಟಪಡಿಸುವೆನು. ವೀರರುದ್ರ ಗಜಪತಿಗಳು ವಿಜಯನಗರದಲ್ಲಿ ಖೈದಿಗಳಾಗಿರುವರೆಂದು ಎಲ್ಲರಂತೆ ನೀವೂ ನಂಬಿರುವಿರಿ. ಅವರು ಅಲ್ಲಿಲ್ಲ. ಎಲ್ಲಿರುವರೆಂದು ನನಗೆ ಖಂಡಿತವಾಗಿ ಗೊತ್ತಿಲ್ಲದಿದ್ದರೂ, ಇಂತಹಲ್ಲಿರುವರೆಂದು ಊಹಿಸಿದ್ದೇನೆ. ಇನ್ನು ಅವರೊಂದಿಗೇ ನನ್ನ ದರ್ಶನ ನಿಮಗಾದೀತು. ನೆನಪಿರಲಿ!" ಎಂದು ಅಜ್ಞಾತ್ರಿದಂತೆ

ಹೇಳಿ ರಾಮಯಾಮಾತ್ಯನನ್ನು ಅಚ್ಚರಿವಡಿಸಿ ಹೊರಟೇಹೋದಳು.

ಅದೇನೋ? ಅವಳ ಶಕ್ತಿಯ ಮುಂದೆ ರಾಮಯಾಮಾತ್ಯನು ಕುಂಠಿತನಾಗುತ್ತಿದ್ದನು. ಅವಳ ಪ್ರತಿಭೆಯ ಮುಂದೆ ಅವನು ಅಪ್ರತಿಭನಾಗುತ್ತಿದ್ದನು. ಅವನಿಗೆ ಗೊತ್ತಿಲ್ಲದ ರಹಸ್ಯಗಳು ಅವಳಿಗೆ ಗೊತ್ತಿದೆಯೆಂದರೆ ಏನಾಶ್ಚರ್ಯ! ವೀರರುದ್ರರೊಂದಿಗೇ ಇನ್ನು ಅವಳ ಭೇಟಿಯಂತೆ!

ಅವಳನ್ನು ತಡೆಯಲು ಶಕ್ತಿಹೀನನಾದ ರಾಮಯಾಮಾತ್ಯನು ಅವಳು ಹೋದಮೇಲೆ ಮಾದರಸನೊಡನೆ ಅನೇಕ ಪ್ರಶ್ನೆಗಳನ್ನು ಮಾಡಿದನು. ಅವನೇಕೆ ಆ ದೇವಿಯ ರಹಸ್ಯಗಳನ್ನು ಹೇಳುವನು? 'ಆಗಲಿ. ಅವಳು ಹೇಳಿದಂತೆ ನಡೆದರಂತೂ ಒಳ್ಳೆಯದೇ. ಇಲ್ಲದಿದ್ದರೂ ಅವಳೇನೂ ನನ್ನ ದೃಷ್ಟಿಗೆ ತಪ್ಪಿಹೋಗುವುದಿಲ್ಲ. ಇನ್ನು, ಅವಳು ಉದಯಗಿರಿಯ ಬೊಕ್ಕಸವನ್ನು ಹರಣಮಾಡಿ ಕಳುಹಿಸಿದವರ ಬೆನ್ನುಹತ್ತುವಂತೆ, ನಾನು ಚತುರರಾದ ಇಬ್ಬರು ಬಂಟರನ್ನು ಕಳುಹಿಸಿಯೇ ಇದ್ದೇನೆ ....' ಹೀಗೆಯೇ ಯೋಚಿಸುತ್ತಾ ರಾಮಯಾಮಾತ್ಯನು, ಮಾದರಸನೊಂದಿಗೆ, ಪಯಣದ ಮೇಲೆ ಪಯಣವನ್ನು ಮಾಡುತ್ತ ಕಟಕನಗರಿಗೆ ಹೋಗುತ್ತಿದ್ದನು. ಆಗ ಅಶುಭ ವಾರ್ತೆಗಳೇ ಕೇಳಿಬರಲಾರಂಭಿಸಿದುವು. ಕೊಂಡವೀಡು ದುರ್ಗವು ರಾಯನ ಕೈವಶವಾಯಿತೆಂದೂ, ಅಲ್ಲಿ ಹೋರಾಡಿದ ಪ್ರತಾಪರುದ್ರ ಗಜಪತಿಯ ಪುತ್ರ ವೀರಭದ್ರಕುಮಾರನು ರಾಯನ ಸೆರೆಯಾಳಾದನೆಂದೂ ಕೇಳಿದನು. ರಾಯನ ಅಗಣಿತ ಸೇನಾಪ್ರವಾಹವು ವೆಂಗಿ, ಗೋದಾವರೀ ಮಂಡಲಗಳ ಮಾರ್ಗವಾಗಿ ಬೆಲ್ಲಂಗೊಂಡದ ಕಡೆಗೆ ಸಾಗುತ್ತಿದ್ದು, ಅವನು ಬೆಲ್ಲಂಗೊಂಡ ಪ್ರಾಂತವನ್ನು ತಲಪುವುದರೊಳಗೆ, ಅಲ್ಲೆಲ್ಲಾ ವಿಜಯನಗರದ ಸೈನ್ಯವು ಮುತ್ತಿಗೆ ಹಾಕಿತ್ತು. ದುರ್ಗದೊಳಗೆ ಹೋಗಿ ಮಹೇಶ್ವರಪಾತ್ರನನ್ನು ಕಂಡು ಮಾತಾಡುವುದು, ಅನಾನುಕೂಲವೂ ಕಾಲವಿಳಂಬವೂ ಆಗುವುದೆಂದು ಭಾವಿಸಿ, ರಾಮಯಾಮಾತ್ಯನು ಅವನಿಗೆ ಧೈರ್ಯವಾರ್ತೆಗಳನ್ನು ಮಾತ್ರ ಹೇಳಿಕಳುಹಿಸಿ, ಭರದಿಂದ ಮುಂದಕ್ಕೆ ನಡೆದನು. ಹೋಗುತ್ತಾ ನಾಗೂರು, ಅದ್ದಂಕಿ,

ಕೇದವರಂ, ಸಿಂಹಾದ್ರಿ ಮೊದಲಾದ ಮುಖ್ಯ ಮುಖ್ಯ ದುರ್ಗಪಾಲ, ನಗರಪಾಲಕರಿಗೆ ಧೈರ್ಯೋತ್ಸಾಹಗಳನ್ನೂ ಎಚ್ಚರಿಕೆಗಳನ್ನೂ ಹೇಳಿ ಕಳುಹಿಸಿ, ಮಹಾನದಿಯನ್ನು ದಾಟಿ, ಕಟಕ ಮಹಾರಾಜಧಾನಿಯನ್ನು ಸೇರಿ, ಪ್ರತಾಪರುದ್ರ ಗಜಪತಿಯನ್ನು ಸಂಧಿಸಿದನು.

ಉತ್ಕಲ ಸಾಮ್ರಾಜ್ಯದ ಆಧಾರಸ್ತಂಭಗಳಂತೆ ವೀರ 'ಪಾತ್ರ'ರು ದುರ್ಗಾಧೀಶರಾಗಿದ್ದರೂ, ಪೂರಾ ಅವರ ಮೇಲೆ ಭಾರವನ್ನು ಹೊರಿಸಿದರೆ ಅವರು ತಾಳಿಯಾರೆ? ಮುಖ್ಯವಾಗಿ ಶತ್ರುವನ್ನು ಉತ್ಕಲ ಪ್ರಾಂತ ದಿಂದ ಹಿಮ್ಮೆಟ್ಟಿಸಬೇಕು. ಇದಕ್ಕೇನು ಉಪಾಯವೆಂದು ರಾಮಯಾ ಮಾತ್ಯನೂ ಗಜರಾಜನೂ ಗುಪ್ತವಾಗಿ ಮಂತ್ರಾಲೋಚನೆ ಮಾಡಿ ಕೊಂಡಿದ್ದರು. ಅದು ಪೂರ್ತಿಯಾಗುವುದರೊಳಗೆ ಅಕಾಲದ ಸಿಡಿಲಿ ನಂತಹ ವಾರ್ತೆಗಳು ಬಂದುವು. 'ದುರ್ಗಾಧಿಪತಿಗಳಾದ ಪಾತ್ರೇಯ ರೆಲ್ಲರೂ ನಮ್ಮ ದುರ್ಗಗಳನ್ನು ಅನಾಥವಾಗಿ ಬಿಟ್ಟುಕೊಟ್ಟು ಹೊರಟು ಹೋದರು. ಅರಾಜಕ ದುರ್ಗಗಳನ್ನು ಶತ್ರುಗಳು ಹಿಡಿಯುತ್ತಿದ್ದಾರೆ' ಎಂಬ ಸುದ್ದಿಗಳನ್ನು ಕೇಳಿ ಭಯಚಕಿತರಾದರು. ಚಾರರನ್ನು ಓಡಿಸಿ ಕೂಲಂಕಷ ವಿಷಯವನ್ನು ತಿಳಿಯಬೇಕೆನ್ನುವಷ್ಟರಲ್ಲಿ ಬೆಲ್ಲಂಗೊಂಡ ದಿಂದ ದೂತನೊಬ್ಬನು ಒಂದು ಲಿಖಿತವನ್ನು ತಂದು ಪ್ರತಾಪರುದ್ರನಿಗೆ ಸಮರ್ಪಿಸಿದನು. ರಾಜಮಂತ್ರಿಗಳು ಅದನ್ನು ಓದಿನೋಡಿ- 'ಹಾ! ಇದೇನು!' ಎಂದು ಚೀರಿ, ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಸ್ತಂಭಿತರಾದರು!

ಆ ಪತ್ರದ ಒಕ್ಕಣೆ ಏನೆಂದರೆ :

"ಉತ್ಕಲಚಕ್ರವರ್ತಿ ರಾಜ ಪ್ರತಾಪರುದ್ರ ಗಜಪತಿ ಸಾರ್ವ ಭೌಮರ ಸನ್ನಿಧಾನಕ್ಕೆ, ಬೆಲ್ಲಂಗೊಂಡ ದುರ್ಗಾಧೀಶ ಮಹೇಶ್ವರ ಪಾತ್ರನು, ಏಕಾದಶ ದುರ್ಗಾಧೀಶ ಪಾತ್ರರ ಪರವಾಗಿ ಸಮರ್ಪಿಸಿ ಕೊಳ್ಳುವ ಅರಿಕೆ. ನಾವು ಈವರೆಗೆ ಗಜಪತಿ ಸಿಂಹಾಸನದ ಏಕನಿಷ್ಠ ಸೇವೆಯನ್ನು ಮಾಡಿದುದಕ್ಕೆ ತಾವು ಹೀಗೆ ಭೃತ್ಯವಂಚನೆ ಮಾಡೀರೆಂದು ನಾವು ನಂಬಿರಲಿಲ್ಲ. ತಾವು ಹಿಂದೆ ನಿಂತು ನಮ್ಮನ್ನು ಹುರಿದುಂಬಿಸಿ ಹೂಡಿಸುವ ಹೋರಾಟವು ಒಂದು ಕಪಟ ನಾಟಕವೆಂದು ನಮಗೆ

ಚೆನ್ನಾಗಿ ಗೊತ್ತಾಯಿತು. ‘ದ್ರಾವಿಡರಾಯನಿಗೆ ಕನ್ಯೆಯನ್ನು ಕೊಡಲಾರೆ’ ನೆಂದು ಬಹಿರಂಗದಲ್ಲಿ ಮೇಲ್ಮೆಯನ್ನು ಹೇಳಿಕೊಳ್ಳುತ್ತಾ ಅಂತರಂಗದಲ್ಲಿ ನಿಮ್ಮ ಕುಮಾರಿಯನ್ನು ರಹಸ್ಯವಾಗಿ ರಾಯನ ಶಿಬಿರಕ್ಕೆ ಕಳುಹಿಸಿದಿರಲ್ಲ! ನಿಮ್ಮ ಕುಮಾರಿಯೇ ಸತ್ಯವನ್ನು ನಮಗೆ ತಿಳಿಸಿ, ಕೃಷ್ಣದೇವನೇ ತನ್ನ ಪತಿಯೆಂದು ಹೇಳಿ ಹೊರಟುಹೋದಳು. ತಾವು ಕಾಣಿಕೆ ಸಹಿತ ಕನ್ಯೆಯನ್ನು ಶತ್ರುವಿನ ಪಾದಕ್ಕೆ ಸಮರ್ಪಿಸಿದ್ದೀರಿ. ಇದರಿಂದ, ನಮ್ಮನ್ನು ಮಾತ್ರ ಮರಿಯ ಬಡಿಯಿಸುವುದೇ ನಿಮ್ಮ ಉದ್ದೇಶವೆಂದು ನಮಗೆ ಗೊತ್ತಾಯಿತು. ಇದಾವುದೂ ಅರಿಯದವರಂತೆ ರಾಮಯಾಮಾತ್ಯರು, ಉದಯಗಿರಿಯನ್ನು ಸ್ವಾಧೀನಪಡಿಸಿಕೊಳ್ಳುವ ನೆವದಿಂದ ದೂರನಿಂತು, ಸುಳ್ಳೇ ಹೇಳಿ ನಮ್ಮಿಂದ ಎರಡುಸಾವಿರ ಸೇನೆಯನ್ನು ತರಿಸಿಕೊಂಡು, ಬಹುಭಾಗವನ್ನು ವಿಜಯನಗರದ ಸೇನೆಯಲ್ಲಿ ಸೇರಿಸಿಬಿಟ್ಟರು. ಅವರು ನಮ್ಮ ದುರ್ಗದ ಬಳಿಯಾಗಿ ಹೋದರೂ, ಎದುರಿಗೆ ಬರಲು ಮುಖವಿಲ್ಲದವರಾಗಿ ಸೇವಕನ ಮುಖಾಂತರ ಧೈರ್ಯ ಹೇಳಿ ಕಳುಹಿಸಿದ್ದಾರೆ. ಇರಲಿ. ಪ್ರಭುವಿಗೆ ಬುದ್ಧಿ ಹೇಳುವ ಸ್ವಾತಂತ್ರ್ಯವು ನಮಗಿಲ್ಲ. ಆದರೆ ಭೃತ್ಯದ್ರೋಹಿಗಳಾದ ಪ್ರಭುವಿನ ಸೇವೆಯನ್ನು ತ್ಯಾಗಮಾಡುವ ಸ್ವಾತಂತ್ರ್ಯವು ನಮಗಿದೆ. ಮನ್ನಿಸಿರಿ. ನಾವು ಹನ್ನೊಂದು ಮಂದಿ ಪಾತ್ರೇಯರೂ ಒಂದಾಗಿ ಯೋಚಿಸಿ ನಮ್ಮ ದುರ್ಗಾಧಿಪತ್ಯವನ್ನು ಬಿಟ್ಟುಗೊಟ್ಟು ಹೊರಟು ಹೋಗಿದ್ದೇವೆ. ನಮ್ಮ ಮೇಲೆ ವ್ಯರ್ಥಾಪವಾದವನ್ನು ಹೇರಬಾರದೆಂದು, ನಮಗೆ ಜೋಡಿತ ಎರಡು ಪತ್ರಗಳನ್ನೂ ಇದರೊಂದಿಗೆ ಕಳುಹಿಸಿರುತ್ತೇವೆ. ಹೆಚ್ಚಿನ ವಿವರಗಳನ್ನು ದೂತನೊಡನೆ ಕೇಳಿದರೆ ತಿಳಿದೀತು. ಇತಿಪ್ರಣಾಮಗಳು.

—ಪಾತ್ರಾಗ್ರಜ—ಮಹೇಶ್ವರ ಪಾತ್ರ”

ಈ ಪತ್ರಗಳನ್ನು ತಂದ ದೂತನನ್ನು ವಿಚಾರಿಸಲಾಗಿ, ಅವನು ಹೇಳಿದ ಕತೆ ಹೀಗಿತ್ತು :

ಒಂದು ದಿನ ಸಂಜೆಯಲ್ಲಿ ಬೆಲ್ಲಂಗೊಂಡದ ಬಳಿಯ ಗೊಂಡವಿಯ ದಾರಿಯಲ್ಲಿ, ಪರದೇಶದ ವರ್ತಕನೊಬ್ಬನು, ಅಶ್ವಾರೋಹಿಯಾಗಿ ಒಂದು ಪೆಟ್ಟಿಗೆಯನ್ನು ಸಾಗಿಸಿಕೊಂಡು ಹೋಗುತ್ತಿದ್ದನಂತೆ. ಅವನು

ಕಾಡಿನೊಳಗಿಂದಾಗಿ ಕಳ್ಳನಂತೆ ಹೋಗುವುದನ್ನು ನೋಡಿ ರಾಜ ದೂತರು ಸಂದೇಹದಿಂದ ಅವನನ್ನು ಹಿಡಿದು ವಿಚಾರಿಸಿದರು. ತಾನು ಸಿಂಹಳದ ಸಾವುಕಾರ, ಡಿಲ್ಲಿಯ ಕಡೆಗೆ ಹೋಗುತ್ತೇನೆ ಎಂದು ಅವನು ಹೇಳಿದನು. ಅವನಲ್ಲಿ ಪ್ರಯಾಣದ ಚೀಟಿ ಇಲ್ಲದ ಕಾರಣ ಬಲವಂತ ದಿಂದ ಆ ಪೆಟ್ಟಿಗೆಯನ್ನು ಒಡೆದು ನೋಡಲಾಯಿತು. ಅದರೊಳಗೆ ಅಮೂಲ್ಯವಾದ ಮುತ್ತು ರತ್ನಗಳೂ ಒಂದು ಪತ್ರವೂ ಹೊರಟವು. ಆ ಪತ್ರದಲ್ಲಿ,

"ಶ್ರೀಮದುತ್ಕಲ ಚಕ್ರವರ್ತಿ ಪ್ರತಾಪರುದ್ರ ಗಜಪತಿಗಳ ದಿವ್ಯ ಶ್ರೀ ಸನ್ನಿಧಿಗೆ, ಶ್ರೀಮದ್ವಿದ್ಯಾನಗರಾಧೀಶ್ವರ ಕೃಷ್ಣದೇವರಾಯನು ಬರೆಯಿಸಿದ ಪ್ರತ್ಯುತ್ತರವೇನೆಂದರೆ, ತಾವು ತಮ್ಮ ಕುಮಾರಿ ರುಚೀದೇವಿಯನ್ನು ನಮಗೆ ಕೊಟ್ಟು ಸಂಧಿಮಾಡಿಕೊಳ್ಳುವುದಾಗಿಯೂ, ಕುಮಾರಿಯನ್ನು ನಮ್ಮ ಕಡೆಗೆ ಕಳುಹಿಸಿರುವಿರಾಗಿಯೂ ತಾವು ಮುಂದಾಗಿ ಕಳುಹಿಸಿದ ಪತ್ರದ್ವಾರ ತಿಳಿದು ಸಂತೋಷವಾಯಿತು. ಇಂದು ನಾಳೆಯೊಳಗೆ ತಮ್ಮ ಕುಮಾರಿಯ ಆಗಮನವಾದೀತೆಂದು ನಂಬುತ್ತೇವೆ. ಹೆಚ್ಚಿನ ವಿವರಗಳನ್ನು ಶ್ರೀ ರಾಮಯಾಮಾತ್ಯರು ನಮಗೆ ತಿಳಿಸಿರುತ್ತಾರೆ. ಆ ಪ್ರಕಾರ ನಿಮ್ಮ ಕುಮಾರಿಯ ಆಗಮನವನ್ನು ನಾವು ರಹಸ್ಯವಾಗಿಟ್ಟುಕೊಂಡು, ನಿಮ್ಮ ಪಾತ್ರ ಪ್ರಮುಖರೊಡನೆ ಯುದ್ಧವನ್ನು ಮಾಡುವೆವು. ಕುಮಾರಿಯನ್ನು ನಾವು ಅಪಹರಿಸಿದೆವೆಂಬ ಪುಕಾರು ಹುಟ್ಟಿಸಿ ಪಾತ್ರರನ್ನು ಹುರಿಗೊಳಿಸುವ ಭಾರವು ನಿಮಗೇ ಸೇರಿದ್ದು. ಇದನ್ನು ಒತ್ತಿ ಬರೆಯುವುದೇಕೆಂದರೆ, ನಿಮಗಿಂತಲೂ ನಿಮ್ಮ ಹನ್ನೊಂದು ದುರ್ಗಾಧಿಪತಿಗಳಾದ ಪಾತ್ರರೇ ನಮಗೆ ಹೆಚ್ಚಿನ ವೈರಿಗಳು. ನಿಮ್ಮೊಂದು ನೆವದಿಂದ ಪಾತ್ರರನ್ನು ಜೈಸುವುದೇ ನಮ್ಮ ಧ್ಯೇಯ. ನೀವು ನಮ್ಮೊಂದಿಗೆ ನೆಂಟಸ್ತನ ಮಾಡಿಕೊಂಡರೂ ನಿಮ್ಮ ಪಾತ್ರರು ಮಾತ್ರ ಪುನಃ ಶಾಂತಿಯನ್ನು ಕೆಡಿಸದೇ ಬಿಡರು. ಆದ್ದರಿಂದ ಪಾತ್ರರಿಗೆ ನಮ್ಮ ಮೇಲೆ ಕೋಪವನ್ನು ಏರಿಸಿ, ಹುರಿದುಂಬುವಂತೆ ನೀವೇ ಗಾಳಿ ಹಾಕಬೇಕು. ಈ ಪತ್ರದೊಂದಿಗೆ ಮಂಗಳದ್ರವ್ಯ ಸಹಿತವಾದ ಅಲ್ಪ ಕಾಣಿಕೆಗಳನ್ನು ಕಳುಹಿಸಿರುತ್ತೇವೆ. ನಿಮ್ಮ ಕುಮಾರಿ ನಮ್ಮ ಶಿಬಿರವನ್ನು

ಸೇರುತ್ತಲೇ, ವೀರಭದ್ರಕುಮಾರರನ್ನು ಸಗೌರವವಾಗಿ ಕಳುಹಿಸಿಕೊಡು ತ್ತೇವೆ. ಇತಿ ಪ್ರಣಾಮಗಳು. —ಶ್ರೀ ಕೃಷ್ಣದೇವರಾಯ" ಎಂದಿತ್ತು.

ಈ ಪತ್ರವನ್ನು ನೋಡಿ ಮಹೇಶ್ವರ ಪಾತ್ರನ ಹೊಟ್ಟೆಗೆ ಬೆಂಕಿ ಬಿದ್ದ ಹಾಗಾಯಿತು. ಇನ್ನು ಪೂರ್ಣ ಪರೀಕ್ಷಿಸಿಯೇ ನೋಡಬೇಕೆಂದು, ಸುತ್ತುಮುತ್ತ ದೂರದ ಅಡವಿಗಳಲ್ಲೆಲ್ಲಾ ಅನೇಕ ಬೇಹುಗಾರರನ್ನಿಟ್ಟನು.

ಮರುದಿನ ಮಧ್ಯಾಹ್ನದ ಸಮಯದಲ್ಲಿ ಒಂದು ಸಣ್ಣ ಸವಾರರ ಗುಂಪು, ಘೋಷಾ ಹೆಂಗಸೊಬ್ಬಳನ್ನು ಸಾಗಿಸಿಕೊಂಡು ರಾಯನ ಶಿಬಿರದ ಕಡೆಗೆ ಹೋಗುತ್ತಿರುವುದು ತೋರಿತು. ಒಡನೆಯೇ ಮಹೇಶ್ವರಪಾತ್ರನು ಒಂದು ತುಂಡು ಸೇನೆಯೊಂದಿಗೆ ಭರದಿಂದ ಹೋಗಿ ಅವರನ್ನು ಅಡಗಿಸಿದನು. ಆಗ ಅವರೊಳಗಿದ್ದ ಮುದುಕನು ದೂರಕ್ಕೆ ಓಡಿಹೋಗುತ್ತಾ, ಟೊಂಕದೊಳಗಿದ್ದೊಂದು ಪತ್ರವನ್ನು ನಾಶಪಡಿಸಲು ಪ್ರಯತ್ನಿಸಿದನು. ಅದನ್ನು ಕಂಡು ಮಹೇಶ್ವರಪಾತ್ರನು ಆ ಪತ್ರವನ್ನು ಕಸಿದುಕೊಂಡು ಬರುವಂತೆ ಒಬ್ಬ ವೀರನನ್ನು ಓಡಿಸಿದನು. ಆ ಮುದುಕನಿಗೂ ಆ ವೀರನಿಗೂ ಸಣ್ಣದೊಂದು ಉರುಳಾಟವಾಯಿತು. ಆ ಮುದುಕನು ಓಲೆಯನ್ನು ಬಾಯಿಯೊಳಗೆ ಹಾಕಿ ಕಚಕಚನೆ ಜಗಿಯುತ್ತಿದ್ದಾಗ, ಅರ್ಧಭಾಗವನ್ನು ಮಾತ್ರ ಹರಿದುಕೊಳ್ಳಲು ಆ ಸೇವಕನಿಗೆ ಸಾಧ್ಯವಾಯಿತು. ಉಳಿದ ಭಾಗವನ್ನು ಆ ಚತುರ ಮುದುಕನು ಜಗಿದು ಮುದ್ದೆಮಾಡಿ ಉಗುಳಿಬಿಟ್ಟಿದ್ದ.

ಮಹೇಶ್ವರಪಾತ್ರನು ಆ ಹೆಂಗಸು ಯಾರೆಂದು ವಿಚಾರಿಸಿದನು. ಮೊದಲು ಏನೇನೋ ಸುಳ್ಳೇ ಪ್ರತ್ಯುತ್ತರ ಕೊಟ್ಟರು. ಕಡೆಗೆ ಮಹೇಶ್ವರಪಾತ್ರನು, ಆ ಸೇವಕನ ಕೈಗೆ ಸಿಕ್ಕಿದ ಅರ್ಧಪತ್ರವನ್ನು ಓದಿದಾಗ, ಅವರು ಸಿಕ್ಕಿಬಿದ್ದಂತಾದರು. ಆಗ ಆ ಘೋಷಾ ಸ್ತ್ರೀಯೇ ದಿಟ್ಟತನದಿಂದ—"ನಾನು ನನ್ನ ಇಚ್ಛಾ ಪ್ರಕಾರ ಪತಿಗೃಹಕ್ಕೆ ಹೋಗುತ್ತಿದ್ದೇನೆ. ನನ್ನ ತಂದೆ ಗಜರಾಜೇಂದ್ರರ ಅನುಮತಿಯಿಂದಲೇ ಹೊರಟಿದ್ದೇನೆ. ನನ್ನನ್ನು ತಡೆಯುವುದು ನಿಮಗೆ ತರವಲ್ಲ" ಎಂದಳು. ಮಹೇಶ್ವರ ಪಾತ್ರನು ಅಸಹ್ಯದಿಂದ—"ಓಹೋ ! ಗಜರಾಜ ಕುಮಾರಿ, ನಿಮ್ಮ ವಿವಾಹವಾದುದು ಈಗತಾನೆ ನಮಗೆ ತಿಳಿಯಿತು. ಒಳ್ಳೇದು.

ನಿಶ್ಚಿಂತೆಯಿಂದ ತೆರಳಿರಿ!" ಎಂದು ಹೋಗಗೊಟ್ಟನು. ನಂತರ ಅವರೆಲ್ಲಾ ರಾಯನ ಶಿಬಿರಕ್ಕೆ ಹೋಗಿಮುಟ್ಟಿದುದೂ ಗೊತ್ತಾಯಿತು.

ಆ ಅರ್ಧಪತ್ರದಲ್ಲಿ "ಶ್ರೀ ಮದ್ವಿದ್ಯಾನಗರದ ರತ್ನಸಿಂಹಾಸನಾಧೀಶ್ವರ ಶ್ರೀ ಕೃಷ್ಣದೇವರಾಯರಿಗೆ, ಉತ್ಕಲ ಸಾರ್ವಭೌಮ ಪ್ರತಾಪರುದ್ರ ಗಜಪತಿ ಬರೆಯಿಸಿದ ವಿವರವೇನೆಂದರೆ, ಈ ಮೊದಲು ನಮ್ಮೊಳಗೆ ನಡೆದ ರಹಸ್ಯ ವಾಗ್ದಾನದಂತೆ, ಕುಮಾರಿ ರುಚೀದೇವಿಯನ್ನು ನಿಮ್ಮೆಡೆಗೆ ಕಳುಹಿಸಿರುತ್ತೇನೆ. ಇವಳು ತಮ್ಮ ಸಾನ್ನಿಧ್ಯವನ್ನು ಸೇರಿದ ಕೂಡಲೇ...."ಇಷ್ಟೇ ಅರ್ಥವಾಗುವಂತಿತ್ತು. ಉಳಿದುದನ್ನು ಮುದುಕನು ಜಗಿದು ಉಗಿದಿದ್ದನು.

ಈ ವಿಚಿತ್ರ ಸಂಭವದ ಪರಿಣಾಮದಿಂದ ಪಾತ್ರರೆಲ್ಲರೂ ವಿರಕ್ತಭಾವವನ್ನು ತಾಳಿ, ದುರ್ಗಗಳನ್ನೆಲ್ಲ ಬಿಟ್ಟುಕೊಟ್ಟು ಹೊರಟು ಹೋದರೆಂದು ತಿಳಿದುಬಂತು. ಪಾತ್ರರು ಅಪ್ರತಿಮ ವೀರ ಪರಾಕ್ರಮಶಾಲಿಗಳಷ್ಟೇ ಹೊರತು ಮಂತ್ರ ತಂತ್ರಗಳ ಮರ್ಮವನ್ನರಿಯುವಷ್ಟು ಮುತ್ಸದ್ದಿಗಳಾಗಿರಲಿಲ್ಲ. ಅಂತೆಯೇ ಉಪಾಯಕೋವಿದನಾದ ವಿಜಯನಗರದ ಮಂತ್ರಿ ತಿಮ್ಮರಸನು, ಭೇದೋಪಾಯವನ್ನವಲಂಬಿಸಿ, ಯಾವಳೋ ವೇಶ್ಯೆಯಿಂದ ರುಚೀಕುಮಾರಿಯ ಪಾತ್ರವಾಡಿಸಿ, ಪಾತ್ರರನ್ನು ಮೋಸಪಡಿಸಿದನೆಂದು, ರಾಮಯಾಮಾತ್ಯನಿಗೆ ಕೂಡಲೇ ಗೊತ್ತಾಗಿ ಹೋಯಿತು. ಆ ತಂತ್ರವು, ರಾಮಯಾಮಾತ್ಯನು ಪಾತಪಲ್ಲಿಯಿಂದ ಹೊರಟು ಕಟಕಪುರಿಯನ್ನು ಸೇರುವ ಮಧ್ಯಕಾಲದಲ್ಲಿ ಜರುಗಿಸಲ್ಪಟ್ಟಿತ್ತು.

ದಿಙ್ಮೂಢರಾಗಿ ಹೋದ ಗಜರಾಜ ಮಂತ್ರಿಗಳು ಎಷ್ಟೋಹೊತ್ತಿನ ಮೇಲೆ ತ್ವರಿತಗತಿಯನ್ನು ಹೊಂದಿದರು. ಆ ಪಾತ್ರರನ್ನು ಹುಡುಕಿ ಕರೆದುಕೊಂಡು ಬರುವಂತೆ, ತಕ್ಕ ಚಾರರನ್ನು ಓಡಿಸಿದರು. ಈ ಇಕ್ಕಟ್ಟಿನ ಸಮಯದಲ್ಲಿ ಗಜಪತಿಗೆ ಪರರ ಸಹಾಯವು ಅತ್ಯಗತ್ಯವಾಗಿತ್ತು. ವಿಜಾಪುರದ ಆದಿಲ್‌ಷಹನು ಸಹಾಯಮಾಡಲು ಒಪ್ಪುವನಾದರೂ, ಅವನು ಕೇಳಬಹುದಾದ ಪ್ರತಿಫಲವನ್ನು ಕೇಳುತ್ತಿದ್ದಾನಲ್ಲ? ಇದಕ್ಕೇನು ಮಾಡುವುದೆಂದು ರಾಮಯಾಮಾತ್ಯನು ಯೋಚನೆ ಮಾಡುತ್ತಿದ್ದಾಗ,

ಒಂದು ಅನುಕೂಲವಾದ ವಿಷಯವು ಗೊತ್ತಾಗಿ ಬಹಳ ಉತ್ಸಾಹಿತನಾದನು.

ಎಲ್ಲಿಂದಲೋ ಬಂದ ಇಬ್ಬರು ವ್ಯಕ್ತಿಗಳನ್ನು ರಾಮಯಾಮಾತ್ಯನು ಏಕಾಂತಕ್ಕೆ ಕರೆದೊಯ್ದು ಕೇಳಿದನು :

"ಚತುರ, ರಂಗರೆ ಏನು ಸಮಾಚಾರ ?"

"ತಕ್ಕಮಟ್ಟಿಗೆ ನೋಡಿಕೊಂಡೇ ಬಂದಿದ್ದೇವೆ. ನಾವು ತಮ್ಮ ಅಪ್ಪಣೆಯಂತೆ, ಉದಯಗಿರಿಯ ಬೊಕ್ಕಸವನ್ನು ಹರಣಮಾಡಿಕೊಂಡು ಹೋದ ಆ ಚೋರರನ್ನು ಅವರಿಗೆ ತಿಳಿಯದಂತೆಯೇ ಅನುಸರಿಸಿಕೊಂಡು ಹೋದೆವು. ಅಜ್ಞಾತಾದೇವಿ ಕಳ್ಳತನದ ಮಾಲುಗಳನ್ನು, ದೂರದಲ್ಲಿ ಅಡಗಿದ್ದ ಕೆಲವರ ವಶಕ್ಕೆ ಒಪ್ಪಿಸಿ, ಕಳುಹಿಸಿಬಿಟ್ಟಳು. ಆ ಕಳ್ಳರು ಎಲ್ಲೆಲ್ಲಿಯೋ ಗುಡ್ಡಗಾಡಿನ ದಾರಿಯಲ್ಲಿ ಏಳೆಂಟು ದಿನ ಪಯಣ ಮಾಡಿ ವಿಜಯನಗರದ ಆಚೆಗಿರುವ ಸೊಂಡೂರು ಬೆಟ್ಟಗಳ ಬದಿಯಲ್ಲಿರುವ 'ತಪ್ಪಲಹಳ್ಳಿ' ಎಂಬ ಗ್ರಾಮವನ್ನು ಸೇರಿದರು. ಆದರೆ ಹರಣಮಾಡಿದ ಸಾಮಾನುಗಳನ್ನು ಎಲ್ಲಿ ಅಡಗಿಸಿದರೋ ನಮಗೆ ಗೊತ್ತೇ ಆಗಲಿಲ್ಲ. ಬೆಟ್ಟಗಳ ನಡುವೆ ಯಾವುದೋ ಒಂದು ಗೂಢಸ್ಥಳವಿರುವಂತೆ ತೋರುತ್ತದೆ. ಅದನ್ನು ಕಂಡುಹಿಡಿಯ ಬೇಕಾದರೆ, ಅಲ್ಲಿಯೇ ತಂಗಿದ್ದು ಅಲೆದಾಡಬೇಕು. ಆದ್ದರಿಂದ ನಾವು ಸಿಕ್ಕಿಬೀಳುವ ಸಂಭವವುಂಟು. ಇನ್ನೊಂದು ಸಂಗತಿಯೇನೆಂದರೆ, ಆ ಹಳ್ಳಿಯಲ್ಲಿ ಬಹಳ ತೇಜಸ್ವಿನಿಯಾದ ಹುಡುಗಿಯೊಬ್ಬಳಿದ್ದಾಳೆ. ಅವಳನ್ನು ಎಲ್ಲರೂ 'ಬಾಲರಾಣಿ' ಎಂದು ಸಂಭೋಧಿಸುವಂತೆ ತೋರಿತು. ಇಬ್ಬರು ಗ್ರಾಮಸ್ತ್ರೀಯರು ಯಾವಾಗಲೂ ಅವಳೊಂದಿಗಿರುತ್ತಾರೆ. ಆ ಗ್ರಾಮಸ್ಥರೆಲ್ಲರೂ ಆ ಹುಡುಗಿಗೆ ವಿಧೇಯರಾಗಿ, ಭಯಭಕ್ತಿಗಳಿಂದ ಗೌರವಿಸುತ್ತಿದ್ದಾರೆ. ಗ್ರಾಮದ ಪ್ರತಿಯೊಂದು ಮನೆಯಲ್ಲಿಯೂ ನೂಲುವ ರಾಟೆ..........."
ಎಂದು ಚತುರನು ನುಡಿಯುವಷ್ಟರಲ್ಲಿಯೇ ರಾಮಯ್ಯನು ನಡುವೆ ಬಾಯಿಹಾಕಿ–"ಆ ಬಾಲೆ ಹೇಗೆ ಕಾಣುತ್ತಾಳೆ ? ಅವಳನ್ನು ಹೆತ್ತವರು ಯಾರು ಗೊತ್ತಿದೆಯೇ ?" ಎಂದನು.

"ಹೌದು ಪ್ರಭು. ನಾವು ಭಿಕ್ಷುಕವೇಷದಿಂದ, ತಕ್ಕಮಟ್ಟಿಗೆ

ತಿಳಿದೆವು. ಆ ಬಾಲೆಯ ತಂದೆ ಅಲ್ಲೆಲ್ಲಿಯೂ ಕಾಣಲಿಲ್ಲ. ಆದರೆ ನಾವು ಯಾರನ್ನು ಅನುಸರಿಸಿಕೊಂಡು ಹೋದೆವೋ ಅವರನ್ನು ಕಂಡ ಕೂಡಲೇ ಅವಳು,—'ನನ್ನ ತಾಯಿ ಎಲ್ಲಿ? ಯಾವಾಗ ಬರುವಳು?' ಎಂದು ಮುಂತಾಗಿ ವಿಚಾರಿಸಿದ್ದನ್ನು ಅಲ್ಲಿಯೇ ನಿಂತಿದ್ದ ನಾವು ಕೇಳಿದೆವು. ಪ್ರಭು! ಆ ಹುಡುಗಿಯು ಆ ಚೋರನಾಯಕಿಯ ಮಗಳೇ ಎನ್ನಲು ಸಂದೇಹವಿಲ್ಲ."

"ವಯಸ್ಸೆಷ್ಟಿದ್ದೀತು?"

"ಹದಿಮೂರೋ ಹದಿನಾಲ್ಕೋ ಅಷ್ಟೇ. ನಮ್ಮ ಮುಕ್ತಾ ಕುಮಾರಿಗೆ ಸರಿಯಾದ ಈಡು." ರಂಗನೆಂದ.

"ಆ ಬಾಲೆಯನ್ನು ನೋಡುತ್ತಲೇ, ನಮ್ಮ ಮುಕ್ತಾಕುಮಾರಿ ಇಲ್ಲೆಲ್ಲಿ ಬಂದಳೆಂದು ನಮಗೆ ಆಶ್ಚರ್ಯವಾಯಿತು ಪ್ರಭು" ಎಂದನು ಚತುರ.

"ಆಹಾ!" ಎಂದು ರಾಮಯಾಮಾತ್ಯನು ಉದ್ಗರಿಸಿದನು. ಬಳಿಕ ಚತುರ, ರಂಗರನ್ನು ಗುಟ್ಟಾದ ಇನ್ನೊಂದು ಕಡೆಗೆ ಕರೆದೊಯ್ದು, ಏನೋ ಗುಸುಗುಸು ಮಾತಾಡಿದನು. ಅದೇನೋ ಒಂದು ಹೊಸಯುಕ್ತಿ.

"ಆಹಾ! ಪ್ರಭು! ಈ ಯುಕ್ತಿಯನ್ನು ಖಂಡಿತ ಸಾಧಿಸಬಹುದು. ಆದರೆ ಅಪಹರಿಸುವುದೇ ಬಲುಕಷ್ಟ!" ಎಂದನು ರಂಗ.

"ಅದಕ್ಕೆಲ್ಲಾ ಸಮಯೋಚಿತವಾದ ಯುಕ್ತಿಯನ್ನು ಹೂಡೋಣ" ಎಂದೆಂದು, ರಾಮಯಾಮಾತ್ಯನು ಪ್ರತಾಪರುದ್ರ ಗಜಪತಿಯ ಬಳಿಗೆ ಹೋಗಿ, ತನ್ನ ಹೊಸ ಯುಕ್ತಿಯನ್ನು ರಹಸ್ಯವಾಗಿ ಅವನಿಗೆ ಅರಿಕೆ ಮಾಡಿ,"ಪ್ರಭುವೆ, ನಾನು ಈಗಲೇ ರಾಯಚೂರಿಗೆ ನಡೆಯುವೆನು. ಅದಿಲ್‌ಷಹನನ್ನು ಸರಿಮಾಡಿ ಶತ್ರುನಿಗ್ರಹಕ್ಕೆ ತಕ್ಕ ಬಲವನ್ನು ಸಿದ್ಧಪಡಿಸಿಕೊಂಡು, ಬೇಗನೇ ಹಿಂದಿರುಗುವೆನು. ನಾನು ಹೊರಟು ಹೋಗಿರುವ ಸಂಗತಿ ಬಲು ರಹಸ್ಯವಾಗಿರಲಿ, ನಾನು ಬಲವತ್ಸಹಾಯವನ್ನೊಡಗೂಡಿಕೊಂಡು ಬರುವ ವರೆಗೆ, ಶತ್ರುವು ಭರದಿಂದ ಮುಂದೊತ್ತಿ ಬರದಂತೆ ತಡೆದಿರಿಸಲು ನಮ್ಮ ಸೈನ್ಯವು ಶಕ್ತವಾಗಿರುವುದೆಂದು ನಂಬುತ್ತೇನೆ. ಹಾಗೂ ಮೀರಿ ಮುಂದೇರಿ ಬಂದರೂ, ಕಟಕ ಸಂರಕ್ಷಣೆಯಾದ ಮಹಾ

ನದಿಯನ್ನು ದಾಟಲಿಕ್ಕಿಲ್ಲ."

ಅನಂತರ ರಾಮಯಾಮಾತ್ಯನು ಚತುರ-ರಂಗರೊಂದಿಗೆ ಗುಪ್ತವಾಗಿ ರಾಯಚೂರಿನ ಕಡೆಗೆ ನಡೆದನು.

ಹೊರಡುವ ಮುನ್ನ ಗಜರಾಜನನ್ನು ಕುರಿತು, ಮಾದರಸನ ವಿಷಯದಲ್ಲಿ ಬಹಳ ಜಾಗರೂಕತೆಯಿಂದಿರಬೇಕೆಂದೂ, ಅಜ್ಞಾತಾ ಎಂಬ ಚೋರನಾಯಕಿ ಏನಾದರೂ ಸಹಾಯಕ ಸೈನ್ಯವನ್ನು ಕಳುಹಿಸಿಕೊಟ್ಟರೆ, ಅದನ್ನು ಪೂರ್ಣ ನಂಬದೆ ನಂಬಿದಂತೆ ನಟಿಸುತ್ತಾ, ಏನಾದರೂ ಸಂದೇಹ ಬಂದರೆ ಎಲ್ಲರನ್ನೂ ಪ್ರತಿಬಂಧಿಸಿ ಬಿಡಬೇಕೆಂದೂ ಎಚ್ಚರಿಸಿದ್ದನು.

ಕಟಕಪುರಿಗೆ ಬಂದಂದಿನಿಂದಲೂ ಮಾದರಸನ ಮೇಲೊಬ್ಬ ಗೂಢಚಾರನನ್ನು ಹಾಕಿತ್ತು. ಕೋಟೆಯ ಬಾಗಿಲುಗಳನ್ನು ದಾಟಬೇಕಾದರೆ, ಅವನು ಗಜರಾಜನ ಅನುಮತಿಯ ಮುದ್ರೆಯನ್ನು ತೋರಿಸಬೇಕಾಗಿತ್ತು. ಆದರೆ ರಾಮಯಾಮಾತ್ಯನು ಸೂಚಿಸಿದಂತೆ ಅಜ್ಞಾತಾದೇವಿಯ ಸಹಾಯಕ ಸೈನ್ಯವು ಬರಲಿಲ್ಲ.

ಅದಕ್ಕೆ ಬದಲಾಗಿ ಪ್ರತಾಪರುದ್ರನಿಗೆ ಆಶ್ಚರ್ಯವೆನಿಸುವಂತೆ, ವೀರರುದ್ರನ ಅಂಕಿತದ ಚೀಟನ್ನು ಪಡೆದಿರುವ ಒಬ್ಬ ಬಂಟನು, ಪ್ರತಾಪರುದ್ರ ಗಜಪತಿಯ ಸನ್ನಿಧಿಗೆ ಬಂದು, ಒಂದು ಪತ್ರವನ್ನು ಸಮರ್ಪಿಸಿದನು. ಅದು ಪ್ರತಾಪರುದ್ರನಿಗೆ ಆಶ್ಚರ್ಯವನ್ನೂ, ಧೈರ್ಯ ಸಮಾಧಾನಗಳನ್ನೂ ಕೊಟ್ಟಿತು. ಆ ನೂತನಾಗತ ಬಂಟನೊಂದಿಗೆ, ವೀರರುದ್ರ ಗಜಪತಿಯ ಕ್ಷೇಮಲಾಭಾದಿಗಳನ್ನು ವಿಚಾರಿಸಿ, ಕೇಳಿ ಸಂತಸಗೊಂಡು, ಅವನನ್ನು ಯಥೋಚಿತವಾದ ಗೌರವದಿಂದ ತಕ್ಕ ಬಿಡದಿಗೆ ಕಳುಹಿಸಿದನು.

ಆ ಬಂಟನು ತಂದ ಪತ್ರದಲ್ಲಿ ವೀರರುದ್ರನು ಕೈ ಮುಟ್ಟಿ ಬರೆದ ಒಕ್ಕಣೆ ಹೀಗಿತ್ತು :

"ಪ್ರಿಯ ಭಾವಯ್ಯ ಪ್ರತಾರುದ್ರ ಗಜಪತಿಯವರ ಸಮ್ಮುಖಕ್ಕೆ, ನಿಮ್ಮ ಭಾವ ವೀರರುದ್ರ ಗಜಪತಿಯ ನಮಸ್ಕಾರಗಳು.

ಉಭಯ ಕುಶಲೋಪರಿ ಸಾಂಪ್ರತ.

ಉದಯಗಿರಿಯ ದುರ್ಗವು ಘಾತುಕ ರೀತಿಯಿಂದ ಶತ್ರುವ
ವಾಗುವಾಗ, ನಾನು ದೈವವಶಾತ್ ತಪ್ಪಿಸಿಕೊಂಡು, ಪ್ರಕೃತ ಚೋ
ದೇಶದಲ್ಲಿ, ಕಾರ್ಯೋನ್ಮುಖನಾಗಿರುತ್ತೇನೆ. ಇಲ್ಲಿ ವಿಜಯನಗರಕ್ಕೆ
ಸೋತು ಬಾಗಿ ಅಂತಃಶತ್ರುಗಳಾಗಿರುವ ಚೋಳ, ಪಾಂಡ್ಯ ಅರಸರೂ
ಪದಚ್ಯುತರಾಗಿ ಒಳಗೇ ಉರಿಯುತ್ತಿರುವ ಗಂಗರಾಜರೂ, ತಂತಮ್ಮ
ಬಲ ಸಂಗ್ರಹದೊಂದಿಗೆ, ರಹಸ್ಯವಾಗಿ ನನ್ನೊಂದಿಗೆ ಕೂಡಿರುತ್ತಾರೆ
ಸೈನ್ಯವು ಸಂತೃಪ್ತಿಕರವಾಗುವಂತೆ ಶೇಖರವಾಗಿದೆ. ಈಗ ರಾಯನ
ಉತ್ಕಲ ರಾಷ್ಟ್ರವನ್ನು ತೀವ್ರವಾಗಿ ಕೊರೆಯುತ್ತಿರುವನೆಂದು ಕೇಳ
ತ್ತೇನೆ. ನಾನು ಅತಿ ಶೀಘ್ರದಲ್ಲಿ ಅತಿ ಬಲಸಮೇತನಾಗಿ ಸುತ್ತು ದಾ
ಯಿಂದ ಅಲ್ಲಿಗೇ ಬರುತ್ತೇನೆ. ಅಧೈರ್ಯಪಟ್ಟು ನೀವು ಹಿಂಜರಿಯ
ಬಾರದೆಂತಲೇ ಹೀಗೆ ಮುಂದಾಗಿ ವಾರ್ತೆ ಕಳುಹಿಸಿದ್ದಾಗಿದೆ. ನಾನು
ಸೊಕ್ಕಿನ ರಾಯನನ್ನು ದಕ್ಷಿಣದಿಂದಲೂ, ನೀವು ಉತ್ತರದಿಂದಲೂ
ಮುತ್ತಿ ಒತ್ತಿದರೆ, ತಳಬಿಟ್ಟ ಆತನು ನಮ್ಮ ಕೈಗೆ ಸಿಕ್ಕಿ ಬೀಳುವುದು
ಖಂಡಿತ. ಹೆಚ್ಚಿನ ವಿವರಗಳು ಮುಖತಃ

ಇತಿ—ವೀರರುದ್ರ ಗಜಪತಿ'

ಈ ಪತ್ರದ ಕಡೆಯ ವಾಕ್ಯದೊಂದಿಗೆ–“ಪಶ್ಚಿಮದಿಂದ ರಾಮಯ
ಮಾತ್ಯನು ತರುವ, ಅದಿಲ್‌ಷಹನ ಸಹಾಯಕ ಸೇನೆಯೂ ಬಂದು
ತರುಬಿದರೆ” ಎಂದೂ ಸೇರಿಸಿಕೊಂಡು, ವಿಜಯಾನಂದದ ಸವಿಗನಸನ್ನು
ಕಾಣಲಾರಂಭಿಸಿದನು ಪ್ರತಾಪರುದ್ರ ಗಜಪತಿ!

ಮುಂದೆ ಮೂರು ದಿನಗಳ ಮೇಲೆ ಗಜರಾಜನ ಬೇಹುಗಾರ
ನೊಬ್ಬನು ಬಂದು–“ಮಹಾ ನದಿಯ ನೈಋತ್ಯ ಭಾಗದ ಗುಡ್ಡಗಾಡಿನ
ದಾರಿಯಲ್ಲಿ ಸುಮಾರು ಇನ್ನೂರರಷ್ಟು, ಅಶ್ವೀಕ-ಪದಾತೀ ವರ್ಗ
ವೊಂದು ಈ ಕಡೆಗೆ ಬರುತ್ತಿದೆ. ಅವರ ಮುಖಂಡನ ಕೈಯಲ್ಲಿ ವೀರ
ರುದ್ರ ಗಜಪತಿಯ ಪ್ರಯಾಣದ ಚೀಟಿದೆ” ಎಂದು ವಾರ್ತೆ ಹೇಳಿದನು
‘ಸರಿ, ಪತ್ರದಲ್ಲಿ ಬರೆದಂತೆ ವೀರರುದ್ರನು ಕಳುಹಿಸಿದ ಸೈನ್ಯವದು
ಎಂದುಕೊಂಡು ಪ್ರತಾಪರುದ್ರನು ಆ ಪಂಗಡವನ್ನು ಇದಿರುಗೊಳ್ಳಲು

ಕಾದಿದ್ದನು. ಆದರೆ ಮತ್ತೆ ಅದರ ಸುದ್ದಿಯೇ ಕಾಣಲಿಲ್ಲ. ಆ ಸೈನ್ಯ ಎಲ್ಲಿಯೋ ಮಾಯವಾಗಿತ್ತು!

ಆದರೆ ಪ್ರತಾಪರುದ್ರನಿಗೆ ಯೋಚನೆ ಮಾಡಲು ಅವಕಾಶವಿಲ್ಲದಂತೆ ದುಷ್ಟ ಪ್ರಸಂಗಗಳೇ ಒದಗಿಕೊಂಡು ಬಂದವು! ಕರ್ಣಾಟಕ ರಾಯನ ಚಂಡ ಪ್ರಚಂಡವಾದ ವಿಜಯ ಘೋಷಣವು ಮೇಲಿಂದ ಮೇಲೆ ಕೇಳಿಬಂದು, ಅವನ ಯೋಚನೆಗಳನ್ನು ಕಡಿಕಡಿದು ಹಾಕತೊಡಗಿತು. ಗಜಪತಿಯ ಮಹಾಸೈನ್ಯವು ವಿಜಯನಗರದ ವಿಜಯ ಮತ್ತ ಸೇನಾ ಪ್ರವಾಹದ ಒತ್ತಡಕ್ಕೆ ತಾಳಲಾರದೆ ಹಿಂಜರಿದು ಹೋಗುತ್ತಿದ್ದಿತು. ಹಾ! ಉತ್ಕಲ ಸಾಮ್ರಾಜ್ಯವು ಆಪಯವ ವಿಚ್ಛೇದಿತವಾದ ಮಹಾ ವೃಕ್ಷದಂತಾಗುತ್ತಿತ್ತು. ಪಾತ್ರರಿಂದ ಪಾಲಿಸಲ್ಪಟ್ಟ, ಬೆಲ್ಲಂಗೊಂಡ, ನಾಗೂರು, ಕೇದವರಂ ಮೊದಲಾದ ದುರ್ಗಪ್ರಾಂತಗಳೆಲ್ಲಾ ಗಜರಾಜರ ಕೈಬಿಟ್ಟುವು. ಪ್ರಚಂಡ ಪ್ರತಾಪೀ ಕೃಷ್ಣದೇವ ರಾಯನು ಉತ್ಕಲದ ಹೃದಯ ಪ್ರದೇಶವಾದ ಗೋದಾವರೀ ಮಂಡಲವನ್ನು ಮೆಟ್ಟಿಕೊಂಡು, ವಿಶಾಖಾಪಟ್ಟಣದ ಕೋಟೆಗಳನ್ನು ಅಮುಕಿ, ಬೊಟ್ಟನೂರಿನ ನೆತ್ತಿಯಲ್ಲಿ ಜಯಸ್ತಂಭವನ್ನು ನಾಟಿ, ಆ ವಿಜಯ ಪತಾಕೆಯ ವರಾಹಲಾಂಛನದ ನೆರಳನ್ನು ಮಹಾನದಿಯ ಸಲಿಲ ತರಂಗದಲ್ಲಿ ಕುಣಿಸುತ್ತಿದ್ದಾನೆ! ಇನ್ನು ಉಳಿದಿರುವುದು ಕಟಕ ರಾಜಧಾನಿಯೊಂದೇ.

ರಾಯನ ರಾಯಭಾರಿಯೊಬ್ಬನು ರಾಯನ ಸಂದೇಶವನ್ನು ಹೊತ್ತುಕೊಂಡು, ಬಿಳಿಯ ಬಾವುಟದೊಂದಿಗೆ ಪ್ರತಾಪರುದ್ರ ಗಜಪತಿಯ ಆಸ್ಥಾನಕ್ಕೆ ಬಂದನು.

"ಗಜಪತಿ ಸಾರ್ವಭೌಮರೆ, ಇನ್ನಾದರೂ ನಿಮ್ಮ ಹಟವನ್ನು ಬಿಟ್ಟು, ನಿಮ್ಮ ಕುಮಾರಿಯನ್ನು ನಮಗೆ ವಿವಾಹ ಮಾಡಿಕೊಟ್ಟು, ಸ್ನೇಹವನ್ನು ಕಟ್ಟಿರಿ. ಕರ್ಣಾಟಾಂಧ್ರದ ಐಕಮತ್ಯವನ್ನು ಹೊಂದಿಸಿರಿ. ನಾವಂತೂ ಮುಟ್ಟಿದ ಕಾರ್ಯವನ್ನು ಮುಗಿಸಿಕೊಳ್ಳದೆ ಹಿಂದಿರುಗುವುದಿಲ್ಲ" ಎಂಬುದು ರಾಯನ ಸಂದೇಶದ ಅಭಿಪ್ರಾಯವಾಗಿತ್ತು.

ಆದರೆ ಪ್ರತಾಪರುದ್ರನು ಪ್ರತಾಪರುದ್ರನೇ ಆಗಿದ್ದನು. ಮಹಾ

ನದೀ ಸಂರಕ್ಷಣೆಯೂ, ದೃಢತರವಾದ ಕೋಟೆಕೊತ್ತಲಗಳಿಂದ ಸುಭದ್ರವೂ, ಅಗಣಿತ ಗಜಸೇನಾಪಙ್ಕ್ತಿ ಸಂಭರಿತವೂ ಆದ ಕಟಕ ರಾಜಧಾನಿಯನ್ನು ಪ್ರವೇಶಿಸುವುದು ಸುಲಭಸಾಧ್ಯವಲ್ಲವೆಂದು ಅವನ ನಂಬುಗೆ. ಹಾಗೆ ಸಾಹಸ ಮಾಡಿದರೂ ಇನ್ನೊಂದು ವರ್ಷದ ಹೊರತು ಸಾಧ್ಯವೇ ಅಲ್ಲ. ಅಷ್ಟರೊಳಗೆ ವೀರರುದ್ರನ ಮತ್ತು ರಾಮಯಾಮಾತ್ಯನ ಸಹಾಯಕ ಸೈನ್ಯವೂ ಬಂದೊದಗಿ ರಾಯನ ಧೂಳುಹಾರಿಸಿ, ನುಂಗಿದ ರಾಜ್ಯಗಳನ್ನೂ ಕಾರಿಸಿಕೊಳ್ಳಬಹುದು. ಈ ಬಗೆಯ ಧೈರ್ಯದಿಂದ ಪ್ರತಾಪರುದ್ರನು ಗಟ್ಟಿಯಾಗಿ – "ಏನಾದರೂ ದ್ರಾವಿಡ ರಾಯನಿಗೆ ಕನ್ಯೆಯನ್ನು ಕೊಡಲಾರೆ" ಎಂದು ಕಡಿದಾದ ಉತ್ತರವಿತ್ತು, ಆ ರಾಯಭಾರಿಯನ್ನು ಕಳುಹಿಸಿಬಿಟ್ಟನು.

ಇದು ನಡೆದು ಎರಡು ದಿನಗಳು ಸಂದುವು. ಮಹಾನದಿಯ ಇಕ್ಕರೆ–ಅಕ್ಕರೆಗಳಲ್ಲಿ ಗಜಪತಿ–ನರಪತಿಗಳ ಸೇನೆಗಳಿಗೆ ಸಣ್ಣಸಣ್ಣ ಕಾಳಗಗಳು ನಡೆಯುತ್ತಲೇ ಇದ್ದುವು. ಹಿಂದೆ ಗಜಪತಿ ರಾಜನು ಪಾತ್ರಪ್ರಭೃತಿಗಳನ್ನು ಹುಡುಕಿಕೊಂಡು ಬರುವಂತೆ ಅಟ್ಟಿದ್ದ ಚಾರರು ಮಹೇಶ್ವರ ಪಾತ್ರನನ್ನು ಹುಡುಕಿ ಹಿಡಿದು, ಪ್ರತಾಪರುದ್ರನು ಹೇಳಿದ ಸಮಾಧಾನ ವಾಕ್ಯಗಳನ್ನು ಅವನಿಗೆ ತಿಳಿಸಿ, ಅವನನ್ನು ಗಜರಾಜ ಸನ್ನಿಧಿಗೆ ಕರೆದುಕೊಂಡು ಬಂದರು.

ಪ್ರತಾಪರುದ್ರನು ಮಹೇಶ್ವರ ಪಾತ್ರನನ್ನು ಏಕಾಂತಕ್ಕೆ ಕರೆದೊಯ್ದು–"ಮಹೇಶ್ವರ ಪಾತ್ರರೆ, ನಿಮ್ಮದೊಂದು ಅದೂರದೃಷ್ಟಿಯ ಅವಸರ ಪ್ರವರ್ತನೆಯಿಂದ ಎಂತಹ ವಿಪರೀತವಾಯಿತು! ಕಪಟೋಪಾಯ ಕೋವಿದನಾದ ತಿಮ್ಮರಸನ ತಂತ್ರವು ಈಗಾದರೂ ನಿಮಗೆ ಗೊತ್ತಾಯಿತೇ?" ಎಂದನು.

"ಆದರೆ ತಾವು ಕುಮಾರಿಯನ್ನು ರಾಯನ ಕಡೆಗೆ ಕಳುಹಿಸಿರುವುದನ್ನು ನೋಡಿ, ಇದೆಲ್ಲಾ ಬರಿಯ ನಟನೆಯೆಂದು ನಾವು ತಿಳಿದರೆ ತಪ್ಪೆ?"

"ಅಯ್ಯೋ, ಇನ್ನೂ ನಿಮಗೆ ಭ್ರಾಂತಿ ಬಿಟ್ಟಿಲ್ಲವೆ? ನೋಡಿರಿ, ನನ್ನ ಕುಮಾರಿ ರುಚೀದೇವಿ ಇಲ್ಲಿಯೇ ಇದ್ದಾಳೆ. ಕಣ್ಣಾರೆ ನೋಡಿರಿ."

ಪ್ರತಾಪರುದ್ರನು ಒಬ್ಬ ಸೇವಕನಿಗೆ ರುಚೀದೇವಿಯನ್ನು ಕರೆದುಕೊಂಡು ಬರುವಂತೆ ಆಜ್ಞೆ ಮಾಡಿದನು. ಸ್ವಲ್ಪ ಹೊತ್ತಿನಲ್ಲೇ ಆ ಸೇವಕನು ಹಿಂದಿರುಗಿ ಬಂದಾಗ, ಏಕೋ ಅವನ ಮುಖವು ಅಕಳ ವಿಕಳವಾಗಿತ್ತು. ಅದನ್ನು ಗಮನಿಸದೆ "ಏನೋ, ಕುಮಾರಿ ಬರುತ್ತಿದ್ದಾಳೆಯೋ ?" ಎಂದನು ಪ್ರತಾಪರುದ್ರ.

ಸೇವಕನು ಭೀತಿಯಿಂದ "ಜೀಯ, ಕುಮಾರಿ, ಕುಮಾರೀದೇವಿ, ಎಲ್ಲಿಯೂ ಕಾಣುವುದಿಲ್ಲವಂತೆ! ಹುಡುಕುತ್ತಿದ್ದಾರೆ!"

"ಏನೇನು ?—" ಪ್ರತಾಪರುದ್ರನು ಭರದಿಂದ ಅಂತಃಪುರದ ಕಡೆಗೆ ಧಾವಿಸಿದನು.

ಮಹೇಶ್ವರಪಾತ್ರನು ಈ ವಿಚಿತ್ರದಿಂದ ಮುಗ್ಧನಾಗಿ ಹೋದನು. ಸುಮ್ಮನೆ ಹುಬ್ಬುಗಂಟಿಕ್ಕಿ ಕುಳಿತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಸೇವಕನು ಬಂದು, "ಗಜರಾಜರು ಅಸ್ವಸ್ಥರಾಗಿರುವರು. ಈಗ ಯಾವ ಮಾತಿಗೂ ಅವಕಾಶವಿಲ್ಲವಂತೆ. ತಾವು ಹೋಗಬಹುದೆಂದು ಅಪ್ಪಣೆ ಕೊಟ್ಟಿದ್ದಾರೆ" ಎಂದನು.

"ಓಹೊ! ಅಷ್ಟು ಬೇಗನೆ ಅಸ್ವಸ್ಥರಾದರೆ? ಎಂಥ ವಿಚಿತ್ರ! ಇದೂ ಒಂದು ನಾಟಕ! ಛೀ! ಇವರ ಕರೆಗೆ ತಗ್ಗಿ ಇಲ್ಲಿಗೆ ಬಂದದ್ದೇ ನನ್ನ ತಪ್ಪು! ಧಿಕ್ಕಾರ ಇಂತಹ ಪ್ರಭುವಿಗೆ!" ಎಂದುಕೊಳ್ಳುತ್ತಾ ಮಹೇಶ್ವರಪಾತ್ರನು ತನ್ನ ಪಾಡಿಗೆ ಹೊರಟುಹೋದನು.

ಅಂತಃಪುರದಲ್ಲಿ ಬಹಳ ಕಲವರವುಂಟಾಗಿತ್ತು. ದಾಸದಾಸಿಯರು ಹೆದರಿ ಅತ್ತಿತ್ತ ಓಡಾಡುತ್ತಿದ್ದರು. ಗಜರಾಣಿ ಮಂಚದಲ್ಲಿ ಅಸ್ವಸ್ಥಳಾಗಿ ಮಲಗಿದ್ದಳು. ಸೌಂದರ್ಯದ ಜ್ಯೋತಿಯಾಗಿದ್ದ ರುಚೀದೇವಿ ಅಲ್ಲಿಲ್ಲದೆ ಕತ್ತಲೆ ಕವಿದಿತ್ತು. ಪ್ರತಾಪರುದ್ರನ ತಲೆಯ ಮೇಲೆ ಸಿಡಿಲು ಬಿದ್ದಿತ್ತು.

ಕೆಲವು ನಿಮಿಷ ಸ್ತಬ್ಧನಾದನು. ಆಮೇಲೆ ರಕ್ತ ಸಂಚಾರವು ತೊಡಗಿ ಮಹಾ ವ್ಯಸನದಲ್ಲಿ ಮುಳುಗಿದನು. ಈ ಸಂಗತಿ ಬಹಿರಂಗವಾಗಿ ಹಬ್ಬದಂತೆ ದಾಸೀ ಜನಕ್ಕೆ ಎಚ್ಚರಿಕೆ ಕೊಟ್ಟನು. ಆ ಮಹೇಶ್ವರ ಪಾತ್ರನಿಗೆ ಏನು ಉತ್ತರ ಕೊಡಬೇಕು? ಯಾವ ಮುಖದಿಂದ ಅವನ

ಮುಂದೆ ಹೋಗುವುದು? ಕಡೆಗೆ ಮೊದಲೇ ಹೇಳಿದಂತೆ ಹೇಳಿಕಳುಹಿಸಿ ಅವನನ್ನು ತೊಲಗಿಸಿದ್ದಾಯಿತು.

ಬಳಿಕ ಪ್ರತಾಪರುದ್ರನು ಪರಮಾಪ್ತ ಮಂತ್ರಿಗಳನ್ನು ಬರ ಮಾಡಿಸಿ, ಆ ಪರಿತಾಪಕರವಾದ ಅಂತಃಪರಿಸ್ಥಿತಿಯನ್ನು ಕುರಿತು, ವಿಚಾರಿಸಿದನು. ಆಗ ಅಜ್ಞಾತನಾಯಕಿಯ ಕೈಯಾಳಾದ ಮಾದರಸನೂ, ವೀರರುದ್ರ ಗಜಪತಿಯ ಓಲೆಯನ್ನು ತಂದುಕೊಟ್ಟ ಮಾರಪ್ಪನೆಂಬ ಬಂಟನೂ ಮಾಯವಾಗಿರುವುದು ತಿಳಿದುಬಂತು. ಹಾಗೆಯೇ ಮಹಾನದೀ ತೀರದಲ್ಲಿ 'ಮುಕ್ತಾಶ್ರಮ'ದಲ್ಲಿ ವಾಸವಾಗಿದ್ದ ಸಂನ್ಯಾಸಿಯೂ ಶಿಷ್ಯನೂ ಕಾಣೆಯಾಗಿರುವರೆಂದೂ ಗೊತ್ತಾಯಿತು. ರುಚೀಕುಮಾರಿಯ ಪ್ರಿಯಸಖಿಯಾದ ಗೌರಿಯೂ ಕಾಣುವುದಿಲ್ಲ! ಒಂದೇ ರಾತ್ರಿಯಲ್ಲಿ ಇಷ್ಟು ಮಂದಿಯೂ ಕಾಣೆಯಾಗಿರುವರಲ್ಲಾ! ಏನಿದರ ಮರ್ಮ?

೫

ಕಟಕಪುರಿಗೆ ಬಂದ ಮಾದರಸ ತನ್ನ ಮೇಲೆ ನಿಯಮಿಸಲ್ಪಟ್ಟಿದ್ದ ಗೂಢಚಾರನನ್ನು ಎರಡುಮೂರು ದಿನಗಳಲ್ಲಿಯೇ ತನ್ನ ಮಿತ್ರನನ್ನಾಗಿಸಿ ಕೊಂಡು ಬಿಟ್ಟನು. ಅದರಿಂದ ಅವನು ನಗರದೊಳಗೆಲ್ಲಾ ಇಚ್ಛಾನು ಸಾರವಾಗಿ ಸುತ್ತಾಡಬಹುದಾಗಿತ್ತು.

ಆ ತನ್ನ ಹೊಸ ಚಾರಮಿತ್ರನಿಗೆ 'ಮುಕ್ತಾಶ್ರಮದ' ಸಂನ್ಯಾಸಿಯ ಮೇಲೆ ಬಹಳ ಶ್ರದ್ಧೆ ಇರುವಂತೆ ಅವನಿಗೆ ಗೊತ್ತಾಯಿತು. ಆ ಸಂನ್ಯಾಸಿಯ ಮಹಿಮೆಯನ್ನು ಕುರಿತು ಅವನು ಮಾದರಸನ ಮುಂದೆ ತುಂಬಾ ಶ್ಲಾಘಿಸುತ್ತಿದ್ದನು. ಈಗ್ಗೆ ನಾಲ್ಕು ವರ್ಷಗಳ ಹಿಂದೆ ಆ ಸಂನ್ಯಾಸಿ, ಮಹಾನದೀ ತೀರದ ಅಶ್ವತ್ಥಕಟ್ಟೆಯ ಮೇಲೆ ಪ್ರತ್ಯಕ್ಷನಾದ ನಂತೆ. ತಿಂಗಳೊಂದರೊಳಗೆ ಅವನ ಕೀರ್ತಿ ನಾಲ್ಕುಸುತ್ತಲೂ ಹಬ್ಬಿ ಬಿಟ್ಟಿತಂತೆ. ಸಂನ್ಯಾಸಿಯೆಂದರೆ ಸತ್ಯವಾದ ಸಂನ್ಯಾಸಿಯಂತೆ! ಯಾರೇನು ಕೊಟ್ಟರೂ ಸ್ವೀಕರಿಸುವುದಿಲ್ಲ. ವಾಯುವಾಹಾರದ ಮುನಿ ಎಂದೇ ಪ್ರತೀತಿ! ಭೂತ-ಭವಿಷ್ಯಗಳನ್ನು ಕೇವಲ ಜ್ಞಾನ ದೃಷ್ಟಿಯಿಂದ ನೋಡಿ ಬಹು ಸರಸವಾಗಿ ಹೇಳಬಲ್ಲ ಪ್ರಾಜ್ಞ.

ಇಂತಹ ಅವನ ಮಹಾ ಮಹಿಮೆಯನ್ನು ಕೇಳಿ, ಪ್ರತಾಪರುದ್ರ ಗಜಪತಿಯೂ ಅವನ ದರ್ಶನಮಾಡಿ, ರಾಜಧಾನಿಯೊಳಗೆ ಬಂದು ನೆಲೆಸಬೇಕೆಂದು ಕೇಳಿಕೊಂಡನಂತೆ. ಆದರೆ ಆ ಸಂನ್ಯಾಸಿ ರಾಜಧಾನಿ

ಯನ್ನು ಪ್ರವೇಶಿಸಲಾರೆನೆಂದು ಹೇಳಿಬಿಟ್ಟುದರಿಂದ, ಮಹಾನದೀ ತೀರದ ತಪೋವನದಂತಿದ್ದ ತೋಪಿನಲ್ಲಿ, ಗಜರಾಜನು ಅವನಿಗೊಂದು ಸುಂದರವಾದ ಆಶ್ರಮವನ್ನು ಏರ್ಪಡಿಸಿಕೊಟ್ಟನಂತೆ. ಅದುವೇ 'ಮುಕ್ತಾಶ್ರಮ'!

ಅಲ್ಲಿ ಆ ಸಂನ್ಯಾಸಿ ಅಶ್ವತ್ಥ ವೃಕ್ಷಕ್ಕೆ ಪೂಜಾ ನಮಸ್ಕಾರಗಳನ್ನು ಮಾಡುತ್ತ, ಬಂದವರಿಗೆಲ್ಲ ತೀರ್ಥಪ್ರಸಾದಗಳನ್ನು ಕೊಡುವುದರ ಮೂಲಕವಾಗಿ, ಮಂದಿಯ ಮನೋಭೀಷ್ಟಗಳನ್ನು ಈಡೇರಿಸುತ್ತಿದ್ದನಂತೆ. ಆ ತೀರ್ಥ ಪ್ರಸಾದಗಳಿಂದ ಎಂತಹ ರೋಗ-ರುಜಿನಗಳೂ ಮಾಯವಾಗುತ್ತಿದ್ದವಂತೆ. ಹೆಚ್ಚೇನು? ಗಜಪತಿರಾಜನೂ, ರಾಣೀ ಕುಮಾರಿಯರೂ ಆಗಾಗ ಅವನ ದರ್ಶನ ಮಾಡುತ್ತಿದ್ದರಂತೆ. ಪ್ರಕೃತ ಯುದ್ಧವು ತೊಡಗಿದ ಮೇಲೆ, ಪರಿಣಾಮವು ಹೇಗಾಗುವುದೆಂದು, ಗಜರಾಜನು ಭವಿಷ್ಯ ಕೇಳಿದ್ದಕ್ಕೆ, ಆ ಸಂನ್ಯಾಸಿ– "ಕುತ್ತಿಗೆಯ ವರೆಗೆ ಬಂದೀತು. ಭಯವಿಲ್ಲ. ಶಿರೋನಗಗಕ್ಕೆ ಬಾಧೆಯಿಲ್ಲ. ಅಷ್ಟರೊಳಗೆ ಒಬ್ಬ ಉತ್ತಮ ಕ್ಷಾತ್ರವೀರನು ಮೈದೋರಿ, ಅವನ ಮೂಲಕವಾಗಿ ಒಮ್ಮೆಗೇ ವಿಜಯಕಲ್ಯಾಣವಾಗುತ್ತದೆ" ಎಂದು ಹೇಳಿಟ್ಟಿದ್ದನಂತೆ. ಹಾಗೆಯೇ ಆ ಸುತ್ತೂ ನಡೆದುದರಿಂದ, ಗಜಪತಿಗೆ ಅವನ ಮೇಲೆ ತುಂಬಾ ವಿಶ್ವಾಸವಾಗಿದೆಯಂತೆ. ಆ ಸಂನ್ಯಾಸಿಯೊಂದಿಗೆ ಒಬ್ಬನೇ ಒಬ್ಬ ಶಿಷ್ಯನ ಹೊರತು, ಮತ್ತಾರೂ ಇರುವುದಿಲ್ಲವಂತೆ!

ಇದೆಲ್ಲಾ ಕೇಳಿ ಮಾದರಸನು ಆ ಚೋರ ಮಿತ್ರನೊಂದಿಗೆ ಒಮ್ಮೆ ಹೋಗಿ, ಆ ಮಹಾ ಸಂನ್ಯಾಸಿಯ ದರ್ಶನ ಮಾಡಿ, ತೀರ್ಥಪ್ರಸಾದಗಳನ್ನು ಧರಿಸಿಕೊಂಡನು. ಆದರೆ ಆ ಚೋರನಾಯಕನು ಸಂನ್ಯಾಸಿಯ ಜಟಾಜೂಟ, ದಾಡಿ ಮೀಸೆ, ಕಾವೀಶಾಟಿ, ದಂಡಕಮಂಡಲುಗಳನ್ನು ಕಂಡಮಾತ್ರಕ್ಕೇ ನಂಬಿಬಿಡುವವನಾಗಿರಲಿಲ್ಲ. ಈ ಅಪನಂಬುಗೆ ಬಲವಾಗುವಂತಹ ಒಂದು ನೋಟವೂ ಅವನ ಚೋರದೃಷ್ಟಿಗೆ ಬಿದ್ದಿತ್ತು. ಮುಕ್ತಾಶ್ರಮದ ಸಮೀಪದಲ್ಲಿ ನದಿಯ ಬದಿಯ ಒಂದು ಬಂಡೆಯ ಮೇಲೆ ಕುಳಿತುಕೊಂಡು ಮೀನು ಹಿಡಿಯುತ್ತಿದ್ದ ಒಬ್ಬ ಬೆಸ್ತರವನಿಗೆ ಸಂನ್ಯಾಸಿಯ ಶಿಷ್ಯನು ಏನೋ ಕಣ್ಣುಸನ್ನೆ ಮಾಡಿದನು. ಆ ಶಿಷ್ಯನನ್ನೇ

ಕಳ್ಳನೋಟದಿಂದ ಆ ಬೆಸ್ತನೂ ನೋಡುತ್ತಿದ್ದನು. ಶಿಷ್ಯನ ಸನ್ನೆಗೆ ಆ ಬೆಸ್ತನು ಬಂದು ಸಂನ್ಯಾಸಿಗೆ 'ದಂಡಂ'ಮಾಡಿ ತೀರ್ಥ ಪ್ರಸಾದಗಳನ್ನು ಪಡೆದುಕೊಂಡು ಹೋದನು. ಆಗ ಆ ಪ್ರಸಾದದೊಳಗಿದ್ದ ಯಾವುದೋ ಒಂದು ವಸ್ತುವನ್ನು ಆ ಬೆಸ್ತನು ತನ್ನ ಉಡಿಯೊಳಗೆ ತುರುಕಿಕೊಂಡನು. ಅದೇನಿರಬಹುದು? ಅದೊಂದು ಪತ್ರವಾಗಿರಬಾರದೇಕೆ? ಆ ಬೆಸ್ತನೂ, ಈ ಸಂನ್ಯಾಸೀ ಶಿಷ್ಯರೂ ಯಾರೋ ಗೂಢಚಾರರಾಗಿರಬಾರದೇಕೆ? – ಎಂದು ಮಾದರಸನಿಗೆ ಬಲವಾದ ಸಂದೇಹವೆದ್ದಿತು.

ಇದು ನಡೆದ ದಿನದಲ್ಲಿಯೇ ವೀರರುದ್ರ ಗಜಪತಿಯ ಪತ್ರದೊಂದಿಗೆ ಮಾರಪ್ಪನು ಕಟಕಪುರಿಗೆ ಬಂದಿದ್ದನು. ಹೊರಗಣ ತೋರಿಕೆಗೆ ಮಾರಪ್ಪ. ಮಾದರಸರು ಪರಸ್ಪರ ಸಂಬಂಧವಿಲ್ಲದವರ ಹಾಗಿದ್ದರೂ, ಒಳಗೊಳಗೆ ಅವರಿಬ್ಬರೂ ಒಂದೇ ಆಗಿದ್ದರು!

ರಾಣೀ ಅಜ್ಞಾತಾದೇವಿಯ ಆಜ್ಞೆಯಂತೆ ಆ ಮಾರಪ್ಪನು ಇನ್ನೂರುಮಂದಿ ಬಂಧು ದಳದೊಂದಿಗೆ ಬಂದು, ಆ ಬಂಧುವೃಂದವನ್ನೆಲ್ಲಾ ಮಹಾನದಿಯ ಆಚೆಗೆ ಅಡವಿಯೊಳಗೆ ಅಡಗಿಸಿಟ್ಟಿರುವುದಾಗಿ ಮಾರಪ್ಪನು ಮಾದರಸನಿಗೆ ತಿಳಿಸಿದನು. ಈ ಮಾರಪ್ಪನು ವೀರರುದ್ರನ ದೂತನೆಂದು ತಿಳಿಯಲ್ಪಟ್ಟುದರಿಂದ, ಅವನಿಗೆ ಮಾದರಸನಂತೆ ಯಾವ ನಿರ್ಬಂಧವೂ ಇದ್ದಿಲ್ಲ. ಅವನ ಬಳಿಯಲ್ಲಿದ್ದ ವೀರರುದ್ರನ ಅಂಕಿತಗಳು ಈಗ ಮಾದರಸನಿಗೂ ಕೋಟೆಯಿಂದ ಹೊರಗೆ ಹೋಗಲು ಸಹಾಯಕವಾದವು.

ಹಾಗೊಮ್ಮೆ ರಾತ್ರಿಯಲ್ಲಿ ಮಾದರಸನೇ ಕೋಟೆಯಿಂದ ಮೆಲ್ಲನೆ ಹೊರಗೆ ಹೋಗಿ, ಮುಕ್ತಾಶ್ರಮದ ಬಳಿಗೆ ಬಂದು, ಆಶ್ರಮದ ಹಿಂಬದಿಯಲ್ಲಿರುವ ತೋಪಿನೊಳಗೆ ನುಸುಳಿದನು. ಆಶ್ರಮದ ಹಿಂಗೋಡೆಯಲ್ಲಿದ್ದೊಂದು ಸಣ್ಣ ಕಿಟಕಿಯಿಂದ, ಹೊರಗೆ ಹಾಯುತ್ತಿರುವ ಪ್ರಕಾಶದೊಂದಿಗೆ, ಹೆಂಗಸಿನ ಕಂಠಸ್ವರವೊಂದು ಹೊರಡುತ್ತಿರುವುದನ್ನು ಕೇಳಿ, ಮಾದರಸನು ಕುತೂಹಲದಿಂದ ಇಣಿಕಿ ನೋಡಿದನು.

ಒಳಗೆ ಕಾಲುದೀಪವು ಉರಿಯುತ್ತಿತ್ತು. ಸಂನ್ಯಾಸಿ ಬಾಗಿಲ

ಬಳಿಯಲ್ಲಿ ನಿಂತಿದ್ದನು. ಶಿಷ್ಯನೂ, ಇನ್ನೊಬ್ಬಳು ತರುಣಿಯೂ ಹಣ್ಣುಗಳನ್ನು ಸುಲಿಯುತ್ತಾ ಕುಳಿತಿದ್ದರು. ಸಂನ್ಯಾಸಿ ಏನೋ ಕೇಳಿದುದಕ್ಕೆ ಆ ತರುಣಿ ಹೇಳುತ್ತಿದ್ದಳು: "ಇಲ್ಲಾ ಸ್ವಾಮಿ, ರಾಜಪುತ್ರಿಯ ಸಂಕಲ್ಪವು ಎಂದಿಗೂ ಕದಲುವಂತಹುದಲ್ಲ."

ಸಂನ್ಯಾಸಿ ಹೇಳಿದ: "ಹಾಗಲ್ಲ. ನಾವು ಗಜರಾಜಕುಮಾರಿಯ ಅಭ್ಯುದಯಕ್ಕಾಗಿಯೇ ಇಷ್ಟು ಪ್ರಯತ್ನ ಮಾಡುತ್ತೇವೆ. ಕಡೆಗೆ ಅವಳು ಅಧೈರ್ಯದಿಂದಲೋ ಚಂಚಲತೆಯಿಂದಲೋ ಹಿಂದೆ ಸರಿದರೆ?"

"ಇಲ್ಲ. ತಾವು ಸಂದೇಹಪಡಬೇಡಿ ಸ್ವಾಮಿ" ತರುಣಿ ನುಡಿದಳು.

"ಪ್ರಕೃತ ರಾಜಕುಮಾರಿಯೊಂದಿಗೆ ನೀನೊಬ್ಬಳೇ ಹೊರಟರೆ ಸಾಕು; ಮತ್ತಾರೂ ಕೂಡದು" ಎಂದು ಶಿಷ್ಯನೆಂದನು.

"ಮತ್ತಾರು ಏಕೆ? ನನ್ನಂತಹ ಅಂತರಂಗದ ಸಖಿ ಅವಳಿಗೆ ಬೇರೆ ಯಾರಿದ್ದಾರೆ? ಆದರೆ ನಾವು ಅಲ್ಲಿಗೆ ತಲುಪಿದ ಕೂಡಲೆ, ಆ ಸಮಾಚಾರವನ್ನು ಸುರಂಗದ ಬಾಗಿಲಿನ ಬಳಿ ನಿಂತಿರುವ ದಾಸಿಗೆ ತಿಳಿಯಪಡಿಸುವ ಏರ್ಪಾಡಿಗೆ ಮರೆಯಲೇಬಾರದು. ಇಲ್ಲದಿದ್ದರೆ ಗಜರಾಣಿ ತಳಮಳಿಸಿ ಹೋದಾಳು" ತರುಣಿಯ ಮಾತು.

ಅದಕ್ಕೆ ಶಿಷ್ಯನು "ಆ ಮುಖ್ಯಕಾರ್ಯವನ್ನು ಮರೆಯುವುದು ಹೇಗೆ? ಅದಕ್ಕೂ ಏರ್ಪಾಡಾಗಿದೆ. ಏನೂ ಸಂದೇಹ ಪಡಬೇಡವೆಂದು ಗಜರಾಣಿಗೆ ನೀನೇ ಗಟ್ಟಿಯಾಗಿ ಹೇಳು. ಮರುದಿನವೇ ಇದರ ಶುಭ ಪರಿಣಾಮವನ್ನು ನೋಡಬಹುದೆಂದೂ ರಾಣಿಗೆ ತಿಳಿಸು" ಎಂದನು.

"ದೋಣಿಗಳು ನಮ್ಮ ಸಮಯಕ್ಕೆ ಸರಿಯಾಗಿ—"ಎಂದು ತರುಣಿ ಹೇಳುವಾಗ ಸಂನ್ಯಾಸಿ—"ಹೀಗೆ ಸುಮ್ಮನೆ ಸಂದೇಹವನ್ನು ಕೆದರುತ್ತಾ ಇದ್ದರೆ ಹೇಗಮ್ಮ? ಅದರಲ್ಲೆಲ್ಲಾ ಎಳ್ಳಿನಷ್ಟು ಹೆಚ್ಚು ಕಡಮೆಯಾಗದು. ನಾಳೆ ಕತ್ತಲಾದ ಕೂಡಲೇ ಎಂಟು ಮಂದಿ ದೋಣಿಯ ವೀರರು, ಮೂರು ದೋಣಿಗಳನ್ನು ತಂದು, ಕೋಟೆಯ ಪಶ್ಚಿಮದಿಕ್ಕಿನಲ್ಲಿ, ನದೀತೀರದ ಪೊದರುಗಳೆಡೆಯಲ್ಲಿ ಅಡಗಿಸಿ, ಆ ದೊಡ್ಡ ಗೋಳೀಮರದ ಬುಡದಲ್ಲಿ ನಮಗೋಸ್ಕರ ಕಾದಿರುತ್ತಾರೆ. ಆ ಸ್ಥಳದವರೆಗೆ ಮಾತ್ರ ರಾಜಕುಮಾರಿ ನಡೆಯಲೇ ಬೇಕಾಗುವುದು, ಪಾಪ!"

ಮಾದರಸನು ಶ್ವಾಸಬಂಧನ ಮಾಡಿಕೊಂಡು, ಈ ಸಂಭಾಷಣೆಗಳನ್ನು ಗ್ರಹಿಸಿಕೊಂಡನು. ಬಳಿಕ ಆ ತರುಣಿ ಹಣ್ಣುಗಳನ್ನು ತಂದ ಬುಟ್ಟಿಯನ್ನು ಎತ್ತಿಕೊಂಡು, ನಾಳೆ ಬೆಳಗ್ಗೆ ಸಂನ್ಯಾಸಿಯ ದರ್ಶನಕ್ಕೆ ಬರುವೆನೆಂದು ಹೇಳಿ ಅಲ್ಲಿಂದ ಹೊರಟಳು.

ಮಾದರಸನೂ ಅಲ್ಲಿಂದ ಕದಲಿದನು. ಅವನು ಸ್ವಲ್ಪ ದೂರ ಆ ತರುಣಿಯ ಹಿಂದೆಯೇ ನಡೆಯಲು, ಅವಳು ದೂರದಲ್ಲಿದ್ದ ಒಂದು ಪುಟ್ಟ ಗುಡಿಯ ಮಂಟಪದಲ್ಲಿ ಹೊಕ್ಕು ಮಾಯವಾದಳು. ಅಲ್ಲಿ ರಹಸ್ಯವಾದ ಸುರಂಗದ ಬಾಯಿ ಇರುವುದೆಂದೂ ಅದು ಗಜರಾಜಾಂತಃಪುರಕ್ಕೆ ಹೋಗಿ ಸೇರುವುದೆಂದೂ ಮಾದರಸನಿಗೆ ತಿಳಿಯಿತು.

ಮರುದಿನ ಮಾದರಸನೂ ಮಾರಪ್ಪನೂ ಗುಸುಗುಸು ಮಾತಾಡಿಕೊಂಡು, ಇಬ್ಬರೂ ಕೋಟೆಯಿಂದ ಹೊರಗೆ ನುಸುಳಿದರು. ಇಬ್ಬರ ಕೈಯಲ್ಲಿಯೂ ವೀರರುದ್ರ ಗಜಪತಿಯ ಚೀಟು ಇದ್ದುದರಿಂದ, ಯಾರೇನೂ ಅವರನ್ನು ತಡೆಯುವ ಗೋಜಿಗೆ ಹೋಗಲಿಲ್ಲ.

ಇಬ್ಬರೂ ಕಟಕ ನಗರಿಯ ಪಶ್ಚಿಮಭಾಗಕ್ಕೆ ನಡೆದರು. ಅಲ್ಲಿ ಹರಿಯುತ್ತಿರುವ ನದಿಯ ಬದಿಯಲ್ಲಿ ಮಾದರಸನು ಅಡಗಿಕೊಂಡನು. ಮಾರಪ್ಪನು ಮಾತ್ರ ಅಲ್ಲಿಂದ ಹೊರಟು, ಹಳ್ಳಿಗರು ಸವೆಯಿಸಿದ ಕಾಲುದಾರಿಯಿಂದಾಗಿ ನದಿಯನ್ನು ದಾಟಿ, ಅಕ್ಕರೆಯಲ್ಲಿ ಕಾಣುವ ದೂರದ ಬೆಟ್ಟಗಳ ಕಡೆಗೆ ತಿರುಗಿದನು.

ಕತ್ತಲಾಗುವಷ್ಟರಲ್ಲಿ ಮಾರಪ್ಪನು ಹದಿನೈದು ಮಂದಿ ವೀರ ಬಂಧುಗಳೊಂದಿಗೆ ಮಾದರಸನ ಬಳಿಗೆ ಬಂದು ಸೇರಿದನು. ಅವರೆಲ್ಲರ ಕೈಯಲ್ಲಿಯೂ ವೀರರುದ್ರ ಗಜಪತಿಯ ಚಿಹ್ನವಿದ್ದೇ ಇತ್ತು. ಕೃಷ್ಣಪಕ್ಷದ ಕತ್ತಲೆ ಸುತ್ತುಮುತ್ತೂ ಕವಿದುಕೊಂಡು ಬರುವಾಗ, ಅವರೆಲ್ಲರೂ ಪೊದರುಗಳೆಡೆಯಲ್ಲಿ ಅವಿತುಕೊಂಡು, ನದಿಯ ಬದಿಯಲ್ಲಿರುವ ಆ ಗೋಳೀಮರವನ್ನೇ ಗುರಿ ನೋಡುತ್ತಿದ್ದರು.

ಆ ಭಾಗದಲ್ಲಿ ಕಟಕ ನಗರಿಯ ಹೊರಗಿನ ಕೋಟೆಯ ಗೋಡೆ ಪಶ್ಚಿಮದಿಂದ ಉತ್ತರಕ್ಕೆ ತಿರುಗಿಕೊಂಡು ಹೋಗಿತ್ತು. ಕೋಟೆಯ ಬುರುಜುಗಳ ಮೇಲೆ ಅಲ್ಲಲ್ಲಿ ರಕ್ಷಕ ಭಟರ ಕಾವಲೂ ಇತ್ತು. ಆದರೆ

ರಾತ್ರಿಯ ಕಾಲದಲ್ಲಿ ನದಿಯ ಆಚೆಯ ದಡ ಅವರಿಗೆ ಸರಿಯಾಗಿ ಕಾಣಿಸದು. ಪರೀಕ್ಷಿಸಿ ನೋಡುವ ಸಂದರ್ಭವೂ ಆಗಿರಲಿಲ್ಲ. ಅಂತೆಯೇ ಮೂರು ದೋಣಿಗಳು ಸದ್ದಾಗದಂತೆ ಹುಟ್ಟು ಹಾಕುತ್ತ, ಆ ಗೋಳೀ ಮರದ ಬುಡಕ್ಕೆ ಬಂದುವು. ಆ ಮಹಾವೃಕ್ಷದ ದಟ್ಟವಾದ ನೆರಳು ನದಿಯ ನೀರ ಮೇಲೆಯೂ ಹರಡಿಕೊಂಡಿತ್ತು. ದೋಣಿಗಾರರು ಆ ಮೂರು ದೋಣಿಗಳನ್ನು ಪೊದರುಗಳ ಮರೆಯಲ್ಲಿ ತಂಗಿಸಿ ಆ ಗೋಳೀಮರದ ಕಾಂಡದ ಬುಡದಲ್ಲಿ ಅಡಗಿ ಕುಳಿತರು. ಅವರು ಎಂಟು ಮಂದಿಗಳೂ ಕಂದುಬಣ್ಣದ ಪೋಷಾಕನ್ನು ಧರಿಸಿದ್ದರು.

ಹೊಂಚುಹಾಕುತ್ತಿದ್ದ ಮಾದರಸನು ತನ್ನ ಸಂಗಾತಿಗಳೊಡನೆ ಅವರ ಮೇಲೆ ಬಿದ್ದನು. ಎಲ್ಲರೂ ಬೇಟೆಗಳ ಮೇಲೆ ಹಾರುವ ಹುಲಿಗಳ ಹಾಗೆ ಅವರ ಮೇಲೆ ಧುಮುಕಿದರು. ಸದ್ದಿಲ್ಲದಂತೆ ನಿಮಿಷ ಮಾತ್ರದಲ್ಲಿ, ಆ ಎಂಟು ಮಂದಿಯ ಬಾಯೊಳಗೆ ಬಟ್ಟೆಗಳನ್ನು ತುರುಕಿ ಕೈಕಾಲುಗಳನ್ನು ಕಟ್ಟಿ, ಅವರ ಉಡುಗೆ ತೊಡುಗೆಗಳನ್ನು ಸುಲಿದು ಕೊಂಡು, ಎಲ್ಲರನ್ನೂ ದೂರಕ್ಕೆ ಹೊತ್ತುಹೊತ್ತು ಒಯ್ದರು. ಅಲ್ಲಿ ಅವರನ್ನೆಲ್ಲ ಒಂದೆರಡು ಮರಗಿಡಗಳಿಗೆ ಕಟ್ಟಿಹಾಕಿದರು.

ಅನಂತರ ಮಾದರಸನೂ, ಮಾರಪ್ಪನೂ ಮೇಲೆ ಆರು ಮಂದಿಗಳೂ ಆ ದೋಣಿಗಾರರ ಕಂದುಡಿಗೆಗಳನ್ನು ಧರಿಸಿಕೊಂಡು, ಆ ಗೋಳೀಮರದ ಬುಡದಲ್ಲಿ ಅಡಗಿಕೊಂಡರು. ಉಳಿದವರು ಹೊರಟು ಹೋದರು. ಕೆಲವು ನಿಮಿಷಗಳ ಮೊದಲು ಶಾಂತವಾಗಿ ಸ್ತಬ್ಧವಾಗಿದ್ದ ಆ ಪ್ರದೇಶದಲ್ಲಿ, ಫಕ್ಕನೆ ಮೇಲೆ ಹೇಳಿದ ಬಲವತ್ಪ್ರಯೋಗಗಳು ಜರುಗಿ ಮತ್ತೆ ಏನೂ ಜರುಗಲಿಲ್ಲವೋ ಎಂಬ ಹಾಗೆ ಶಾಂತವಾಗಿ ಹೋದ ಆ ಪ್ರದೇಶವು, ನಾಲಗೆಯನ್ನು ಚಾಚಿ ಹಾಂತೆಯನ್ನು ನುಂಗಿ ಮತ್ತೆ ಅಚಲವಾಗಿ ನೋಡುತ್ತಿರುವ ಹಲ್ಲಿಯಂತೆ ಒಪ್ಪುತ್ತಿತ್ತು – ಆ ಗೋಳೀಮರ!

* * * *

ಶರತ್ ಕೃಷ್ಣಪಕ್ಷದ ದಿನಗಳು. ಆಕಾಶವು ಬಹಳವಾಗಿ ಮೋಡದ ತೆರೆಯನ್ನು ಹೊದ್ದುಕೊಂಡಿತ್ತು. ಆದರೆ ಹರಿದುಹೋದ ಆ ಮೋಡದ

ತೆರೆಯ ಎಡೆಯಲ್ಲಿ ಅಲ್ಲೊಂದಿಲ್ಲೊಂದಾಗಿ ನಕ್ಷತ್ರಗಳು ಮಿನುಗುತ್ತಿದ್ದುವು. ಮಂದವಾದ ಕತ್ತಲೆಯಲ್ಲಿ ಇದಿರಿನ ವಸ್ತುಗಳು ಅಚ್ಚಕಪ್ಪಾದ ಏಕಾಕೃತಿಯಾಗಿ ಕಾಣಿಸುತ್ತಿದ್ದುವು. ನಾಲ್ಕು ವ್ಯಕ್ತಿಗಳು ನದೀ ತೀರವನ್ನು ಹಿಡಿದು ಸಾಗುತ್ತಿರುವುದು ಮಸಕುಮಸಕಾಗಿ ಕಾಣುತ್ತಿತ್ತು. ನಾಲ್ವರೂ ಆ ಗೋಳೀಮುಗದ ಬುಡಕ್ಕೆ ಬಂದು ನಿಂತರು. ಮುಂದಿನವನು ಸಂನ್ಯಾಸಿ; ಅವನ ಹಿಂದಿನವಳು ಗಜಪತಿನಂದಿನಿ ರುಚೀದೇವಿ; ರುಚಿದೇವಿಯ ಹಿಂದೆ ಅವಳ ಪ್ರಾಣಸಖಿ ಗೌರಿ; ಅವಳ ಹಿಂದೆ ಶಿಷ್ಯ.

ಮಾದರಸನು ಸಂಗಾತಿಗಳೊಂದಿಗೆ ಅವರಿದಿರಿಗೆ ಕಾಣಿಸಿದನು. ಸಂನ್ಯಾಸಿ ಕೈಸನ್ನೆ ಮಾಡಿದನು. ಒಡನೆಯೆ ಮಾದರಸನ ಕಡೆಯವರು ಆ ಮೂರು ದೋಣಿಗಳನ್ನು ಈಚೆಗೆ ತಂದರು. ಮೊದಲು ರುಚೀದೇವಿಯೂ ಗೌರಿಯೂ ಬಂದು ದೋಣಿಯನ್ನೇರಿ ನಡುವೆ ಕುಳಿತರು. ಅವರ ಬಳಿಯಲ್ಲಿ ಸಂನ್ಯಾಸಿ ಶಿಷ್ಯರು ಏರಿಕೊಂಡರು. ಆಮೇಲೆ ಇಬ್ಬರು ವೇಷಗಾರ ದೋಣಿಗಾರರು ಎರಡು ಮೂಲೆಗಳಲ್ಲಿ ಕುಳಿತುಕೊಂಡು ಹುಟ್ಟುಗಳನ್ನಾಡಿಸುತ್ತ ದೋಣಿಗಳನ್ನು ಮುಂದಕ್ಕೆ ಹರಿಸಿದರು.

ಉಳಿದ ದೋಣಿಗಾರ ವೇಷದವರು, ಉಳಿದೆರಡು ದೋಣಿಗಳಲ್ಲಿ ಮುಮ್ಮೂರು ಮಂದಿಯಂತೆ ಏರಿಕೊಂಡು, ರುಚೀದೇವಿಯ ದೋಣಿಯ ಉಭಯ ಪಾರ್ಶ್ವಗಳಲ್ಲಿ ಹೊರಟರು.

ಅಂಬಿನ ವೇಗದಿಂದ ನೀರನ್ನು ಸೀಳಿಕೊಂಡು ಹೊರಟ ಆ ದೋಣಿಗಳು, ಉತ್ತರ ತೀರದಲ್ಲಿಯೇ ಪಶ್ಚಿಮಕ್ಕೆ ಉದ್ದಕ್ಕೆ ಹೋಗುವುದನ್ನು ನೋಡಿ, ಸಂನ್ಯಾಸಿಗೆ ಏನೋ ಸಂದೇಹ ತೋರಿತು. "ಹೀಗೆತ್ತ ?" ಎಂದನು.

ಅದಕ್ಕೊಬ್ಬನು, "ನದಿಯ ಮಧ್ಯದಲ್ಲಿ ಪ್ರವಾಹವು ಜೋರಾಗಿದೆ. ಎಲ್ಲಿಯೋ ದೂರದಲ್ಲಿ ಮಳೆಯಾಗಿರಬೇಕು. ಹೀಗೆಯೇ ಮುಂದೆ ಹೋಗಿ ಆಮೇಲೆ ತಿರುಗಿದರೆ, ಸರಿಯಾದ ಸ್ಥಳಕ್ಕೆ ಸುಲಭವಾಗಿ ತಲುಪಬಹುದು" ಎಂದು ಉತ್ತರಿಸಿದನು.

ಆದರೆ ದೋಣಿಗಳು ದಕ್ಷಿಣಕ್ಕೆ ತಿರುಗಲೇ ಇಲ್ಲ. ಹಾಗೆಯೇ ಬಿರುಗಾಳಿಯಂತೆ ಓಡುತ್ತಿದ್ದುವು. ಆ ದೋಣಿಗಾರರ ಹುಟ್ಟು ಹಾಕುವ ಕೌಶಲವನ್ನು ಕಂಡು, ಆಶ್ಚರ್ಯ, ಸಂದೇಹ, ಭೀತಿಗಳು ಏಕಕಾಲದಲ್ಲಿ ಉಂಟಾದುವು ಆ ಸಂನ್ಯಾಸೀ ಶಿಷ್ಯರಿಗೆ !

ಸಂನ್ಯಾಸಿ ಸದರ್ಪ ಸ್ವರದಿಂದ–"ಎಲೈ ಚುಕ್ಕಾಣಿಯವರೆ, ನಿಮ್ಮ ಪ್ರವರ್ತನೆ ಸಂದೇಹಾಸ್ಪದವಾಗಿದೆ. ಎತ್ತ ಹೋಗುವಿರಿ?"

ಇದಕ್ಕೆ ಮೊದಲುತ್ತರವಾಗಿ ಅಕ್ಕಪಕ್ಕದ ದೋಣಿಗಳು ಆ ದೋಣಿಯ ತೀರ ಸಮೀಪಕ್ಕೆ ಬಂದುವು. ಅದರೊಳಗಿದ್ದೊಬ್ಬ ಧಾಂಡಿಗನೆಂದನು : "ಅಯ್ಯಾ, ಘಟಕ ಸಂನ್ಯಾಸಿ, ಸುಮ್ಮನೆ ಕುಳಿತುಕೊಳ್ಳುವಿರೋ ಅಥವಾ ನಮ್ಮ ಮುದ್ದಿನ ಪುಡಿ ಹಾಕಬೇಕೋ ?" ಎಂದು ವ್ಯಂಗ್ಯವಾಗಿ ಕೇಳಿದನು.

"ಅಯ್ಯೋ ! ಗುರುದೇವ ! ಮೋಸ ! ಇನ್ನೇ........" ಎಂದು ಶಿಷ್ಯನು ಗಾಬರಿಯಿಂದ ಬಾಯಿ ತೆರೆಯಲು, ಮಾದರಸನು ಚಟಕ್ಕನೆ ಈಚೆಗೆ ಹಾರಿ, ಅವನ ಬಾಯಿಯನ್ನು ಒತ್ತಿಹಿಡಿದು, "ಗದ್ದಲ ಮಾಡ ಬಾರದು. ಭಯವೇನೂ ಇಲ್ಲ" ಎಂದನು. ಅವನ ಕೈ ಕಬ್ಬಿಣದ ಕೈಯಂತಿರುವುದನ್ನರಿತು ಶಿಷ್ಯನು ನಡುಗಿದನು.

ರುಚೀದೇವಿ ಕೋಪದಿಂದಲೂ ಭಯದಿಂದಲೂ ಕೂಗಿದವಳಾಗಿ 'ಏನಿದು ? ಯಾರು ನೀವು ?' ಎನ್ನುತ್ತಾ ತನ್ನ ಉಡಿಸೀರೆಯ ಮರೆಯಿಂದ ಒಂದು ಕೈಕಠಾರಿಯನ್ನೆತ್ತಿಕೊಂಡಳು. ಎತ್ತಿಕೊಂಡಳೋ ಇಲ್ಲವೋ ಅದು ಮಾದರಸನ ಭದ್ರಮುಷ್ಟಿಯೊಳಗೆ ಸಿಕ್ಕಿಕೊಂಡಿತು. ಅವನು ಎಂತಹ ಲಾಘವಶಾಲಿಯಾದ ಚುರುಕುಗಾರನೆಂಬುದೂ ಗೊತ್ತಾಯಿತು.

ಮಾದರಸನು, "ತಾಯಿ ! ನಿಮ್ಮನ್ನು ಬಲವಂತದಿಂದ ಒಯ್ಯುವ ಪ್ರಸಂಗ ಬಂದುದಕ್ಕಾಗಿ ವ್ಯಸನಪಡುತ್ತೇನೆ. ಮನ್ನಿಸಬೇಕು. ನಿಮ್ಮನ್ನು ಸುರಕ್ಷಿತವಾದ ಸ್ಥಾನಕ್ಕೇ ಒಯ್ಯುತ್ತಿದ್ದೇನೆ. ನೆಮ್ಮದಿಯಾಗಿರಬೇಕು. ನಿಮಗೇನೂ ಅಪಾಯವಿಲ್ಲ!" ಎಂದನು ಒಳ್ಳೇ ಗೌರವಭಾವದಿಂದ.

ರುಚೀದೇವಿ ಗೌರಿಯನ್ನು ಆಲಿಂಗಿಸಿಕೊಂಡು, ಆರ್ತಸ್ವರದಿಂದ

"ಇದೇನೇ ಗೌರಿ? ಪೂಜ್ಯರಾದ ಈ ಸಂನ್ಯಾಸಿಗಳನ್ನು ನಂಬಿ ಮೋಸ ವಾಯಿತಲ್ಲಾ! ಇನ್ನೇನು ಗತಿ?" ಎಂದಳು.

ಅದಕ್ಕೆ ಸಂನ್ಯಾಸಿ "ಅಮ್ಮಾ, ರುಚೀಕುಮಾರಿ! ನಮ್ಮನ್ನು ಸಂದೇಹಿಸಬೇಡ. ನಾವೂ ಈ ಘಾತುಕವನ್ನರಿಯೆವು. ತುಸು ಧೈರ್ಯವನ್ನವಲಂಬಿಸು. ಇವರು ಯಾರೆಂಬುದನ್ನು ವಿಚಾರ ಮಾಡೋಣ. ಏನೋ ರಾಮಕೃಷ್ಣ, ಹೊರಡುವ ಮುಂಚೆ ನಾನು ಜ್ಞಾನದೃಷ್ಟಿಯಿಂದ ನೋಡುವಂತೆ ನೆನಪು ಮಾಡಬಾರದಿತ್ತೇನೋ ಮೂರ್ಖ!"

"ನೆನಪು ಬರಲಿಲ್ಲ ಸ್ವಾಮಿ ನನ್ನ ಮಂಕುಬುದ್ಧಿಗೆ!"

ಮಾದರಸನೆಂದ: "ಅಮ್ಮಾ! ರಾಜಕುಮಾರಿ! ವ್ಯರ್ಥವಾಗಿ ಈ ಶಿಷ್ಯರ ಮೇಲೆ ಅಪವಾದ ಹೊರಿಸಬೇಡಿ. ಇವರೇನೂ ಅರಿಯರು. ನೀವೀಗ ನಿಶ್ಚಿಂತೆಯಿಂದ ನಿದ್ರಿಸಿರಿ."

ಮಾದರಸನ ಕೈಯೊಳಗಿದ್ದ ಏನೋ ಒಂದು ಪುಡಿ ರುಚೀ, ಗೌರಿಯರ ಮುಖದ ಮೇಲೆ ಬಿದ್ದಿತು. ಇಬ್ಬರೂ ಗಾಬರಿಯಿಂದ 'ಆ' ಎಂದು ಕೂಗಿದರು. ಅನಂತರ ಹಾಗೆಯೇ ಹಿಮ್ಮಾಲಿ, ಒಬ್ಬರ ಬಳಿಯಲ್ಲಿ ಒಬ್ಬರು ಒರಗಿಕೊಂಡರು.

"ಇದೇನೀ ಅನ್ಯಾಯ!" ಸಂನ್ಯಾಸಿ ಗರ್ಜಿಸಿದನು.

"ಅದು ನಿದ್ರೆಯ ಪುಡಿ ಸ್ವಾಮಿ. ಕೋಪಿಸಬೇಡಿ. ಅದ ರಿಂದೇನೂ ಬಾಧಕವಿಲ್ಲ. ಬೇಕಾದರೆ ನಿಮಗೂ ಚೆಲ್ಲುತ್ತೇವೆ. ನಾವೂ ಚೆಲ್ಲಿಸಿಕೊಳ್ಳುತ್ತೇವೆ."

"ಬೇಡ ಬೇಡ" ಎಂದು ರಾಮಕೃಷ್ಣನು ಮೊರೆಯಿಟ್ಟನು.

"ನಮಗೆ ಬೇಡ. ಸದ್ಯ ನೀವು ಯಾರು, ನಿಮ್ಮ ಉದ್ದೇಶವೇನು ಎಂಬುದನ್ನಿಷ್ಟು, ಮುಂದಾಗಿ ಸ್ಪಷ್ಟಪಡಿಸಿದರೆ ಒಳ್ಳೆಯದಿತ್ತು" ಎಂದನು ಸಂನ್ಯಾಸಿ.

"ಹೌದು. ಸುಳ್ಳು ಗಿಳ್ಳು ಹೇಳಿ ಈ ಮಹಾಮಹಿಮರ ಶಾಪಕ್ಕೆ ತುತ್ತಾಗಬೇಡಿ." ರಾಮಕೃಷ್ಣನು ಎಚ್ಚರಿಸಿದನು.

"ಬಲ್ಲೆನಯ್ಯಾ ನಿಮ್ಮ ಮಹಾಮಹಿಮೆಗಳನ್ನು! ನೀವು

ಕೃಷ್ಣದೇವರಾಯನ ಗೂಢಚಾರರಲ್ಲವೆ? ಈ ಮೋಸದ ಸಂನ್ಯಾಸ ದಿಂದ, ಈ ಗಜಪತಿನಂದಿನಿಯನ್ನು ಆ ಕೃಷ್ಣರಾಯನ ಕೈಗೆ ಸಿಕ್ಕಿಸಲಿದ್ದಿರಲ್ಲವೆ?" ಎಂದು ಮಾದರಸ ಕೇಳಿದನು.

ಸಂನ್ಯಾಸಿ ಆಶ್ಚರ್ಯದಿಂದ—"ಓಹೋ! ಎಲ್ಲಾ ಬಲ್ಲೆಯಾ ನೀನು? ಆದರೆ ಸರಿಯಾಗಿ ಗ್ರಹಿಸಲಿಲ್ಲ. ನೀನು ಮಾಡುವುದೀಗ ಮಹಾ ಪಾಪಕಾರ್ಯವಾಗಿದೆ. ಈ ಗಜಪತಿ ನಂದಿನಿ ಕೃಷ್ಣದೇವ ರಾಯನೇ ತನಗೆ ಪತಿಯಾಗಬೇಕೆಂದು ಬಯಸಿದ್ದಾಳೆ."

"ಅದೂ ತಂತ್ರವಿದ್ದೀತು!" ಎಂದನು ಮಾದರಸ.

ಸಂನ್ಯಾಸಿ ಮುಂದುವರಿಸಿದನು: "ಇದರಲ್ಲೇನಿದೆ ತಂತ್ರ? ಇವಳ ತಂದೆ, ಪ್ರತಾಪರುದ್ರನು ದುರಭಿಮಾನದಿಂದ ಕುಮಾರಿಯ ಇಚ್ಛೆಗೆ ಒಪ್ಪದೆ, ಬೇರೆ ವರನನ್ನು ಹುಡುಕಿ ವಿವಾಹ ಮಾಡುವ ಪ್ರಯತ್ನದಲ್ಲಿದ್ದಾರೆ. ಅದರಿಂದಲೇ ಇವಳು ಹೀಗೆ ರಹಸ್ಯವಾಗಿ ರಾಯನ ಶಿಬಿರಕ್ಕೆ ಹೊರಟಿದ್ದಾಳೆ. ನೀನು ಈಗ ಈ ಪವಿತ್ರವಾದ ಪ್ರೇಮ ಸಮ್ಮೇಳನಕ್ಕೆ ವಿಘಾತವನ್ನುಂಟುಮಾಡಿದ್ದೀ. ಅಂದರೆ ಸಾಮ್ರಾಟ್ ಕೃಷ್ಣದೇವ ರಾಯರ ಕೋಪಕ್ಕೇ ನೀನು ಪಾತ್ರನಾದಂತಾಯಿತು. ನೀನು ಇದನ್ನರಿತು ಈಗಾದರೂ ಈ ದೋಣಿಯನ್ನು ರಾಯನ ಶಿಬಿರದ ಕಡೆಗೆ ತಿರುಗಿಸಿದಿಯಾದರೆ, ರಾಯನು ನಿಮ್ಮನ್ನು ಮನ್ನಿಸುವಂತೆ ಮಾಡುವ ಭಾರವು ನನ್ನದಾಗಿರಲಿ."

"ಅದೇನೂ ಬೇಡ ಸ್ವಾಮಿ. ಇನ್ನು ಶೀಘ್ರದಲ್ಲಿಯೇ ನಿಮ್ಮ ಆ ರಾಯನೂ, ನಮ್ಮ ಮಹಾರಾಣೀ ಅಜ್ಞಾತಾದೇವಿಯ ಮುಂದೆ ಬರಲ್ಪಡುತ್ತಾನೆ. ಅಲ್ಲಿಯೇ ಈ ಪ್ರೇಮ ಸಮಸ್ಯೆಯೂ ಇತ್ಯರ್ಥವಾದೀತು!" ಎಂದನು ಮಾದರಸ.

"ರಾಣೀ ಅಜ್ಞಾತಾದೇವಿಯೇ?"–ಗುರು ಶಿಷ್ಯರ ಬಾಯಿಯಿಂದ ಒಮ್ಮೆಗೇ ಉದ್ಗಾರವು ಹೊರಟಿತು.

"ಕೇಳಿರುವಿರಾ?" ಮಾದರಸನ ಪ್ರಶ್ನೆ.

"ಬಹಳ ಕೇಳಿದ್ದೇವೆ. ದಕ್ಷಿಣ ದೇಶಗಳಲ್ಲಿ ದೊಡ್ಡ ದೊಡ್ಡ ಜಮೀನುದಾರ ಪಾಳೆಯಗಾರರನ್ನೆಲ್ಲಾ ಕೊಳ್ಳೇ ಹೊಡೆಯುವ ಪ್ರಸಿದ್ಧ

ಳಾದ ಚೋರ ನಾಯಕಿಯನ್ನು ಅರಿಯದವರಾರು?" ಎಂದನು ಸಂನ್ಯಾಸಿ.

"ಜಮೀನುದಾರ ಪಾಳೆಯಗಾರರೆಂದಲ್ಲ. ಧನಮತ್ತರೂ ಪ್ರಜಾಪೀಡಕರೂ, ದುಷ್ಟರೂ, ಕಠೋರಿಗಳೂ ಆದ ರಾಜರಾಜೇಂದ್ರರನ್ನೆಲ್ಲಾ ಕೊಳ್ಳೆ ಹೊಡೆಯುತ್ತೇವೆ."

"ದುಷ್ಟರೂ ಕಠೋರಿಗಳೂ ಎಂದರೆ ಯಾರೊ?"– ಸಂನ್ಯಾಸಿ ಕೇಳಿದನು.

"ಅದೂ ಗೊತ್ತಿಲ್ಲವೇ ನಿಮಗೆ? ಮುಖ್ಯವಾಗಿ ಈಗ ಪ್ರಬಲರಾಗಿ ವಿಜೃಂಭಿಸುವ ಗಜಪತಿ–ನರಪತಿ–ಅಶ್ವಪತಿಗಳೇ. ಈ ಮೂವರೂ ರಾಜ್ಯ ಲಾಲಸೆಯಿಂದ ಒಬ್ಬರೊಡನೊಬ್ಬರು ಕಾದಾಡುತ್ತಿದ್ದಾರೆ. ಇವರ ರಾಜಸತ್ತೆಯನ್ನೇ ತೊಲಗಿಸಿ, ಪ್ರಜಾಪ್ರತಿನಿಧಿ ಪ್ರಭುತ್ವವನ್ನೇರ್ಪಡಿಸಬೇಕೆಂಬುದೇ ನಮ್ಮ ಮಹಾರಾಣಿಯ ಉದ್ದೇಶ. ಗಜಪತಿ–ನರಪತಿಗಳು ಅವಳ ಕಟು ಶತ್ರುಗಳೂ ಆಗಿರುವರು."

"ಹಾಗಾದರೆ ಈ ಗಜಪತಿನಂದಿನಿಯನ್ನು ಅಪಹರಿಸಿ ಅವಳೇನು ಮಾಡುವಳು?"

"ಅದು ಅವಳಿಗೇ ಗೊತ್ತು! ನಾವು ಆ ತಾಯಿಯ ಪಾದ ಸೇವಕರು. ಅವಳ ಆಜ್ಞೆಯನ್ನು ಪಾಲಿಸುವುದಷ್ಟೇ ನಮ್ಮ ಕೆಲಸ. ಆದರೆ ಒಂದು ಖಂಡಿತ. ಈ ರುಚೀದೇವಿಯವರ ಮೇಲೆ ನಮ್ಮ ರಾಣಿ, ಅತ್ಯಂತ ಪ್ರೀತಿವಾತ್ಸಲ್ಯವುಳ್ಳವಳಾಗಿಯೇ ನಮಗೆ ಈ ಕಾರ್ಯವನ್ನು ಆಜ್ಞಾಪಿಸಿದ್ದಾಳೆ."

"ಆಹಾ! ಹುಲಿಗೆ ದನವು ಬಲು ಪ್ರೀತಿಯ ಪ್ರಾಣಿಯಾಗಿರುವ ಹಾಗೆ!" ಎಂದನು ರಾಮಕೃಷ್ಣ.

"ಹಾಗಲ್ಲವೆಂದು ರಾಣಿಯ ದರ್ಶನವಾಗುತ್ತಲೇ ನಿಮಗೆ ಗೊತ್ತಾಗುವುದು. ಅಲ್ಲಿ ರುಚೀದೇವಿಯವರ ಸೋದರ ಮಾವನಾದ ರಾಜಾ ವೀರರುದ್ರ ಗಜಪತಿಗಳೂ ಇದ್ದಾರೆ. ಈಗ ರುಚೀದೇವಿಯವರು ತಮ್ಮ ಸೋದರ ಮಾವನ ಬಳಿಗೇ ಒಯ್ಯಲ್ಪಡುತ್ತಿದ್ದಾರೆ."

ಇದನ್ನು ಕೇಳಿ ಸಂನ್ಯಾಸಿ ಆಶ್ಚರ್ಯದಿಂದ "ಇದೇನು ಸೋಜಿಗ!

ಹಾಗಾದರೆ ನಿಮ್ಮ ರಾಣಿ ಗಜಪತಿ ಹಿತೈಷಿಣಿ ಎಂದಾಯಿತಲ್ಲ!"

"ಅದೇ ಅಲ್ಲ. ಅಲ್ಲಿಯೇ ಏನೋ ರಹಸ್ಯವಿದೆ. ಅದು ಮಾತ್ರ ನಮಗೂ ಗೊತ್ತಿಲ್ಲ. ವಿಚಿತ್ರವೇನೆಂದರೆ, ವೀರರುದ್ರ ಗಜಪತಿಯನ್ನು, ನಾವೇ ಬಲವಂತದಿಂದ ಅಪಹರಿಸಿಕೊಂಡು ಹೋಗಿ ನಮ್ಮ ಮಹಾ ರಾಣಿಗೆ ಒಪ್ಪಿಸಿದೆವು. ಈಗ ಅವರು ಸಂತೋಷದಿಂದ ನಮ್ಮ ರಾಣಿ ಯೊಂದಿಗೆ ಸಮರಸರಾಗಿದ್ದಾರೆ. ಅಲ್ಲದೆ ರುಚೀದೇವಿಯ ಹರಣ ಕ್ಕಾದರೂ ವೀರರುದ್ರ ಗಜಪತಿಯವರ ಪ್ರಯಾಣದ ಚೀಟುಗಳೇ ಸಹಾಯಕವಾಗಿವೆ. ಅರ್ಥಾತ್, ಅವರೇ ರುಚೀದೇವಿಯನ್ನು ಕರೆಯಿಸಿಕೊಳ್ಳುತ್ತಿದ್ದಾರೆ!" ಮಾದರಸನೆಂದ.

"ಹಾಗಾದರೆ ಬಹಳ ವಿಚಿತ್ರ-ವಿಲಕ್ಷಣ ಗುಣರೂಪಿಣಿಯಾಗಿರ ಬೇಕು ನಿಮ್ಮ ಅಜ್ಞಾತಾದೇವಿ!"

"ಪ್ರತ್ಯಕ್ಷ ಆದಿಶಕ್ತಿಯೇ! ದುಷ್ಟರನ್ನು ಸುಷ್ಟರನ್ನಾಗಿ ಮಾಡುವ ಅದ್ಭುತ ಶಕ್ತಿ ನಮ್ಮ ರಾಣಿಯಲ್ಲಿದೆ. ಮಹಾಕಾಳೀ ಮಾತೆಯನ್ನು, ತನ್ನ ಮಗಳ ಬಾಯಿಯಿಂದ ಮಾತಾಡಿಸುವ ಶಕ್ತಿ ಅವಳಲ್ಲಿದೆ. ಆಹಾ! ನಮ್ಮ ರಾಣಿಯೇ ಧನ್ಯೆ! ಬಾಲರಾಣಿಯೇ ಧನ್ಯೆ! ನೀವು ಅವಳ ದರ್ಶನ ಮಾಡಿದಿರೆಂದರೆ, ನಿಶ್ಚಯವಾಗಿ ಅವಳಿಗೆ ಅಂಕಿತರಾಗುವಿರಿ!"

"ಇಂಥ ವಿಚಿತ್ರ ರಾಣಿಯ ದರ್ಶನ ಮಾಡಬೇಕಾದ್ದು ಅಗತ್ಯವೆ. ಅವಳಿಗೆ ಮಗಳೊಬ್ಬಳಿರುವಳೆಂದು ಹೇಳಿದಿರಲ್ಲ? ಅವಳ ಪತಿಯಾರು? ಅವಳು ನಿಮ್ಮ ರಾಣಿ ಹೇಗಾದಳು?" ಎಂದು ಸಂನ್ಯಾಸಿ ಕೇಳಿದನು.

"ಅದೆಲ್ಲಾ ನಮಗೆ ಗೊತ್ತಿಲ್ಲ. ನಾವು ನಮ್ಮ ಮಾತೃಸ್ವರೂಪಿಣೀ ರಾಣಿಯ ರಹಸ್ಯಗಳನ್ನು ಅರಿಯುವ ಪ್ರಯತ್ನವನ್ನು ಮಾಡುವುದಿಲ್ಲ. ಆದರೆ ಅವಳು ನಮ್ಮ ರಾಣಿಯಾದ ಬಗೆ ಹೇಗೆಂಬುದನ್ನು ಮಾತ್ರ ಹೇಳುವೆನು. ಆಹಾ ಅದನ್ನು ನೆನೆದರೆ ಈಗಲೂ ನನಗೆ ಪುಳಕಿತ ವಾಗುತ್ತದೆ. ಆರೇಳು ವರ್ಷಗಳ ಹಿಂದಿನ ಮಾತು. ಆಗ ಚೋರರಿ ಗೆಲ್ಲಾ ನಾನೇ ನಾಯಕ. ನಿಮ್ಮ ರಾಯನು ಆಗ ದಕ್ಷಿಣ ದೇಶದಲ್ಲಿ ದಿಗ್ವಿಜಯ ಮಾಡುತ್ತಿದ್ದನು. ಅಲ್ಲಿ ಆತನು, ಭಿಕ್ಷುಕರನ್ನೂ ಸಂನ್ಯಾಸಿ

ಗಳನ್ನೂ ಕಂಡಕಂಡಲ್ಲಿ ಹಿಡಿದುಕೊಂಡು ಬರುವಂತೆ ಆಜ್ಞೆಯನ್ನು ಹೊರಡಿಸಿದ್ದನು. ನಾನೂ ನನ್ನ ಸಂಗಾತಿಯೂ ಭಿಕ್ಷುಕರ ವೇಷದಲ್ಲಿ ಶ್ರೀರಂಗದ ದೇವಾಲಯದಲ್ಲಿದ್ದೆವು. ರಾಜಸೇವಕರು ನಮ್ಮನ್ನು ಬಂಧಿಸಿ ಕಾಡಲಾರಂಭಿಸಿದರು. ಆಗ ಒಬ್ಬ ಮುದುಕ ಬೈರಾಗಿ ಪುಟ್ಟ ಬಾಲಕನೊಂದಿಗೆ ಬಿರಬಿರನೆ ಅಲ್ಲಿಗೆ ಬಂದು, ಆ ರಾಜದೂತರ ಮೇಲೆ ಕೆರಳಿ, ಸುತ್ತೂ ಹೆದರಿಕೊಂಡು ನೋಡುತ್ತಿದ್ದ ಅನೇಕರನ್ನು ನೋಡಿ, 'ಎಲ್ಲರೂ ನೋಡುತ್ತಿರುವಿರಲ್ಲಾ ಸಾಧುಸಂತರಿಗಾಗುವ ಅತ್ಯಾಚಾರವನ್ನು! ನಿಮ್ಮ ಕೈಯಲ್ಲಿರುವ ದೊಣ್ಣೆಗಳನ್ನು ಸುಡಿರಿ! ಬಳೆ ತೊಡಿರಿ!' ಎಂದು ಮುಂತಾಗಿ ಕೆಣಕುಮಾತುಗಳಿಂದ ಆವೇಶವಾಗಿ ಹೇಳುತ್ತಾ ತನ್ನ ವಸ್ತ್ರದ ಮರೆಯಿಂದ ಕತ್ತಿಯನ್ನು ಸೆಳೆದು 'ಜೈ ಶ್ರೀರಂಗಾ' ಎಂದು ಕೂಗಿದನು. ಒಡನೆಯೇ ಜನರೆಲ್ಲಾ ಆವೇಶದಿಂದ ತುಂಬಿ, 'ಜೈ ಶ್ರೀರಂಗಾ' ಎಂದು ಪ್ರತಿಗರ್ಜನೆ ಮಾಡುತ್ತ ಆ ರಾಜದೂತರನ್ನು ಹಿಡಿಸಿಬಿಟ್ಟರು. ಸಂನ್ಯಾಸೀ ಮಹಾಶಯರೆ, ಆಗ ನಾವು ಬಹಳ ಕಟುಕರು! ಕ್ರೂರರು! ರಾಕ್ಷಸರು! ನಮ್ಮ ಕಾಳಿಕಾದೇವಿಗೆ ನರಬಲಿಯನ್ನು ಹುಡುಕಲಿಕ್ಕಾಗಿಯೇ ಅಲ್ಲಿಗೆ ಬಂದಿದ್ದೆವು. ಕಟುಕರಾಜನಾದ ನನಗೆ ಆ ರಾಜದೂತರ ಕೈಯಿಂದ ನಮ್ಮನ್ನು ಕಾಪಾಡಿದ ಆ ವೃದ್ಧ ಬೈರಾಗಿಯ ಮೇಲೆ ಕೃತಜ್ಞತೆಗೆ ಬದಲಾಗಿ ಕೃತಘ್ನತೆಯೇ ಹುಟ್ಟಿತು. ಅವನೊಂದಿಗಿದ್ದ ಸುಂದರ ಬಾಲಕನನ್ನು ನಮ್ಮ ದೇವಿಗೆ ಬಲಿ ಕೊಡಬೇಕೆಂದು, ಆ ಬೈರಾಗಿಯ ಹಿಂದೆಯೇ ಹೊಂಚುಹಾಕಿಕೊಂಡು ಹೋದೆವು.

"ಅವನು ಊರ ಹೊರಗೆ ಹಳುವು ಪ್ರಾಂತದಲ್ಲಿದ್ದೊಂದು ಅರಳೀ ಕಟ್ಟೆಯ ಮೇಲೆ ಆ ಬಾಲಕನೊಂದಿಗೆ ಆ ರಾತ್ರಿ ತಂಗಿರುವುದನ್ನು ನಾವು ದೂರದಿಂದಲೇ ನೋಡಿದೆವು. ಅವನ ಬಳಿಯಲ್ಲಿಯೇ ಒಂದು ಕುದುರೆಯೂ ನಿಂತಿತ್ತು. ನಾವು ಮಧ್ಯರಾತ್ರಿಯಲ್ಲಿ ಸದ್ದುಮಾಡದೆ ಆ ಕಟ್ಟೆಯ ಬಳಿಗೆ ಹೋದೆವು. ನಾನು ಗಾಢನಿದ್ದೆಯಲ್ಲಿದ್ದ ಆ ಬಾಲಕನನ್ನು ಎತ್ತಿಕೊಳ್ಳಲಿಕ್ಕಾಗಿ ಬಾಗಿದೆ. ಉತ್ತರಕ್ಷಣವೇ ಹಿಂದೆ ಮುಗುಚಿ ಅಂಗಾತ ಬಿದ್ದುಬಿಟ್ಟೆ. ಆ ಕುದುರೆ ಒಮ್ಮೆಲೇ ನನ್ನನ್ನು ಒದ್ದು

ಕೆಡವಿತ್ತು ! ನನ್ನ ಜತೆಯಲ್ಲಿದ್ದ ಮಾರಪ್ಪ ಹೆದರಿ ದೂರ ಹಾರಿ ನಿಂತ.

"ಮತ್ತೆ ನೋಡಿದಾಗ ವೃದ್ಧ ಬೈರಾಗಿಯೂ ಅಲ್ಲ! ಪುಟ್ಟ ಬಾಲಕನೂ ಅಲ್ಲ! ಮಹಿಷಾಸುರ ಮರ್ದಿನಿಯಂತೆ ಬಿಚ್ಚುಗತ್ತಿಯನ್ನು ಎತ್ತಿ ನಿಂತಿರುವ ದೇವಿಯ ಕ್ರೋಧಮೂರ್ತಿ! ಬಾಲಕನ ಬದಲಾಗಿ ಪುಟ್ಟ ಬಾಲಿಕೆ 'ಅಮ್ಮಾ' ಎನ್ನುತ್ತ ಎದ್ದು ನಿಂತಿದ್ದಾಳೆ! ಚಂದ್ರಕಿರಣದಲ್ಲಿ ಥಳಥಳಿಸಿದ ಆ ದೃಶ್ಯವು ನಮ್ಮನ್ನು ನಡುಗಿಸಿ ಬಿಟ್ಟಿತು. ನಾವು ಕೈ ಜೋಡಿಸಿಕೊಂಡು 'ಕ್ಷಮಿಸಮ್ಮಾ' ಎಂದು ಪ್ರಾರ್ಥಿಸಿಕೊಂಡೆವು.

"ಬಳಿಕ ನಮ್ಮ ವೃತ್ತಾಂತವನ್ನೆಲ್ಲಾ ಕೇಳಿ ಅವಳು ನಮಗೆ ದಿವ್ಯವಾದ ಜ್ಞಾನೋಪದೇಶ ಮಾಡಿದಳು, ಅವಳೇ ನಮಗೆ ನಾಯಕಿಯಾಗಿದ್ದು, ನಮ್ಮನ್ನು ತಕ್ಕ ದಾರಿಯಲ್ಲಿ ನಡೆಯಿಸಬೇಕೆಂದು ನಾವು ಬೇಡಿಕೊಂಡೆವು. 'ಮಹಾಕಾಳಿಯ ಆಜ್ಞೆಯಂತೆ ನಡೆಯುವೆ'ವೆಂಬ ನಮ್ಮಿಂದ ಭಾಷೆ ತೆಗೆದುಕೊಂಡು, ಅವಳು ಆ ಕಿರುಬಾಲೆಯೊಂದಿಗೆ ಕುದುರೆಯನ್ನೇರಿಕೊಂಡು ನಮ್ಮೊಂದಿಗೆ ಹೊರಟಳು.

"ಅನಂತರ ಆ ಪುಟ್ಟ ಬಾಲೆಯ ಮೇಲೆ ಕಾಳಿದೇವಿಯ ಆವಾಹನೆ ಮಾಡಿ ನಮಗೆಲ್ಲರಿಗೂ ಮಹಾಕಾಳಿಯ ಸಂದೇಶವನ್ನು ತಿಳಿಸಿದಳು. ಅದನ್ನು ನಮಗೆಲ್ಲಾ ಅರ್ಥವಾಗುವಂತೆ ವಿವರಿಸಿದಳು. ಆ ಬಾಲಿಕೆಯ ತಲೆಯಲ್ಲಿ ನಾವು ರಾಣಿಯ ಕಿರೀಟವನ್ನು ಸೂಡಿದೆವು. ನಮ್ಮ ಸರ್ವಸ್ವವನ್ನೂ ಆ ತಾಯಿಯ ಚರಣಾರವಿಂದಕ್ಕೆ ಸಮರ್ಪಣೆ ಮಾಡಿದೆವು. ಅವಳು ನಮ್ಮ ಗುಂಪಿಗಿದ್ದ 'ಚೋರವೃಂದ' ಎಂಬ ಹೆಸರನ್ನು ತೆಗೆದು ಹಾಕಿ, 'ಅಜ್ಞಾತ ಬಂಧು ವೃಂದ' ಎಂಬ ಹೆಸರನ್ನು ಕೊಟ್ಟಳು. ನಮ್ಮ ಮಧುಪಾನ ಮುಂತಾದ ದುಷ್ಟ ಅಭ್ಯಾಸಗಳನ್ನು ವರ್ಜ್ಯಪಡಿಸಿದಳು. ನರಬಲಿ-ಪ್ರಾಣಿಬಲಿ ಮುಂತಾದುವು ಆ ಲೋಕಜನನಿಗೆ ಅಪ್ರಿಯವೆಂಬ ರಹಸ್ಯವನ್ನು ನಮಗೆ ದೃಷ್ಟಾಂತ ಪಡಿಸಿದಳು. ದುಷ್ಟ ನಿರ್ಮೂಲನವೇ ಆ ಜಗನ್ಮಾತೆಗೆ ಪ್ರಿಯವಾದ ಬಲಿಯಾಗಿದೆ ಎಂದು ತಿಳಿಸಿದಳು. ದೇಶದ ಸ್ಥಿತಿಗಳನ್ನು ವಿವರಿಸಿದಳು. ಮುಖ್ಯವಾಗಿ ಈ ದುಷ್ಟವಾದ ರಾಜಸತ್ತೆಯನ್ನೇ ತೊಲಗಿಸಿ, ಪ್ರಜಾಪ್ರತಿನಿಧಿ ಪ್ರಭುತ್ವವನ್ನು ಸ್ಥಾಪಿಸುವುದೇ ಅವಳ ಉದ್ದೇಶವೆಂದೂ, ಅದಕ್ಕಾಗಿ

ನಾವೆಲ್ಲಾ ಅವಳ ಆಜ್ಞಾಧೀನರಾಗಿ ಇರಬೇಕೆಂದೂ ನಾವು ಪ್ರತಿಜ್ಞಾ ಪೂರ್ವಕವಾಗಿ ಒಪ್ಪಿಕೊಂಡೆವು. ಈ ದಿವ್ಯವಾದ ಹೆಗ್ಗುರಿಯನ್ನು ಮುಟ್ಟುವ ಉದ್ದೇಶದಿಂದ ನಾವೆಲ್ಲರೂ ಕಂಕಣಬದ್ಧರಾಗಿರುತ್ತೇವೆ. ಅವಳ ನಾಯಕತ್ವದಿಂದ ನಮ್ಮ ಕಾರ್ಯಕ್ಷೇತ್ರವೀಗ ಬಲು ವಿಸ್ತಾರ ವಾಗಿದೆ. ಗಜಪತಿ, ನರಪತಿಗಳನ್ನೆ ತಾಕುವಷ್ಟು ಶಕ್ತರಾಗಿದ್ದೇವೆ. ನಮ್ಮ ರಾಣಿಯನ್ನು ನೋಡಿದರೆ ನೀವೇ ಅವಳ ಮಹತ್ವವನ್ನು ತಿಳಿ ಯುವಿರಿ. ಆಮೇಲೆ ನಿಮಗೆ ಒಪ್ಪಿಗೆಯಾದರೆ ತಕ್ಕ ಪ್ರಮಾಣಮಾಡಿ. ನಮ್ಮ ಬಂಧುವೃಂದದಲ್ಲಿ ಸೇರಲೂಬಹುದು ; ಇಲ್ಲದಿದ್ದರೆ ನಿಮ್ಮಷ್ಟಕ್ಕೆ ನೀವು ಹೊರಟು ಹೋಗಲೂ ಬಹುದು." ಮಾದರಸ ಎಂದ.

ಇದನ್ನು ಕೇಳಿ ಸಂನ್ಯಾಸಿ, "ಆಹಾ ! ನಿಮ್ಮ ರಾಣಿಯ ಚರಿತ್ರೆ ಬಹಳ ಅತಿಶಯವೂ, ಅದ್ಭುತವೂ ಆಗಿದೆ. ಅಗತ್ಯವಾಗಿ ನಾವು ಅವಳನ್ನು ನೋಡಬೇಕಾದ್ದೇ. ಅಲ್ಲದೆ ನಮ್ಮನ್ನು ನಂಬಿರುವ ಈ ಗಜಪತಿ ನಂದಿನಿಯನ್ನು ಬಿಟ್ಟು ನಾವು ಎಲ್ಲಿಗೂ ಹೋಗುವಂತಿಲ್ಲ. ಈಗ ನೀವು ನಮ್ಮನ್ನು ಸಾಗಿಸಿಕೊಂಡು ಬಹುದೂರ ಹೋಗಬೇಕೇ ? ಹೇಗೆ ಹೋಗುವಿರಿ ?"

"ಅದಕ್ಕೆಲ್ಲಾ ಸನ್ನಾಹ ಮಾಡಿಕೊಂಡೇ ನಾವು ಬಂದಿದ್ದೇವೆ. ಈಗ ನಮ್ಮನ್ನು ನಿರೀಕ್ಷಿಸುತ್ತಾ ಇನ್ನೂರು ಮಂದಿ ಬಂಧುಗಳು ಅದೋ ಅಲ್ಲಿ ಕಾಣುವ ಬೆಟ್ಟದ ಬುಡದ ಅರಣ್ಯ ಪ್ರಾಂತದಲ್ಲಿ ಕಾದಿದ್ದಾರೆ. ಪಲ್ಲಕ್ಕಿಯೂ, ಕುದುರೆಗಳೂ ಎಲ್ಲವೂ ಅಲ್ಲಿವೆ. ಬೆಳಗಾಗು ವಷ್ಟರಲ್ಲಿ ನಾವೆಲ್ಲಾ ರಾಮೇಶ್ವರಕ್ಕೆ ಯಾತ್ರೆ ಹೊರಟ, ದೊಡ್ಡ ರಾಜ್ಯಾಂಗ ಪರಿವಾರದವರಾಗಿ ಮಾರ್ಪಡುತ್ತೇವೆ. ಈ ವಿಧಾನಕ್ಕೆ ನೀವು ನಮಗೆ ಅನುಕೂಲರಾಗಿ ನಡೆವರೆ ಒಳ್ಳೆಯದಾದೀತು. ಇಲ್ಲ ದಿದ್ದರೆ ನಮ್ಮ ಬಲಾತ್ಕಾರಕ್ಕೆ ಒಳಗಾಗಬೇಕಾದೀತು."

ಅವರು ಕುಳಿತ ದೋಣಿಗಳು ಮಹಾನದಿಯ ಮಧ್ಯವನ್ನು ಸೀಳಿ ಕೊಂಡು, ದಕ್ಷಿಣ ತೀರದಲ್ಲಿ ಹೊರಟಿದ್ದ ಒಂದು ಕಾಲುವೆಯೊಳಗೆ ಹೊಕ್ಕು ಹೋಗುತ್ತಲೇ ಇದ್ದುವು. ದೂರದಲ್ಲಿ ದಟ್ಟವಾದ ಕಾಡೂ, ಅದರಾಚೆಗೆ ಗುಡ್ಡ ಬೆಟ್ಟಗಳೂ ಮಸಮುಸಕಾಗಿ ಕಾಣುತ್ತಿದ್ದುವು.

೬

ಹೊತ್ತೇರುತ್ತಾ ಹೋದಂತೆ ಪ್ರತಾಪರುದ್ರನ ಅರಮನೆಯಲ್ಲಿ ಮನೋವೇದನೆಯ ಕಾವೂ ಏರಿಕೊಂಡೇ ಹೋಗುತ್ತಿತ್ತು. ಗಜ ರಾಣಿಯ ತಳ್ಳಂಕವನ್ನಂತೂ ಬಣ್ಣಿಸಲಳವಲ್ಲ. ಅವಳ ಆಶೀರ್ವಾದವನ್ನು ಪಡೆದುಕೊಂಡೇ ರುಚೀದೇವಿ ಗೌರಿಯೊಡನೆ ಹೊರಟು ಹೋಗಿದ್ದಳು. ಅವಳು ರಾಯನ ಶಿಬಿರಕ್ಕೆ ತಲುಪಿದ ಕೂಡಲೇ, ಆ ಸಮಾಚಾರವು ಗಜರಾಣಿಗೆ ತಿಳಿಯಪಡಿಸುವ ಏರ್ಪಾಡೂ ಆಗಿತ್ತು. ಅದಕ್ಕಾಗಿ ಅಂತ ರಂಗದ ದಾಸಿಯೊಬ್ಬಳು ಅಂತಃಪುರದ ಸುರಂಗದ್ವಾರದ ಬಳಿಯಲ್ಲಿ ಕಾದಿದ್ದಳು. ಎಷ್ಟು ಹೊತ್ತಾದರೂ, ರಾತ್ರಿ ಬೆಳಗೂ ಆಗಿ ಹೊತ್ತೇರುತ್ತಾ ಬಂದರೂ, ಮಗಳ ಕ್ಷೇಮ ಸಮಾಚಾರವೇ ಗೊತ್ತಾಗದೇ ಹೋದುದ ರಿಂದ ಗಜರಾಣಿ ಪರಮ ವೇದನೆಯನ್ನು ಅನುಭವಿಸಲಾರಂಭಿಸಿದಳು. ಪ್ರತಾಪರುದ್ರನಿಗೆ ತಿಳಿಯದಂತೆಯೇ ರಾಣಿಯೂ ಕುಮಾರಿಯೂ ಸೇರಿಕೊಂಡು, ಆ ಬಗೆಯ ಒಳಸಂಚು ನಡೆಸಿದ್ದರು. ಇದಕ್ಕೆಲ್ಲಾ ಮೂಲ ಕಾರಣನಾದವನು ಮುಕ್ತಾಶ್ರಮದ ಆ ಸಂನ್ಯಾಸಿ!

ಯುದ್ಧ ಪ್ರಾರಂಭವಾಗುವುದಕ್ಕೆ ಮುನ್ನವೇ, ಅಂದರೆ ಮೂರು ವರ್ಷಗಳಿಗಿಂತ ಮೊದಲು, ಆ ಸಂನ್ಯಾಸಿ ಶಿಷ್ಯರು ಕಟಕಪುರಿಯಲ್ಲಿ ನೆಲೆಸಲಾರಂಭಿಸಿದ್ದರು. ರಾಣಿಯೂ, ರುಚೀಕುಮಾರಿಯೂ ಮೊದಲ ಬಾರಿ ಅವನ ದರ್ಶನ ಮಾಡಿದಾಗ ರಾಣಿ ತನ್ನ ಹೆಂಗರುಳಿನ ಸ್ವಭಾವ

ಕ್ಕನುಸರಿಸಿ–“ಸ್ವಾಮಿ, ನನ್ನ ಕುಮಾರಿ ಈ ಜಗನ್ಮೋಹಿನಿಗೆ ಯಾವಾಗ ವಿವಾಹವಾಗುವುದು? ಯಾವನು ವರನಾದಾನು? ಇವಳ ದಿವ್ಯಸುಂದರ ರೂಪಕ್ಕೆ ಅನುರೂಪನಾದ ವರನು ಎಲ್ಲಿ ಸಿಕ್ಕುವನೋ?” ಎಂದು ಕೇಳಿಕೊಂಡಳು.

ಅದಕ್ಕೆ ಆ ವಿಗಡ ಸಂನ್ಯಾಸಿ ದಿವ್ಯದೃಷ್ಟಿಯಿಂದ ನೋಡಿ, “ಚಂದ್ರವಂಶದ ಕ್ಷತ್ರಿಯ ಕುಲತಿಲಕನೊಬ್ಬನು ನಿಮ್ಮ ಅಳಿಯನಾಗುವನು. ಅವನ ದಿವ್ಯ ಸ್ವರೂಪವು ಬೇಗನೇ ನಿಮಗೆ ಗೋಚರವಾದೀತು” ಎಂದು ಸಮಜಾಯಿಸಿದನು.

ಮತ್ತೊಂದು ದಿನ ರಾಣಿ, ಕುಮಾರಿಯರು ಅವನ ದರ್ಶನಕ್ಕೆ ಹೋದಾಗ, ಮುಂಜಾನೆ ಕುಳುಕುಳಿಸುವ ಚಳಿಯಲ್ಲಿ, ಆ ಸಂನ್ಯಾಸಿ ನದೀತಟದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದನು. ಇದ್ದಕ್ಕಿದ್ದ ಹಾಗೆ ಅವನು ಫಕ್ಕನೆ ನದಿಯೊಳಗೆ ಕೈ ಹಾಕಿ ಒಂದು ಕನ್ನಡಿಯನ್ನು ಮೇಲೆತ್ತಿದನು. ಅದರಲ್ಲಿ ಯಾವನೋ ಒಬ್ಬ ಸುಂದರ ಪುರುಷನ ಭಾವಚಿತ್ರವಿತ್ತು. ಅದನ್ನು ಆ ಸಂನ್ಯಾಸಿ ರುಚೀದೇವಿಗೆ ಕೊಡುತ್ತ–“ಮಗು, ಕಟಕ ಸಂರಕ್ಷಿಣಿಯಾದ, ಈ ನದೀದತ್ತ ಚಿತ್ರದಲ್ಲಿ ಶೋಭಿಸುವ ಈ ಪುರುಷ ಸಿಂಹನೇ ನಿನಗೆ ಪತಿಯಾಗುವನೆಂದು ನಂಬು” ಎಂದು ಹೇಳಿದನು. ರಾಜ ತೇಜದಿಂದೊಪ್ಪುವ ಆ ಭಾವಚಿತ್ರವು ರುಚೀದೇವಿಯ ಹೃದಯದಲ್ಲಿ ಪರಮಾನಂದವನ್ನು ತುಂಬಿತು. “ಇದು ಯಾರ ಭಾವಚಿತ್ರ” ಎಂದು ರಾಣಿ ವಿಚಾರಿಸಿದುದಕ್ಕೆ–“ಅದನ್ನು ಇನ್ನು ಕೆಲವು ದಿನಗಳ ನಂತರ ಕಂಡು ಹಿಡಿದು ಹೇಳುವೆನು. ಈಗ ಈ ಭಾವಚಿತ್ರವನ್ನು ಬೇರೆ ಯಾರಿಗೂ ತೋರಿಸದೆ, ಹೃದಯಮಂದಿರದೊಳಗೇ ರಹಸ್ಯವಾಗಿಟ್ಟಿರಬೇಕು. ಕಲ್ಯಾಣಯೋಗಕ್ಕೆ ಇನ್ನೂ ಸ್ವಲ್ಪ ಕಾಲವಿದೆ. ಆಗ ಇವನೇ ರುಚೀದೇವಿಯ ಪಾಣಿಗ್ರಹಣ ಮಾಡುವುದು ನಿಶ್ಚಯ” ಎಂದನು ಸಂನ್ಯಾಸಿ.

ಅವನ ಮೇಲೆ ಅತ್ಯಂತ ವಿಶ್ವಾಸವಿಟ್ಟಿರುವ ರುಚೀದೇವಿ, ಆ ಭಾವಚಿತ್ರವನ್ನು ನಿಜವಾಗಿಯೂ ತನ್ನ ಹೃದಯಮಂದಿರದೊಳಗೆ ಸ್ಥಾಪಿಸಿಕೊಂಡಳು. ಆ ಚಿತ್ರಗತ ಪುರುಷನಿಗೆ ಅವಳು ಮನಸೋತಿರುವ

ಳೆಂದು, ಗೌರಿ ಎಂಬ ಅವಳ ಅಂತರಂಗದ ಸಖಿಯ ಮೂಲಕವಾಗಿ ಸಂನ್ಯಾಸಿಗೆ ತಿಳಿಯಿತು.

ಆಮೇಲಷ್ಟೇ ಕೃಷ್ಣದೇವರಾಯನು ಪ್ರತಾಪರುದ್ರರೊಡನೆ ಕಲ್ಯಾಣ ಸಂಧಾನವನ್ನೆಸಗಿದನು. ಅದು ನಿಷ್ಫಲವಾಗಿ ವಿಜಯ ನಗರದ ದಂಡು ಗಜರಾಜ್ಯಗಳ ಮೇಲೆ ಜೈತ್ರಯಾತ್ರೆ ಹೊರಟಿತು. ಪ್ರತಾಪ ರುದ್ರನು ರುಚೀಕುಮಾರಿಗೆ ಬೇಗನೇ ವಿವಾಹ ಮಾಡಿಬಿಡ ಬೇಕೆಂದು ತವಕಪಟ್ಟನು. ಮಗಳ ಮನೋಭಾವವನ್ನರಿತ ರಾಣಿ ಪ್ರಕೃತ ಮಗಳು ವಿವಾಹಕ್ಕೆ ಒಪ್ಪುವುದಿಲ್ಲವೆಂದೂ, ಯುದ್ಧವು ನಿಂತು ಶಾಂತಿ ನೆಲೆಸುವವರೆಗೆ ಮದುವೆ ಬೇಡವೆಂದು ಮಗಳು ಹಟಮಾಡುವ ಳೆಂದೂ ಹೇಳಿ ತಡೆಗಟ್ಟಿದ್ದಳು.

ಅತ್ತ ಸಂನ್ಯಾಸಿಯೂ ಗಜರಾಜನನ್ನು ಕುರಿತು "ದುಡುಕದಿರು ಗಜಪತಿ, ನಿನ್ನ ಕುಮಾರಿ ಒಬ್ಬಾನೊಬ್ಬ ಪುರುಷಸಿಂಹನ ರಾಣಿ ಯಾಗಲಿದ್ದಾಳೆ. ಸಂಕೇತ ಸಮಯಕ್ಕೆ ಅವನು ಕೂಡಿ ಬರುತ್ತಾನೆ. ಆಗ ಖಂಡಿತವಾಗಿ ಕಲ್ಯಾಣವಾಗುತ್ತದೆ. ಅದಕ್ಕೆ ಮೊದಲು ಏನು ತಲೆಕೆಳಗೆ ಮಾಡಿದರೂ ಯೋಗವು ಕೂಡದು. ಶತ್ರುವಿನ ವಿಜಯ ವನ್ನು ನೋಡಿ ನೀವು ಕಂಗೆಟ್ಟು ಹೋಗಬೇಡಿ. ಕಡೆತನಕ ಬಂದು ಒಮ್ಮೆಲೇ ಶತ್ರುವಿನ ಅಧಃಪಾತವಾಗುವುದು" ಎಂದು ಹೇಳುತ್ತಿದ್ದನು.

ತರುವಾಯ ಕೆಲವು ತಿಂಗಳ ನಂತರ, ಅಂದರೆ ರುಚೀದೇವಿಯ ಪ್ರೇಮವು ಅಚಲವಾಗಿ, ಶುದ್ಧವಾಗಿ, ಬದ್ಧವಾಗಿ ಆ ಚಿತ್ರಗತ ಪುರುಷ ನಲ್ಲಿ ಬೇರೂರಿತೆಂದು ತಿಳಿದಮೇಲೆ, ಅವಳ ಅಂತಃಕರಣಗಳು, ಆ ಕನಸಿನ ಪುರುಷನ ಕಡೆಗೆ ಹರಿದೋಡುತ್ತಿರುವುದೆಂದು ಖಂಡಿತ ಗೊತ್ತಾದ ಮೇಲೆ, ಸಂನ್ಯಾಸಿ ರುಚೀದೇವಿಗೆ ಮಾತ್ರ ಅವನ ಹೆಸರನ್ನು ತಿಳಿಸಿದನು. .ಅದೂ ಅವಳು ತಿಳಿಯುವ ಉತ್ಕಟೇಚ್ಛೆ ಯನ್ನು ತಿಳಿಸಿದಾಗ.

"ಮಗೂ, ರುಚೀ, ಅದನ್ನು ಹೇಳಲೇಬೇಕಾದ ಪ್ರಸಂಗವು ಬಂದುದರಿಂದಲೇ ಹೇಳುತ್ತೇನೆ. ವಿಧಿಯೋಗವನ್ನು ತಪ್ಪಿಸಲು ಸಾಧ್ಯವೆ? ನದೀದತ್ತವಾದ ಆ ಭಾವಚಿತ್ರವು ನಿನ್ನ ತಂದೆಯ ಶುದ್ಧ

ವೈರಿಯಾದ ರಾಜಸಿಂಹ ಕೃಷ್ಣದೇವರಾಯನದು. ಆಹಾ! ನಿನ್ನ ತಂದೆ ವ್ಯರ್ಥವಾದ ದುರಭಿಮಾನದಿಂದ ಆ ರಾಜತೇಜಸ್ಸಿನೊಡನೆ ಯುದ್ಧ ಮಾಡುತ್ತಿದ್ದಾನೆ. ಇದರಿಂದ ಏನೇನೂ ಪ್ರಯೋಜನವಾಗದು. ದಕ್ಷಿಣಾವರ್ತದ ಮಧ್ಯಂದಿನ ಮಾರ್ತಾಂಡನಾದ ಕೃಷ್ಣದೇವರಾಯನು ಹೇಗೆ ವಿಜಯಶಾಲಿಯಾಗಿ ಏರಿಬರುತ್ತಿದ್ದಾನೆ ನೋಡಿದೆಯಾ? ಕಡೆಗೂ ನಿನ್ನ ಮೂಲಕವಾಗಿ ಗಜಪತಿ-ನರಪತಿಗಳ ಸಾಮರಸ್ಯವು ಖಂಡಿತ."

ಇದನ್ನು ಕೇಳಿ ರುಚೀದೇವಿಗೆ ಆಶ್ಚರ್ಯವೂ, ಖೇದವೂ ಉಂಟಾಯಿತು. ಆದರೆ ಕಡೆಗೆ ದೃಢತೆಯಲ್ಲಿಯೇ ಕೊನೆಗಂಡಿತು. ಅವಳಿಗೆ ಕೃಷ್ಣದೇವರಾಯನ ಮೇಲೆ ಒಂದು ತರದ ಗೌರವಬುದ್ಧಿ ಈ ಮೊದಲೇ ಹುಟ್ಟಿತ್ತು ನಿಜ. ಗೆದ್ದ ರಾಜ್ಯಗಳಲ್ಲೆಲ್ಲಾ ಪ್ರಜಾ ರಂಜಕವಾದ ಅವನ ಶ್ಲಾಘನೀಯ ಗುಣಗಳು ಆಗಾಗ ಅವಳ ಕಿವಿಗೆ ಬೀಳುತ್ತಲೇ ಇದ್ದುವು. ಅನಂತರ ಅವನೇ ತನ್ನ ಪತಿಯಾಗುವನೆಂದು ಮಹಾತ್ಮರ ವಚನವೂ ಆದುದರಿಂದ, ಅವಳ ಪ್ರೇಮವೆಲ್ಲವೂ ಕೃಷ್ಣ ದೇವರಾಯನ ಅವ್ಯಕ್ತಮೂರ್ತಿಯ ಮೇಲೇ ಚೆಲ್ಲಿಹೋಯಿತು. ಹೇಗಿದ್ದರೂ ಅವನೇ ತನ್ನ ಪತಿಯಾಗಲಿಕ್ಕಿರಲು, ತಂದೆ ವ್ಯರ್ಥವಾಗಿ ಯುದ್ಧಮಾಡಿ ವೀರನಷ್ಟ ಮಾಡುವುದೇಕೋ ಎನಿಸಿತು ಅವಳಿಗೆ.

ರುಚೀದೇವಿ ಈ ರಹಸ್ಯವನ್ನು ಸಮಯವರಿತು ತನ್ನ ತಾಯಿಗೂ ತಿಳಿಸಿ, ಅವಳ ಮನಸ್ಸನ್ನು ತನಗೆ ಅನುಕೂಲಪಡಿಸಿಕೊಂಡಳು. ಇನ್ನು ಉಳಿದುದು ಪ್ರತಾಪರುದ್ರನ ಕಠಿನ ಮನಸ್ಸನ್ನು ತಿರುಗಿಸುವುದೊಂದು ಮಾತ್ರ. ರಾಣಿ ಏಕಾಂತದಲ್ಲಿ ಪತಿಯ ಮನಸ್ಸನ್ನು ಕದಲಿಸುತ್ತ, "ನಾಥಾ, ಪ್ರಜಾಕ್ಷೋಭಕರವೂ, ಮಹಾನಾಶಕಾರಿಯೂ ಆದ ಈ ಯುದ್ಧವು ಬೇಡ. ಕೃಷ್ಣದೇವರಾಯನ ಸುಗುಣಗಳನ್ನೂ, ಕೀರ್ತಿ ಯನ್ನೂ ಎಷ್ಟೋ ಜನರು ಹೊಗಳುತ್ತಿದ್ದಾರಲ್ಲವೆ? ಅವನನ್ನೇ ನಮ್ಮ ಅಳಿಯನನ್ನಾಗಿ ಮಾಡಿಕೊಳ್ಳಬಾರದೇಕೆ? ಕುಮಾರಿಯೂ ಇದೇ ಅಭಿಪ್ರಾಯವನ್ನು ತಾಳುತ್ತಾಳೆ...." ಎಂದು ಅನೇಕ ವಿಧವಾಗಿ ಹೇಳಿ ನೋಡಿದಳು. ಆದರೆ ಸಂನ್ಯಾಸಿಯ ಮತ್ತು ಭಾವಚಿತ್ರದ

ರಹಸ್ಯವನ್ನು ಮಾತ್ರ ಹೇಳಲಿಲ್ಲ. ಪ್ರತಾಪರುದ್ರನು ಅವಳ ಮಾತಿಗೆ ಒಂದಿಷ್ಟೂ ಒಪ್ಪದೆ, ಸಿಟ್ಟು ಬೆಂಕಿಯಾದನು. ಅಲ್ಲದೆ ಬೇಗನೆ ರುಚೀ ಕಲ್ಯಾಣವನ್ನು ಮುಗಿಸಿಬಿಡಬೇಕೆಂದೂ ಪಂಥ ಕಟ್ಟಿ, ಉತ್ತರಾಪಥದ ರಜಪೂತವರರನ್ನು ಅನ್ವೇಷಿಸಲಿಕ್ಕಾಗಿ ತಕ್ಕ ಸಮರ್ಥರನ್ನು ಕಳುಹಿಸಿದನು. ಅಂತೂ ಪ್ರತಾಪರುದ್ರನನ್ನು ಒಪ್ಪಿಸುವ ಆಶೆ ನಿರಾಶೆಯಾಗಿ ಹೋಗಿತ್ತು.

ಈ ಸಂದರ್ಭದಲ್ಲಿ ಹಿಂದೆ ಹೇಳಿದಂತೆ ರಾಮಯಾಮಾತ್ಯನು, ಯವನರ ಸಹಾಯವನ್ನು ಪಡೆದುಕೊಂಡು ಬರುವೆನೆಂಬ ಭರವಸೆ ಹೇಳಿ ಅತ್ತ ತೆರಳಿದನು. ಇತ್ತ ಕೃಷ್ಣದೇವರಾಯನು ವಿಜಯ ದುಂದುಭಿಯನ್ನು ಮೊಳಗಿಸುತ್ತ ಕಟಕನಗರಿಯ ಪಕ್ಕದಲ್ಲೇ ಬಂದು ಗರ್ಜನೆ ಮಾಡುತ್ತಿದ್ದನು. ಇದು ರಾಣಿ, ಕುಮಾರಿಯರನ್ನು ಬಲು ಚಿಂತೆಯಲ್ಲಿ ಕೆಡವಿತು. ಕಟಕನಗರಿ ಘನಭದ್ರವಾದ ರಾಜಧಾನಿ. ಕೃಷ್ಣರಾಯನು ಅದನ್ನು ಭೇದಿಸಿ ಒಳಗೆ ಬರುವುದೇ ದುಸ್ತರ. ಹಾಗೊಂದು ವೇಳೆ ಬಂದರೂ ಬಹಳ ಕಾಲ ಹೋದೀತು. ಅಷ್ಟರೊಳಗೆ ಅತ್ತಣಿಂದ ರಾಮಯಾಮಾತ್ಯನು ಮುಸಲ್ಮಾನರ ಪಡೆಯೊಂದಿಗೆ ಬಂದುಬಿಟ್ಟರೆ ಪರಿಣಾಮ ಹೇಗಾದೀತೋ? ವಿಜಯನುತ್ತ ಯವನ ಸೈನ್ಯವು ಏನೇನು ಹಾವಳಿ ಮಾಡೀತೋ! ಇದರೆಡೆಯಲ್ಲಿ ರುಚೀ ಕುಮಾರಿಯ ಇಚ್ಛೆಗೆ ವಿರೋಧವಾಗಿ ಅವಳಿಗೆ ಬಲವಂತದ ಒಣ ಮದುವೆಯಾದರೆ ಅವಳ ಬಾಳುವೆಯ ಗತಿ ಏನಾದೀತು? ಈ ಬಿಕ್ಕಟ್ಟಿನ ಸಮಯದಲ್ಲಲ್ಲವೇ ಧೈರ್ಯವೂ ಸಾಹಸವೂ ಬೇಕಾದ್ದು? ರುಚೀದೇವಿ ದೃಢನಿಶ್ಚಿತಳಾದಳು. ಸಂನ್ಯಾಸಿಯ ಬೋಧನೆಯೂ ಅದಕ್ಕೆ ಪೋಷಕವಾಗಿಯೇ ನಡೆದಿತ್ತು.

ಈ ಸಂದಿಗ್ಧ ಪರಿಸ್ಥಿತಿಯಲ್ಲಿ ರುಚೀದೇವಿ ತಾನಾಗಿ ತನ್ನ ಪ್ರಿಯನ ಬಳಿಗೆ ಹೋಗುವುದರಿಂದ, ಅವಳ ದೆಸೆಯಿಂದಾಗುವ ಯುದ್ಧವು ಕೂಡಲೇ ನಿಂತುಹೋದೀತು. ರಾಯನ ಸೆರೆಯಲ್ಲಿರುವ ಅವಳ ಅಣ್ಣ ವೀರಭದ್ರ ಮತ್ತು ಅವಳ ಅತ್ತೆ, ಅತ್ತೆಯ ಮಗಳು ಮುಕ್ತಾ ಇವರೆಲ್ಲರಿಗೂ ಕ್ಷೇಮವಾಗುತ್ತದೆ. ರಾಜ್ಯಗಳಿಗೂ ಕ್ಷೇಮವೇ.

ಅನಂತರ ಪ್ರತಾಪರುದ್ರನು ಹಲ್ಲು ಮುರಿದ ಹಾವಿನಂತಾಗಿ ಬೇರೆ ನಿವೃತ್ತಿಯಿಲ್ಲದೆ ಕುಮಾರಿಯನ್ನು ರಾಯನಿಗೇ ಸಮರ್ಪಿಸಿಯಾನು. ನಡುವೆ ಕೋಪತಾಪಗಳು ಎಷ್ಟೇ ಎದ್ದರೂ ಪರಿಣಾಮವು ಮಂಗಳವೇ.

ರಾಣಿಯೂ ಕುಮಾರಿಯೂ ಒಂದಾಗಿ ಹೀಗೆ ಹೋಚಿಸಿ ನಿಶ್ಚಯಿಸಿಕೊಂಡು, ಸಂನ್ಯಾಸಿ, ಶಿಷ್ಯರ ಮುಖಾಂತರವಾಗಿ, ರಾಯನ ಶಿಬಿರದೆಡೆಗೆ ರಹಸ್ಯ ಸಂಧಾನ ನಡೆಯಿಸಿದರು. ಮಂತ್ರಿ ತಿಮ್ಮರಸನು ಅದಕ್ಕೆ ತಕ್ಕ ಅನುಮೋದನೆಯನ್ನಿತ್ತು, ತಕ್ಕ ಏರ್ಪಾಡನ್ನು ಮಾಡಿದನು. ಆ ಏರ್ಪಾಡಿನಂತೆಯೇ ಅಂತಃಪುರದಿಂದ ರಹಸ್ಯವಾಗಿ ಹೊರಟುಹೋದ ರುಚೀ-ಗೌರಿಯರು ಸುರಕ್ಷಿತವಾಗಿ ರಾಯನ ಶಿಬಿರಕ್ಕೆ ತಲುಪಿದರೆಂಬ ವಾರ್ತೆಯೇ ಬಾರದುದರಿಂದ, ಈಗ ಗಜಪತಿ ರಾಣಿ ಕಂಗಾಲಾಗಿ ಚಡಪಡಿಸುತ್ತಿದ್ದಳು.

ಹೊತ್ತೇರಿದಂತೆ ಗಜರಾಣಿಯ ಎದೆಗುದಿಯೂ ಏರುತ್ತಾ ಹೋಯಿತು. ಹೆತ್ತ ಕರುಳು ಕೆಟ್ಟ ಕೆಟ್ಟ ಸಂದೇಹಗಳಿಂದ ನೋಯ ತೊಡಗಿತು. ಇನ್ನು ತಾಳಲಾರದೆ ಹೋದಳು. ಸತ್ಯವನ್ನು ಬಚ್ಚಿಟ್ಟು ಕೊಳ್ಳಲಾರದೆ ಹೋದಳು. ಪತಿಯನ್ನು ವಂಚಿಸಿದ ತನ್ನನ್ನು ಪತಿ ಹೇಗಾದರೂ ದಂಡಿಸಲಿ ಎಂದು ನಿಶ್ಚಯಿಸಿಕೊಂಡು, ದುಃಖದಿಂದ ಹಣೆಯಮೇಲೆ ಕೈಯಿಟ್ಟುಕೊಂಡು ಕುಳಿತ ಪ್ರತಾಪರುದ್ರನ ಪಾದದಲ್ಲಿ ಬಿದ್ದು, ನಡೆದ ಯಾವತ್ತೂ ಸಂಗತಿಗಳನ್ನು ಬಳಬಳನೆ ಅಳುತ್ತಾ ಬಿಕ್ಕರಿಸಿಬಿಟ್ಟಳು. "ಅಯ್ಯೋ! ಮಗಳು ಎಲ್ಲಿಗೆ ಹೋದಳೋ! ಏನಾದಳೋ!" ಎಂದು ಮಲಮಲನೆ ಮರುಗುತ್ತಾ ಕಣ್ಣೀರು ಸುರಿಸಿದಳು.

ಇದನ್ನು ಕೇಳಿದ ಪ್ರತಾಪರುದ್ರನು ಸಿಡಿಲು ಬಡಿದವನಂತೆ "ಹಾ!" ಎಂದೊರಲಿದನು. ಸ್ತಂಭಿಸಿದನು. ಮೂರ್ಛಿತನಾದನು, ಸಂತಪ್ತತೆಯಿಂದ ಹುಚ್ಚನಾದನು. ಬಾಯಿಗೆ ಬಂದ ಹಾಗೆ ಬೈದನು. "ನನ್ನ ಮಗಳು! ಕುಮಾರಿ! ಹಾಳಾಗಲಿ! ಇಂತಹ ಸ್ವೇಚ್ಛಾಚಾರಿಣಿ ಮಗಳು ಇದ್ದರೇನು? ಸತ್ತರೇನು? ನನ್ನ ಹೆಂಡತಿ! ರಾಣಿ! ನೀನು! ನಿನ್ನನ್ನೇನು ಮಾಡಲಿ? ಕೊಚ್ಚಲೆ? ಕೊಲ್ಲಲೆ?" ಎಂದು

ತುಂಬಾ ಆರ್ಭಟಿಸಿದನು. ರಾಣಿಯನ್ನು ಒದ್ದು ಧಿಕ್ಕರಿಸಿದನು. ಹಣೆ ಜಜ್ಜಿಕೊಂಡನು. ಕೈ ಕೈ ಹಿಸುಕಿಕೊಂಡನು. ನೆಲವನ್ನು ಅಪ್ಪಳಿಸಿದನು. ಆಹಾ! ಮಗಳಿಗೆ ಶತ್ರುವಿನ ಮೇಲೆಯೇ ಮೋಹ ಉಂಟಾಗಬೇಕೆ? ಇದಿಷ್ಟೂ ಆ ಸಂನ್ಯಾಸಿಯಿಂದಾಯಿತು. ಆ ಸಂನ್ಯಾಸಿ ಎಷ್ಟು ನಂಬಿಸಿದ!

ಆದರೆ ಕುಮಾರಿ ಈಗೆಲ್ಲಿ? ರಾಯನ ಶಿಬಿರಕ್ಕೂ ಮುಟ್ಟದಿದ್ದರೆ ಮತ್ತೆಲ್ಲಿ? ಅಯ್ಯೋ! ಇದು ಗಜರಾಜ ವಂಶಕ್ಕೇ ಎಂತಹ ಅಪಮಾನ! ಹೋದ ಮಗಳು ಹೋಗಲೆಂದು ಸುಮ್ಮನಿದ್ದರೆ ಜಗತ್ತು ಏನೆಂದೀತು? ಅವಳ ಇರುವಿಕೆಯನ್ನು ಕಂಡುಹಿಡಿಯದೆ, ಏನಾದರೊಂದು ಇತ್ಯರ್ಥ ಮಾಡಿ ಮುಗಿಸದೆ ಈ ಕನ್ಯಾಪಿತೃತ್ವದ ಭಾರವು ನೀಗುವುದೆ? ಲೋಕ ನಿಂದೆ ತಪ್ಪುವುದೆ? ಎಲ್ಲಿ ಅರಸಬೇಕು? ಶತ್ರು ಶಿಬಿರದಲ್ಲಿ ಅವಳು ಇಲ್ಲನೆಂದಾದರೆ ಗಜರಾಜರ ಮಾನವು ಶತ್ರುವಿನ ಮುಂದೆ ಸೂರೆ ಹೋದಂತಾಯಿತು. ಆಹಾ! ಉಭಯ ಸಂಕಟದಲ್ಲಿ ಸಿಕ್ಕಿಬಿದ್ದಿದ್ದಾನೆ ಪ್ರತಾಪರುದ್ರ ಗಜಪತಿ.

## ೭

ಮಹಾನದಿಯ ದಕ್ಷಿಣ ತೀರದಲ್ಲಿ ಸುಮಾರು ಮೂರು ಹರದಾರಿಯಷ್ಟು ದಾರಿಯನ್ನಾವರಿಸಿಕೊಂಡು, ರಾಯನ ದಂಡು ಬೀಡುಬಿಟ್ಟಿತ್ತು. ಫೇನತರಂಗಗಳಿಂದ ವಿಜೃಂಭಿಸುವ ಸಮುದ್ರದೋಪಾದಿಯಲ್ಲಿ ಆ ಘನ ಪ್ರಚಂಡ ದಂಡಿನ ನಿಲಯವು ಆಶ್ಚರ್ಯಕರವಾಗಿ ಕಣ್ಣಿಗೆಸೆಯುತ್ತಿತ್ತು. ಸುತ್ತು ಮುತ್ತು ಸಾವಿರಾರು ಗೂಡಾರಗಳು. ನಡುನಡುವೆ ದೊಡ್ಡ ದೊಡ್ಡ ಸೇನಾಧಿಪತಿಗಳ ಗೂಡಾರಗಳು. ಅವುಗಳ ಬಳಿಯಲ್ಲಿಯೂ ಅಲ್ಲಲ್ಲಿಯೂ ಏಕಗುಂಪಾಗಿಯೂ, ಹರಡಿದ ಇರುವೆಗಳಂತೆ ಚೆಲ್ಲಾ ಚೆದರಾಗಿಯೂ, ಸಾಲು ಸಾಲಾಗಿಯೂ ಅನೇಕ ಪಟಾಲಮುಗಳು ಕಾಣುತ್ತಿದ್ದುವು. ಕಾಳಗುಡ್ಡದ ಸಾಲುಗಳಂತೆ ಕಾಳೆಗದಾನೆಗಳ ಸಾಲು ಅದ್ಭುತವಾಗಿತ್ತು. ಸಾವಿರಾರು ಕುದುರೆಗಳು, ನಡು ನಡುವೇ ಕತ್ತಿ ಈಟಿಗಳ ಝಳತ್ಕಾರಗಳು. ಒಂಟೆಗಳೆಷ್ಟೋ, ಎತ್ತುಗಳೆಷ್ಟೋ, ಬಂಡಿಗಳೆಷ್ಟೋ! ಆ ಎಲ್ಲಾ ಜೀವರಾಶಿಗಳ ನಾನಾ ಶಬ್ದಗಳು "ಆಗೋಯ್" ಎಂದು ಸಾಗರಾರವದಂತೆ ಏಕನಾದವಾಗಿ ಕೇಳಿಸುತ್ತಿತ್ತು. ದೊಡ್ಡ ದೊಡ್ಡ ಅರಸು ಡೇರೆಗಳ ತುದಿಯಲ್ಲಿ ವರಾಹಲಾಂಛನದ ಪತಾಕೆಗಳು ತಟಪಟನೆ ಕುಣಿಯುತ್ತಿದ್ದುವು. ಅವೆಲ್ಲವುಗಳ ನಟ್ಟನಡುವೆ ಬ್ರಹ್ಮಾಂಡದಂತದ ಪೀತಮಯ ಪಟಲಸೌಧದ ತುದಿಯಲ್ಲಿರುವ ವರಾಹಧ್ವಜವು ಆಗಸದ ಕೊನೆಯನ್ನು

ಎಟಕಿಸುವ ತವಕದಿಂದ ನಿಂತಿತ್ತು. ಅದುವೇ ಕೃಷ್ಣ ಸಾರ್ವಭೌಮನ ಡೇರೆಯುರಮನೆ. ಅದರೊತ್ತಿನ ದೊಡ್ಡ ಗೂಡಾರವು ಮಹಾ ಮಂತ್ರಿ ತಿಮ್ಮರಸನದು.

ಪ್ರತಾಪರುದ್ರ ಗಜರಾಜನ ದೂತನೊಬ್ಬನು, ತಿಮ್ಮರಸನ ಗೂಡಾರಕ್ಕೆ ಕರೆದೊಯ್ಯಲ್ಪಟ್ಟನು. ಅವನು ತಿಮ್ಮರಸನಿಗೆ ಸಮರ್ಪಿಸಿದ ಪತ್ರದಲ್ಲಿ ಈ ರೀತಿಯ ಒಕ್ಕಣೆಗಳಿದ್ದವು :

" ಶ್ರೀಮದ್ವಿದ್ಯಾನಗರದ ಸಾಮ್ರಾಟ ಕೃಷ್ಣದೇವರಾಯರ ಸಮ್ಮುಖಕ್ಕೆ, ಕಳಿಂಗಾಧೀಶ ಪ್ರತಾಪರುದ್ರ ಗಜಪತಿ ತಿಳಿಯಪಡಿಸುವುದೇನೆಂದರೆ, ನೀವು ರಾಜ್ಯವನ್ನು ವಿಸ್ತರಿಸಬೇಕೆಂಬ ದುರಾಶೆಯಿಂದಲೂ, ನಮ್ಮ ಕುಮಾರಿಯನ್ನು ವರಿಸಬೇಕೆಂಬ ನಿಮ್ಮ ಅಂತಸ್ತಿಗೆ ಮೀರಿದ ಕೋರಿಕೆಯಿಂದಲೂ ಯುದ್ಧವನ್ನು ಪ್ರಾರಂಭಿಸಿ ಇದ್ದೀರಿ. ಕಳ್ಳತನದಿಂದಲೂ, ಮೋಸದಿಂದಲೂ ನಮ್ಮ ಅನೇಕ ದುರ್ಗಗಳನ್ನು ನೀವು ಸ್ವಾಧೀನಪಡಿಸಿಕೊಂಡುದನ್ನು ನೋಡಿದರೆ, ಕ್ಷತ್ರಿಯೋಚಿತ ಸರಳ ಸಮರ ವಿಧಾನವು ನಿಮಗೆ ತಿಳಿಯದೆಂದು ವ್ಯಕ್ತವಾಗುತ್ತದೆ. ನೀವು ರಾಜರೆಂಬ ಹೆಸರಿಂದ ಚೋರರ ಗುಂಪಿಗೂ, ಸಂಬಂಧಿಸಿರುವಿರೆಂದು ಈಗ ನಮಗೆ ಗೊತ್ತಾಯಿತು. ನೀವು ಸರಳವಾದ ಯುದ್ಧ ಮೂಲಕವಾಗಿ, ನಮ್ಮನ್ನು ಗೆದ್ದು, ನಮ್ಮ ಕುಮಾರಿಯನ್ನು ಸ್ವಾಧೀನಪಡಿಸಿಕೊಂಡಿದ್ದರೆ ಅದೊಂದು ರೀತಿಯಾಗಿತ್ತು. ಕಪಟ ಸಂನ್ಯಾಸಿಗಳನ್ನೂ, ಕಳ್ಳರನ್ನೂ ನಮ್ಮ ನಗರಕ್ಕೆ ಕಳುಹಿಸಿ, ನಮ್ಮ ಅಂತಃಪುರವನ್ನೂ ಕಲಕಿ, ಕುಮಾರಿಯನ್ನು ಅಪಹರಿಸಿಕೊಂಡು ಹೋಗಿರುತ್ತೀರಿ. ಹಾಗಿದ್ದರೂ, ಏನೂ ಅರಿಯದವರಂತೆ ನಟನೆ ಬೇರೆ ತೋರುತ್ತಿದ್ದೀರಿ. ಇದರ ಅರ್ಥವನ್ನು ನಮಗೆ ಸ್ಪಷ್ಟಪಡಿಸತಕ್ಕದ್ದು. ನಮ್ಮ ಕುಮಾರಿಯನ್ನು ಅಡಗಿಸುವ ಕಾರಣವೇನು ? ಇದಕ್ಕೆ ಸರಿಯಾದ ಉತ್ತರವೀಯದಿದ್ದರೆ, ನಾವು ಕಳ್ಳರನ್ನು ದಂಡಿಸುವಂತೆ, ನಿಮ್ಮನ್ನು ದಂಡಿಸಬೇಕಾದೀತು. ಎಚ್ಚರವಿರಲಿ."

ಈ ಪತ್ರವಾಚನದಿಂದ ತಿಮ್ಮನ ವೃದ್ಧ ಗಂಭೀರ ಮುಖಮಂಡಲದಲ್ಲಿ ವಿಶೇಷ ಭಾವ ವ್ಯತ್ಯಾಸಗಳೇನೂ ತೋರಿ ಬರಲಿಲ್ಲ.

ಹುಬ್ಬುಗಳು ಮಾತ್ರ ಸ್ವಲ್ಪ ನುರುಗಿಕೊಂಡುವು. ಬಳಿಕ ಗಜರಾಜ ದೂತನಿಗೆ–"ದೂತ, ಯೋಚಿಸಿ ನಾಳೆಯದಿನ ಪ್ರತ್ಯುತ್ತರವೀಯಲಾಗುವುದು. ಅದುವರೆಗೆ ನಮ್ಮ ಶಿಬಿರದಲ್ಲಿರು" ಎಂದೆಂದು ಅವನನ್ನು ಸೇವಕರ ಸ್ವಾಧೀನಪಡಿಸಿ, ತನ್ನೊಳಗೆ ಏನೋ ಯೋಚಿಸುತ್ತಿದ್ದನು.

ಮತ್ತೆ ಸ್ವಲ್ಪಹೊತ್ತಿನಲ್ಲಿ ಬಹು ವೇಗವಾಗಿ ಓಡಿಬಂದ ಮನುಷ್ಯನೊಬ್ಬನು, ಕುದುರೆಯಿಂದಿಳಿದು, ತಿಮ್ಮರಸನ ಡೇರೆಯೊಳಗೆ ಹೊಕ್ಕನು. ಅವನು ತಿಮ್ಮರಸನಿಗೆ ನೆಲಮುಟ್ಟಿ ನಮಸ್ಕಾರ ಮಾಡಿ, ಅಸಿರುಸಿರು ಬಿಡುತ್ತಾ ಮೇಲೂ ಕೆಳಗೂ ನೋಡುತ್ತಾ ನಿಂತನು. ಅವನ ಬೆವರಿದ ಮೈಯನ್ನೂ, ಅಸ್ತವ್ಯಸ್ತವಾದ ಉಡುಗೆಗಳನ್ನೂ, ಬಾಡಿ ಆಯಾಸಗೊಂಡ ದೇಹವನ್ನೂ ನೋಡಿ, ತಿಮ್ಮರಸನು ಆತುರದಿಂದ, "ಏನಪ್ಪಾ, ನಗರದಲ್ಲೆಲ್ಲಾ ಕ್ಷೇಮ ತಾನೆ?" ಎಂದು ಕೇಳಿದನು.

"ಕ್ಷೇಮವಾಗಿಯೇ ಇರುವರು ಪ್ರಭು. ಆದರೆ ಈ ನಿರ್ಭಾಗ್ಯನು ದುರ್ವಾರ್ತೆಯನ್ನು ತೆಗೆದುಕೊಂಡು ಬರುವ ಪ್ರಸಂಗಕ್ಕಾಗಿ ವ್ಯಸನಪಡುತ್ತಾನೆ. ಇದೋ ಮಹಾಪ್ರಭು" ಎಂದು ದೂತನ್ನು ತನ್ನ ಟೊಂಕದೊಳಗಿನಿಂದ ಒಂದು ಪತ್ರದ ಥೈಲಿಯನ್ನು ತೆಗೆದು ತಿಮ್ಮರಸನ ಕೈಗೆ ಸಮರ್ಪಿಸಿದನು.

ತಿಮ್ಮರಸನು ಬೇಗ ಬೇಗನೆ ಥೈಲಿಯನ್ನು ಭಂಗಿಸಿ ನೋಡಲಾಗಿ, ಪತ್ರವು ಮಾತ್ರವಲ್ಲದೆ, ಪುಟ್ಟದೊಂದು ರೇಶಿಮೆಯ ಪೊಟ್ಟಣವೂ ಇತ್ತು. ಪೊಟ್ಟಣವನ್ನು ಬದಿಗಿಟ್ಟು, ಪತ್ರವನ್ನು ಲಗುಬಗೆಯಿಂದ ಓದಿದನು:

"ಶ್ರೀಮದ್ವಿದ್ಯಾನಗರ ಸಾಮ್ರಾಜ್ಯದ ಮುಖ್ಯಾಮಾತ್ಯ ಅಪ್ಪಾಜೀ ಸಾಳುವ ತಿಮ್ಮರಸರ ಸನ್ನಿಧಾನಕ್ಕೆ, ನರಸರಾಜ ಕುಮಾರ ಅಚ್ಯುತರಾಯನು ಬಿನ್ನವಿಸಿಕೊಳ್ಳುವುದು: ನಿನ್ನೆಯ ದಿನ ನಮ್ಮ ಮಾತೋಶ್ರೀ ತಿಪ್ಪಾದೇವಿಯವರ ಅಂತಃಪುರದಲ್ಲಿ ದುರಂತ ಘಟನೆಯೊಂದು ಘಟಿಸಿತು. ಈ ದುಃಖವೃತ್ತಾಂತವನ್ನು ಸಮಯವರಿತು ತೀ. ಸ. ಅಣ್ಣಯ್ಯನವರಿಗೆ ಅರಿಕೆಗೊಳಿಸಲು ತಾವೇ ಬಲ್ಲವರಿರುವಿರಿ. ಬರೆಯಲಿಕ್ಕೇ ಕೈ ನಡುಗುತ್ತಿದೆ. ನಿರ್ವಾಹವಿಲ್ಲ. ರಾಜಮಾತಾ

ನಾಗಲಾದೇವಿಯವರು ಅಕಸ್ಮಾತ್ ಅಪಘಾತದಲ್ಲಿ ಪರಮಪದವನ್ನು ಸೇರಿದರೆಂದು ಅರಿಕೆ ಮಾಡುವ ದುರ್ಭಾಗ್ಯವನ್ನು ಹೊತ್ತೆನಲ್ಲಾ ಎಂದು ದುಃಖಿಸುತ್ತೇನೆ. ಈ ಹತ್ಯಕ್ಕೆ ಕಾರಣಳಾದವಳು ಒಬ್ಬಳು ಅಪರಿಚಿತ ಸ್ತ್ರೀ. ಇವಳನ್ನು ಬಂಧಿಸಿ ಸೆರೆಯಲ್ಲಿ ಹಾಕಿರುತ್ತದೆ. ಇವಳೇ 'ರಾಣೀ ಅಜ್ಞಾತಾದೇವಿ' ಎಂಬ ಚೋರನಾಯಕಿಯಾಗಿರ ಬೇಕು. ಕಾರಣ ಅವಳ ಕೈಬೆರಳಿನಲ್ಲಿ ನಮ್ಮ ಹಳೆಯ ರಾಜ ಮುದ್ರೆಯ ಉಂಗುರವಿತ್ತು. ಆ ಉಂಗುರವನ್ನು ಈ ಪತ್ರದೊಂದಿಗೆ ಇಟ್ಟಿರುತ್ತೇನೆ. ಮುಂದಿನ ಕರ್ತವ್ಯಗಳನ್ನು ತಾವು ಬಲ್ಲವರಿರುವುದ ರಿಂದ, ನಾನು ಹೆಚ್ಚಿಗೆ ಬರೆಯಲಾರೆ. ಇತಿ,

—ರಾಜಕಾರ್ಯ ನಿರ್ವಾಹಕ, ಅಚ್ಯುತರಾಯ"

ತಿಮ್ಮರಸನ ಮುಖದಲ್ಲಿ ಚಿಂತಾರೇಖೆಗಳು ಚೆನ್ನಾಗಿ ಮೂಡಿದುವು. ನಿಟ್ಟುಸಿರು ಬಿಟ್ಟನು. ದಣಿದು ತೇಕುತ್ತಿರುವ ಆ ದೂತ ನನ್ನು ನೋಡಿ, "ಅಪ್ಪಾ, ನೀನು ತುಂಬಾ ಬಳಲಿರುತ್ತೀ. ಹೋಗಿ ಶ್ರಮನಿವಾರಣೆ ಮಾಡಿಕೊ" ಎಂದು ಒಬ್ಬ ಸೇವಕನ ಜತೆಗೂಡಿಸಿ ಅವನನ್ನು ಕಳುಹಿಸಿದನು.

ಆ ರೇಶಿಮೆಯ ಪೊಟ್ಟಣವನ್ನು ಬಿಚ್ಚಿ ನೋಡಿದನು. ಅದೇ ಉಂಗುರವೇ, ಹಿಂದೆ 'ಲಾರ್ಡ್ ಲೂಯಿಸ್' ಎಂಬ ಹೆಸರಿನಿಂದ ಉದಯಗಿರಿಯ ರಾಜಬೊಕ್ಕಸವನ್ನು ಕೊಳ್ಳೆಹೊಡೆದಿತ್ತು. ಮತ್ತು ಅಲ್ಲಿ ಕೈದಿಗಳಾಗಿದ್ದ ಗಜಪತಿ ಸೈನಿಕರನ್ನೂ ಮಾದರಸನೆಂಬ ಕಳ್ಳ ನನ್ನೂ ಬಿಡುಗಡೆಗೊಳಿಸಿತ್ತು. ಆ ಮಾದರಸನನ್ನು ಕಿಂಚಿತ್ತಾಗಿ ತಿಮ್ಮರಸನು ಬಲ್ಲನು.

ಹಿಂದೆ ಉದಯಗಿರಿಯ ವಿಜಯಕ್ಕೆ ಆ ಮಾದರಸನೇ ಸಹಾಯ ಮಾಡಿದ್ದನು. ಉದಯಗಿರಿಯನ್ನು ಗೆಲ್ಲುವ ಬಗೆಯನ್ನು ಅರಿಯದೆ, ತಿಮ್ಮರಸನು ಚಿಂತೆಯಲ್ಲಿದ್ದಾಗ, ಆ ಮಾದರಸನು ಮೊತ್ತಮೊದಲು ತಿಮ್ಮರಸನ ಬಳಿಗೆ ಬಂದು, ರಾಮಯಾಮಾತ್ಯನು ಒಂದು ತುಂಡು ಸೇನೆಯನ್ನು ರಹಸ್ಯ ಸುರಂಗದ್ವಾರಾ ದುರ್ಗಕ್ಕೆ ಕೊಂಡೊಯ್ಯಲು

ಹೊರಗೆ ಹೋಗಿರುವನೆಂದೂ, ಅದನ್ನು ವಿಜಯನಗರದ ಸೈನ್ಯವು ಅಡ್ಡಗಟ್ಟಬೇಕೆಂದೂ, ಆ ಸಂಧಿಯಲ್ಲಿ ಮಾದರಸನು ತನ್ನ ಸಂಗಾತಿಗಳೊಂದಿಗೆ, ಗಜಸೈನಿಕ ವೇಷದಿಂದ ದುರ್ಗದೊಳಗೆ ಸೇರಿ, ಕೋಟೆಯ ಬಾಗಿಲುಗಳನ್ನು ಕದಲಿಸುವನೆಂದೂ, ಆಗ ಸುಲಭವಾಗಿ ವಿಜಯನಗರದ ಸೇನೆ ದುರ್ಗದೊಳಗೆ ಹೊಕ್ಕುಬಿಡಬೇಕೆಂದೂ, ಆ ಮಾದರಸನೇ ತಿಮ್ಮರಸನಿಗೆ ಉಪಾಯ ಹೇಳಿಕೊಟ್ಟು, ಹಾಗೆಯೇ ಸಾಧಿಸಿಯೂ ಕೊಟ್ಟಿದ್ದನು. ತಾನು ಅಜ್ಞಾತಾ ದೇವಿಯ ಚೋರವೃಂದದವನೆಂದು, ಅವನೇ ಸೂಚಿಸಿಯೂ ಇದ್ದನು. ಮತ್ತು ದುರ್ಗ ವಿಜಯವಾದ ಮೇಲೆ ತಾನು ಕೇಳುವ ಪ್ರತಿಫಲವನ್ನು ಕೊಡಬೇಕೆಂದು ತಿಮ್ಮರಸನಿಂದ ಮಾತು ತೆಗೆದುಕೊಂಡಿದ್ದನು. ಅದು ಇಂತಹ ಪ್ರತಿಫಲವೆಂಬುದನ್ನು ಮಾತ್ರ ಮೊದಲು ತಿಳಿಸಲಿಲ್ಲ. ಹೀಗೆ ಅವನು ಚೋರವೃಂದದವನೆಂದು ತಿಳಿದರೂ, ಬೇರೆ ಉಪಾಯವಿಲ್ಲದುದರಿಂದ, ದುರ್ಗವಿಜಯಕ್ಕೆ ಅವನ ಸಹಾಯವನ್ನು ಕೈಕೊಳ್ಳಬೇಕಾಯಿತು. ಅನಂತರ ನೆರೆದ ಸಭೆಯಲ್ಲಿ ಎಂತಹ ವಿಚಿತ್ರವಾದ ಪ್ರತಿಫಲವನ್ನು ಎಷ್ಟು ಧೈರ್ಯದಿಂದ ಕೇಳಿದನು ಈ ಮಾದರಸ? ಗಜರಾಜ ಕುಟುಂಬವನ್ನೇ, ವೀರರುದ್ರನ ರಾಣೀ ಕುಮಾರಿಯರನ್ನೇ ತನ್ನ ವಶಕ್ಕೆ ಒಪ್ಪಿಸಬೇಕೆಂದು ಕೇಳಿದನಲ್ಲ! ಅದೇಕೆಂಬುದನ್ನು ಮಾತ್ರ ವಿವರಿಸಲಿಲ್ಲ. ಆದುದರಿಂದಲೇ ಮಾದರಸನನ್ನು ಹಿಡಿದು ಸೆರೆಯಲ್ಲಿ ಬಂಧಿಸಲಾಗಿತ್ತು. ದುರ್ಗವು ಕೈವಶವಾದ ಮೇಲೆ ವೀರರುದ್ರನ ರಾಣಿಯೂ ಕುಮಾರಿಯೂ ಮಾತ್ರವೇ ಸಿಕ್ಕಿದ್ದರಲ್ಲದೆ, ವೀರರುದ್ರ ಗಜಪತಿ ಮಾಯವಾಗಿ ಹೋಗಿದ್ದನು. ಆ ಮಾಯಕ್ಕೂ, ಮಾದರಸನಿಗೂ ಸಂಬಂಧವಿರಲೇಬೇಕೆಂದು ಊಹಿಸಲ್ಪಟ್ಟಿತ್ತು. ಅನಂತರ 'ಲಾರ್ಡ್ ಲೂಯಿಸ್' ನೆಂಬ ವೇಷಧಾರಿಯಿಂದಾಗಿ ಮಾದರಸನೂ ಪಾರಾದುದರಿಂದ ಈ ಉಂಗುರಕ್ಕೂ 'ಅಜ್ಞಾತಾ ದೇವಿ'ಗೂ ಸಂಬಂಧವಿರಬೇಕೆಂದಾಯಿತು. ಹೀಗೊಂದು ಉಂಗುರವು ಹೊರಗಡೆಯಲ್ಲಿರುವ ಸಂಗತಿ ಅದುವರೆಗೆ ತಿಮ್ಮರಸನಿಗೆ ತಿಳಿದಿರಲಿಲ್ಲ. ಲಾರ್ಡ್ ಲೂಯಿಸನ ಮೋಸವು ಬಯಲಾದ ಮೇಲೆ, ಈ ಗಜರಾಜ ಮುದ್ರೆಯಲ್ಲಿ ವ್ಯತ್ಯಾಸಪಡಿಸಲಾಗಿತ್ತು.

ಈ ಮಹತ್ವದ ಉಂಗುರವು ಆ ಚೋರನಾಯಕಿಗೆ ಹೇಗೆ ಸಿಕ್ಕಿತು? ಮತ್ತೆ ಈ ರೀತಿಯಾಗಿ ಹೇಗೆ ವಾಪಸು ಬಂತು? ನಾಗಲಾದೇವಿಯ ಹತ್ಯಕ್ಕೂ, ತಿಪ್ಪಾಂಬೆಗೂ, ಈ ತಸ್ಕರಿಣೀ ರಾಣಿಗೂ ಏನು ಸಂಬಂಧ? ಇದಂತೂ ಹಾಗಿರಲಿ; ಇನ್ನೀ ವಿಷಾದ ವೃತ್ತಾಂತವನ್ನು ರಾಯನ ಕಿವಿಗೆ ಹಾಕುವುದು ಹೇಗೆ? ಅಪ್ರತಿಮ ಮಾತೃಭಕ್ತನಾದ ರಾಯನು ಮಾತೃವಿಯೋಗವನ್ನು ಕೇಳಿ ಹೇಗೆ ಪರಹರಿಸಿಕೊಂಡಾನು? ಈ ಸಂಧಿಗ್ಧದಲ್ಲಿ ಯುದ್ಧದ ಗತಿಯೇನು? ಪ್ರತಾಪರುದ್ರನಿಗೆ ಏನೆಂದು ಪ್ರತ್ಯುತ್ತರ ಕೊಡಬೇಕು? ಆ ಗಜಪತಿ ನಂದಿನಿಯ ಗತಿ ಏನಾಗಿರ ಬಹುದು?

ಈ ಅನೇಕ ಪ್ರಶ್ನೆಗಳು ಮಹಾಮೇಧಾವಿಯಾದ ತಿಮ್ಮರಸನ ಮಿದುಳಿನಲ್ಲಿ ಹೊರಳಾಡತೊಡಗಿದವು. ಬಹುಹೊತ್ತು ಯೋಚನೆ ಮಾಡಿಕೊಂಡು, ಪ್ರತಾಪರುದ್ರನಿಗೆ ಒಂದು ಪ್ರತ್ಯುತ್ತರವನ್ನು ಸಿದ್ಧಪಡಿಸಿಕೊಂಡನು. ಅನಂತರ ಕೃಷ್ಣದೇವರಾಯನ ಮಹಾ ಭವ್ಯ ಪಟಲನಿಲಯದ ಕಡೆಗೆ ತಿಮ್ಮರಸನು ಹೊರಟನು.

## ೮

ಭವ್ಯಸುಂದರ ಉನ್ನತ ವಿಶಾಲವಾದ ಆ ಚಕ್ರತಿರ್ವಯ ಡೇರೆಯ ಮುಖದ್ವಾರದಲ್ಲಿ, ಕಟಿಯಲ್ಲಿ ಖಡ್ಗವನ್ನೂ, ಕೈಯಲ್ಲಿ ಈಟಿಯನ್ನೂ ಕೊರಳಲ್ಲಿ ಊದುಗೊಂಬನ್ನೂ ಧರಿಸಿದವರಾದ ಇಬ್ಬರು ದ್ವಾರ ಪಾಲಕರು, ಮಹಾಮಂತ್ರಿಗೆ ವಿಧೇಯತೆಯಿಂದ ಅಭಿವಾದನೆ ಮಾಡಿ ಬದಿಗೆ ಸರಿದು ನಿಂತರು. ಒಳಗೆ ವಿಶಾಲವಾದ ಪಟಾಂಗಣವೂ ಅಲ್ಲಿ ಸಾರ್ವಭೌಮನ ಅಂಗರಕ್ಷಕ ಸೇನೆಯೂ ಓರಣವಾಗಿ ಒಪ್ಪುತ್ತಿತ್ತು. ಇದಿರಿಗೆ ಹಳದೀ ಬಣ್ಣದಿಂದ ಬಂಗಾರದ ಮಂದಿರದಂತೆ ತೊಳಗುವ ಡೇರೆಯ ಮುಖದಲ್ಲಿರುವ ರಕ್ಷಕ ಭಟರನ್ನು ಕುರಿತು ತಿಮ್ಮರಸನು ಸನ್ನೆ ಮಾಡಿದನು. ಒಡನೆ ಒಬ್ಬನು ಒಳಕ್ಕೆ ಓಡಿಹೋಗಿ ಸ್ವಲ್ಪ ಹೊತ್ತಿನಲ್ಲಿ ತಿರುಗಿ ಬಂದು, "ಸಾರ್ವಭೌಮರು ತಮಗಾಗಿ ಕಾದಿದ್ದಾರೆ" ಎಂದು ಬಿನ್ನವಿಸಿದನು. ತಿಮ್ಮರಸನು ಒಳಗೆ ಪ್ರವೇಶಿಸುವಾಗ ಒಳಗೆ ಒಳಗೊಳಗೆ, ಅನೇಕ ಮಂದಿ ಸೇವಕರು ಅಲ್ಲಲ್ಲಿ ಸುಳಿದಾಡಿಕೊಂಡಿದ್ದರು. ತಿಮ್ಮರಸನು ಕೇಂದ್ರ ಮಂದಿರಕ್ಕೆ ಪ್ರವೇಶಿಸುವಷ್ಟರಲ್ಲಿ "ಬನ್ನಿ ಅಪ್ಪಾಜೀ" ಎಂದು ರಾಯನೇ ಮುಂದೆ ಬಂದು, ತಿಮ್ಮರಸನ ಕೈಯನ್ನು ಹಿಡಿದು ಮುಂದಕ್ಕೆ ಕರೆದೊಯ್ದು ತುಪ್ಪಳದ ಗದ್ದುಗೆಯಲ್ಲಿ ಕೂಡಿಸಿ ತಾನೂ ಮಂಡಿಸಿದನು.

ಐವತ್ತು ವರ್ಷ ವಯಸ್ಸಿದ್ದೀತು ಕೃಷ್ಣದೇವರಾಯನಿಗೆ. ಆದರೂ

ಕಣ್ಣುಗಳಲ್ಲಿಯೂ ಗಲ್ಲಗಳಲ್ಲಿಯೂ ತಾರುಣ್ಯದ ತೇಜಸ್ಸು ಚೆನ್ನಾಗಿ ಹೊಳೆಯುತ್ತಿತ್ತು. ಮುಖದಲ್ಲಿ ರಾಜೋಚಿತವಾದ ಸುರುಳೀವಿಲಾಸ. ಹಣೆಯಲ್ಲಿ ತಿಲಕ; ಕಿವಿಗಳಲ್ಲಿ ಕುಂಡಲಗಳು; ಕೊರಳಲ್ಲಿ ಮುತ್ತು ರತ್ನಗಳ ಅನರ್ಘ ಹಾರಗಳು. ಬೆಲೆಬಾಳುವ ಸಾದಾ ಭೂಷಣ. ನಾನಾ ವಿಧ ಅಂಗಸಾಧನೆಗಳಲ್ಲಿ ಪಳಗಿ ಮುಂಡೆದಿರುಗಿದ ಮೈಕಟ್ಟು ಗಳಿಂದೊಪ್ಪುವ ಕಟ್ಟಾಳು. ಮುಖದ ಗಾಂಭೀರ್ಯದಲ್ಲಿ ಅವನ ದೃಢನಿಶ್ಚಯತೆಯ ಹೃದಯವು ಪ್ರತಿಬಿಂಬಿಸುತ್ತಿತ್ತು.

ಬಾಲ್ಯದಿಂದಲೇ ಅವನನ್ನು ತಂದೆಗೂ ಮಿಗಿಲಾದ ವಾತ್ಸಲ್ಯ ದಿಂದ ಕಾಪಾಡಿ ಪಟ್ಟಾಭಿಷೇಕ ಮಾಡಿಸಿದ ತಿಮ್ಮರಸನ ಮೇಲೆ ರಾಯನು, ಪಿತೃಭಕ್ತಿಯನ್ನಿಟ್ಟು, "ಅಪ್ಪಾಜೀ" ಎಂದು ಸಂಬೋಧಿಸು ತ್ತಿದ್ದನು.

ಒಂದೆರಡು ಮಾತುಗಳ ನಂತರ ರಾಯನು ರುಚೀಕುಮಾರಿಯ ಮಾತುಗಳನ್ನೆತ್ತಿದನು. ರುಚೀಕುಮಾರಿಯನ್ನು ಇದಿರುಗೊಳ್ಳಲು ತಕ್ಕ ವ್ಯವಸ್ಥೆಯನ್ನು ಮಾಡಿಸಿ, ಎಂಟು ಮಂದಿಗಳೊಡನೆ ಮೂರು ದೋಣಿಗಳನ್ನು ಕಳುಹಿಸಿ, ಎಷ್ಟು ಹೊತ್ತಾದರೂ ದೋಣಿಗಳು ತಿರುಗಿ ಬಾರದಿರಲು, ತಿಮ್ಮರಸನು ಕೆಲವು ಮಂದಿಯನ್ನು ಪುನಃ ಕಳುಹಿಸಿ ಶೋಧನೆ ನಡೆಯಿಸಿದ್ದನು. ಆಗ ಮರಕ್ಕೆ ಬಿಗಿಯಲ್ಪಟ್ಟಿದ್ದ ಆ ಎಂಟು ಮಂದಿಗಳು, ಆ ಶೋಧಕರಿಂದ ಬಂಧಮುಕ್ತರಾಗಿ, ತಿಮ್ಮರಸನ ಬಳಿಗೆ ಬರಲ್ಪಟ್ಟು, ನಡೆದ ವಿಪರೀತವನ್ನು ನಿವೇದಿ ಸಿದ್ದರು. ಹಾಗೆ ಗಜಪತಿನಂದಿನಿಯನ್ನು ಅಪಹರಿಸಿದವರಾರೆಂದು ಗೊತ್ತಾಗದೆ, ರಾಯ-ತಿಮ್ಮರಸರಿಗೆ ಯೋಚನೆಯಾಗಿತ್ತು. ಅವರೂ ಆ ಹರಣದ ಶೋಧನೆಗಾಗಿ ತಕ್ಕ ಚಾರರನ್ನು ಕಳುಹಿಸಿದ್ದರು.

ಇದೇ ವಿಷಯವನ್ನು ಮಾತಾಡುತ್ತ ತಿಮ್ಮರಸನು ಪ್ರತಾಪ ರುದ್ರನು ಕಳುಹಿಸಿದ ಪತ್ರವನ್ನು ತೋರಿಸಿ, ಅದಕ್ಕೆ ತಾನು ಸಿದ್ಧ ಪಡಿಸಿದ ಪ್ರತ್ಯುತ್ತರವನ್ನು ಈ ರೀತಿಯಾಗಿ ಓದಿದನು :

"ಶ್ರೀಮದಾಂಧ್ರ ಸಾಮ್ರಾಟ್ ರಾಜಾ ಪ್ರತಾಪರುದ್ರ ಗಜಪತಿ ಯವರ ಸಮ್ಮುಖಕ್ಕೆ, ಕೃಷ್ಣದೇವರಾಯ ಸಾರ್ವಭೌಮರ ಪ್ರತ್ಯುತ್ತರ

ವೇನೆಂದರೆ: ನಿಮ್ಮ ಪತ್ರವನ್ನು ಕಂಡು ಆಶ್ಚರ್ಯವೂ ವ್ಯಸನವೂ ಆಯಿತು. ಇದರೆ ನೀವು ಹೊರಿಸುವ ಯಾವ ಅಪರಾಧಗಳಿಗೂ ನಾವು ಬಾಧ್ಯರಲ್ಲ. ರಾಜ್ಯವಿಸ್ತಾರಕ್ಕಾಗಿ ಯುದ್ಧ ಮಾಡುವುದೂ ಯುದ್ಧಮೂಲಕವಾಗಿ ವಿವಾಹ ಮಾಡಿಕೊಳ್ಳುವುದೂ ಕ್ಷತ್ರಿಯರಿಗೆ ಧರ್ಮವಾಗಿದೆ. ನಾವು ನಿಮ್ಮೊಂದಿಗೆ ನೆಂಟಸ್ತಿಕೆ ಮಾಡಿಕೊಂಡು, ಆ ಮೂಲಕವಾಗಿ ದಾಕ್ಷಿಣಾತ್ಯ ದೇಶಗಳನ್ನು ಐಕಮತ್ಯಗೊಳಿಸ ಬೇಕೆಂಬ ಸದುದ್ದೇಶದಿಂದ ಈ ಕಾರ್ಯದಲ್ಲಿ ಕೈಹಾಕಿರುವೆವು. ನೀವಾದರೋ ದ್ರಾವಿಡರಾಜನೆಂದು ನಮ್ಮನ್ನು ಹೀಯಾಳಿಸುವಿರಿ. ಹಾಗಾದರೆ ನೀವೂ ದ್ರಾವಿಡರೇ ಅಲ್ಲವೆ? ನಿಮ್ಮ ಪೂರ್ವಜರು ಕಟಕ ದಲ್ಲಿ ನೆಲೆಸಿದ ಸುಪ್ರಸಿದ್ಧ ಕನ್ನಡ ಗಂಗರಾಜರ ಮನೆತನದವರೇ ಅಲ್ಲವೆ? ಇದನ್ನು ಯೋಚನೆ ಮಾಡದೆ ನೀವು ವೃಥಾ ದುರಭಿಮಾನ ಕ್ಕೊಳಗಾಗಿ ಬೀಗುವಿರಿ! ನಮ್ಮ ಸದುದ್ದೇಶಕ್ಕೆ ಬಾಧೆ ಮಾಡುವಿರಿ! ಅದರ ನಿವಾರಣೆಗಾಗಿಯೇ ನಾವು ಯುದ್ಧೋದ್ಯುಕ್ತರಾಗಿದ್ದೇವೆ. ಚತುರೋಪಾಯಗಳಲ್ಲಿ ಮೊದಲಿನ ಮೂರು ಫಲಕಾರಿಯಾಗದ ಕಾರಣವೇ ಈ ದಂಡೋಪಾಯವನ್ನು ಕೈಕೊಂಡಿದ್ದೇವೆ. ಭೇದೋ ಪಾಯ ಸಾಧನೆಗಾಗಿ ನಾವು ಕೆಲವು ತಂತ್ರಗಳನ್ನೂ ಕೈಕೊಂಡೆವು. ಆದರೆ ನಿಮ್ಮ ಕುಮಾರಿಯನ್ನು ಅಪಹರಿಸಿ ಅಡಗಿಸುವುದರಿಂದ ನಮ ಗೇನು ಉಪಯೋಗ? ಕುಮಾರಿಯ ಅಪಹಾರಕ್ಕೆ ನಿಮ್ಮ ಅಜಾಗರೂ ಕತೆಯೇ ಕಾರಣವಲ್ಲದೆ ನಾವು ಜವಾಬುದಾರರಲ್ಲ. ಆದರೂ ಇದನ್ನು ಕೂಲಂಕಷವಾಗಿ ಕಂಡುಹಿಡಿಯುವುದೀಗ ನಮಗೂ ಕರ್ತವ್ಯವಾಗಿದೆ. ಆದುದರಿಂದ ನಿಮ್ಮ ಕುಮಾರಿಯ ಪತ್ತೆ ಗೊತ್ತಾಗುವವರೆಗೆ, ನಾವು ಉಭಯರೂ ಯುದ್ಧವನ್ನು ನಿಲ್ಲಿಸೋಣ. ಇದಕ್ಕೆ ಮಾರಾಗಿ ನೀವು ನಮ್ಮ ಮೇಲೆ ತುಣಿದೇ ಬೀಳುವಿರಾದರೆ ನಾವು ಸರ್ವದಾ ಸಿದ್ಧರಿರು ತ್ತೇವೆ. ಇತಿ—"

"ಆದರೆ ಅಪ್ಪಾಜಿ, ಈ ಪ್ರತ್ಯುತ್ತರದ ಕಟ್ಟಕಡೆಯಲ್ಲಿರುವ 'ಯುದ್ಧ ವನ್ನು ನಿಲ್ಲಿಸೋಣ' ಎಂಬ ವಾಕ್ಯವು ನನಗೆ ಸರಿದೋರುವುದಿಲ್ಲ. ಉತ್ಕಲಕುಮಾರಿ ನಮಗೆ ಸಿಕ್ಕಲಿ, ಸಿಕ್ಕದಿರಲಿ, ವಿಜಯ ಕಾರ್ಯವನ್ನು

ಏಕೆ ನಿಲ್ಲಿಸಬೇಕು ?" ಎಂದು ಕೃಷ್ಣದೇವರಾಯನು ಕೇಳಿದನು.

"ಪ್ರಭು, ಯುದ್ಧವಿಲ್ಲದೆಯೇ ಕಾರ್ಯವು ಕೈಗೂಡುತ್ತಿರುವಾಗ ವೃಥಾ ಸೈನ್ಯನಾಶವೇಕೆ? ಕುಮಾರಿಯ ಅಪಗತದಿಂದ ಪ್ರತಾಪ ರುದ್ರನು ನಿರ್ವಿಣ್ಣನಾಗಿದ್ದಾನೆ. ಗಜಪತಿ ನಂದಿನಿ ಬೇಗದಲ್ಲಿಯೇ ನಮ್ಮ ಕೈಗೆ ಸಿಕ್ಕುವಳು. ಏಕೆಂದರೆ, ಅವಳೊಂದಿಗೆ ಯುಕ್ತಿಕೋವಿದ ರಾದ ನಮ್ಮ ತಿಮ್ಮಣ್ಣ, ರಾಮಕೃಷ್ಣರೂ ಇರುವರಲ್ಲವೆ? ಅಲ್ಲದೆ ಕೃಷ್ಣರಾಯಾ, ಇಂದು ವಿಜಯನಗರದಿಂದ ಒಬ್ಬ ದೂತನು ಬಂದಿ ದ್ದಾನೆ" ಎಂದು ತಿಮ್ಮರಸನು, ಆ ದಾರುಣವಾರ್ತೆಯ ಮಡಿಕೆಯನ್ನು ಬಿಚ್ಚಲಾರಂಭಿಸಿದಾಗ, ರಾಯನು ಆತುರದಿಂದ— "ಓಹೋ! ಎಲ್ಲರೂ ಕ್ಷೇಮವೆ? ಮುಖ್ಯವಾಗಿ ನನ್ನ ಮಾತೋಶ್ರೀ ಕ್ಷೇಮ ತಾನೆ? ಅಪ್ಪಾಜಿ, ಮೊನ್ನೆ ನನಗೇಕೋ ದುಃಶಕುನಗಳು ತೋರಿದವು. ಎಲ್ಲಿ? ಎಲ್ಲಿರುವನಾದೂತ?"

"ಸೈರಿಸು, ರಾಜೇಂದ್ರಾ, ಎಲ್ಲರೂ ಕ್ಷೇಮವೇ? ಆದರೆ—"

"ಏನು ಅಪ್ಪಾಜೀ?"

"ಅಜ್ಞಾತಾದೇವಿಯೆಂಬ ಚೋರನಾಯಕಿ ವಿಜಯನಗರದಲ್ಲಿ ಸಿಕ್ಕಿಬಿದ್ದಿದ್ದಾಳಂತೆ."

"ಬಹಳ ಮೇಲಾಯಿತಲ್ಲ! ಹೇಗೆ ಸಿಕ್ಕಿಬಿದ್ದಳೋ?"

"ಅದೇನೋ ಸರಿಯಾಗಿ ತಿಳಿದಿಲ್ಲ. ತಿಪ್ಪಾಂಬೆಯ ಅಂತಃಪುರ ದಲ್ಲಿ ಏನೋ ಒಂದು ಘಾತುಕ ಕೃತ್ಯವು ನಡೆಯಿತಂತೆ. ಆ ಸಂಬಂಧ ದಲ್ಲಿ ಹೇಗೋ ಈ ಚೋರನಾಯಕಿ ಸಿಕ್ಕಿದಳಂತೆ. ಇಗೋ ನೋಡು. ಈ ನಮ್ಮ ಮುದ್ರೆಯುಂಗುರವು ಆ ಕೊಲೆಪಾತಕಿಯ ಬೆರಳಿನಲ್ಲಿ ಇದ್ದಿತಂತೆ!" ತಿಮ್ಮರಸನು ಆ ಉಂಗುರವನ್ನು ರಾಯನ ಕೈಗೆ ಕೊಟ್ಟನು.

ಆ ಉಂಗುರವನ್ನು ನೋಡಿದ ಕೂಡಲೇ ರಾಯನ ಮುಖವು ವಿಚಿತ್ರವಾದ ಮಾರ್ಪಾಟನ್ನು ಹೊಂದಿತು. ಏನೋ ಪೂರ್ವಸ್ಮರಣೆ ಯನ್ನು ನೆನೆದು ಕೊಂಬವನಂತೆ ದೃಷ್ಟಿಗಳು ಅಂತರ್ಮುಖವಾದುವು. ಹಾಗೆಯೇ, "ಹೌದು! ಅದೇ ಉಂಗುರವಿದು!—" ಎಂದನು.

"ಏನು ಹೌದು ? ಯಾವ ಉಂಗುರ ?"

"ಇದು ಆ ಚೋರ ನಾಯಕಿಯ ಕೈಗೆ ಹೇಗೆ ಬಂತು ? ಅಯ್ಯೋ! ನನ್ನ ಚಿನ್ನಾ ! ಚಿನ್ನಾ ! ಎಲ್ಲಿರುವಳು !"–ರಾಯನು ದುಃಖದಿಂದ ಆರ್ತಾಲಾಪ ಮಾಡಿದನು.

"ಇದೇನು ? ಏನಾಯಿತು ? ಎಲ್ಲಿಯ ಚಿನ್ನಾ ? ಯಾವ ಚಿನ್ನಾ ?"

ರಾಯನು ದುಃಖಮಿಶ್ರಿತಸ್ವರದಿಂದ–"ಅಪ್ಪಾಜೀ, ಪೂರ್ವದಲ್ಲಿ ನಾನು ಒಬ್ಬಳು ನಾರೀಮಣಿಯನ್ನು ವಿಧ್ಯುಕ್ತ ಪ್ರಕಾರ ವಿವಾಹ ಮಾಡಿಕೊಂಡಿದ್ದೆನೆಂದು ಹೇಳಲಿಲ್ಲವೆ ? ಅವಳೇ ಚಿನ್ನಾ. ಅವಳ ಬೆರಳಿಗೆ ನಾನೇ ಈ ಉಂಗುರವನ್ನು ಹಾಕಿದ್ದೆ. ಲಾರ್ಡ್ ಲೂಯಿಸ್ ಎಂಬ ಹೆಸರಿನಿಂದ ಉದಯ ಗಿರಿಯಲ್ಲಿ ಮೋಸವು ನಡೆಯಿತೆಂದು ಗೊತ್ತಾದಾಗಲೇ ನನಗೇನೋ ಸಂದೇಹವುಂಟಾಯಿತು. ಆಹಾ ! ನಿಶ್ಚಯವಾಗಿ ನನ್ನ ಆ ರಾಣಿಗೆ ಏನೋ ಘಾತವಾಗಿರಬೇಕು."

"ಓ-ಹೋ ! ಇರಲಿ, ಸೈರಿಸು. ನಿಧಾನದಲ್ಲಿ ಯೋಚಿಸೋಣ."

"ಬೇಡ ಅಪ್ಪಾಜಿ, ಅದನ್ನು ವಿಚಾರಿಸ ಹೋದರೆ ಇನ್ನಿಷ್ಟು ಮನೋವೇದನೆಯೇ ಉಂಟಾದೀತು. ಯಾವಾಗ ನನ್ನ ಆ ಧರ್ಮ ಪತ್ನಿಯನ್ನು ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳಲು ಸಾಧ್ಯವಿಲ್ಲದೆ ಅವಳನ್ನು ತ್ಯಾಗಮಾಡಿ ಪಿತ್ರಾಜ್ಞೆಯನ್ನು ನೆರವೇರಿಸುವ ಕರ್ತವ್ಯ ರಂಗದಲ್ಲಿ ಪ್ರವೇಶಿಸಿ ಬಿಟ್ಟಿರುವೆನೋ, ಇನ್ನು ಆ ಗತಜನ್ಮದ ಸಂಗತಿಯನ್ನು ವಿಚಾರಿಸಿ ಏನು ಪ್ರಯೋಜನ ?" ಎಂದು ರಾಯನು ಆ ಉಂಗುರವನ್ನು ನೋಡುತ್ತಾ ತನ್ನ ಕಿರುಬೆರಳಿಗೇರಿಸಿಕೊಂಡು, ಹೃದಯದೊಳಗಿನಿಂದ ಏನನ್ನೋ ಕಿತ್ತುಹಾಕಿದಂತೆ ಒಂದು ದೀರ್ಘ ಶ್ವಾಸವನ್ನು ಬಿಟ್ಟನು.

ಹಿಂದೆ, ಕೃಷ್ಣದೇವರಾಯನಿಗೆ ಪಟ್ಟಾಭಿಷೇಕವಾಗುವುದಕ್ಕಿಂತ ಪೂರ್ವದಲ್ಲಿ ಅಂತಃಶತ್ರುಗಳ ಬಾಧೆಯಿಂದಾಗಿ ಅವನು ಎಲ್ಲೆಲ್ಲಿಯೋ ತಲೆಮರೆಸಿಕೊಂಡಿರಬೇಕಾಗಿತ್ತು. ಆ ಕಾಲದಲ್ಲಿ ಅವನು ಯಾವಳೋ ಕುಲಹೀನ ಕನ್ಯೆಯನ್ನು ಪ್ರೇಮಿಸಿ ವಿವಾಹ ಮಾಡಿಕೊಂಡಿದ್ದನಂತೆ. ತರುವಾಯ ರಾಜಪಟ್ಟವು ಅವನ ಕಡೆಗೆ ಒಲಿದುಕೊಂಡು ಬಂದಾಗ,

ತನ್ನ ಹೆಂಡತಿಯನ್ನು ಪಟ್ಟದ ರಾಣಿಯನ್ನಾಗಿಸಿಕೊಳ್ಳಲು ಸಾಧ್ಯವಿದ್ದರೆ ಮಾತ್ರವೇ ತಾನು ಸಿಂಹಾಸನವೇರುವೆನೆಂದೂ ಇಲ್ಲದಿದ್ದರೆ ತಮ್ಮನಾದ ಅಚ್ಯುತರಾಯನಿಗೆ, ಪಟ್ಟಗಟ್ಟಿರೆಂದೂ ಎಷ್ಟೋ ಹಟ ಹಿಡಿದನು. ಕುಲಹೀನ ಕಾಂತೆಯನ್ನು ಭೋಗವತಿಯಾಗಿ ಇಟ್ಟುಕೊಳ್ಳಬಹುದೇ ಹೊರತು, ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳಕೂಡದು; ಅದಕ್ಕಾಗಿ ಸಿಂಹಾಸನವನ್ನು ತ್ಯಾಗಮಾಡುವುದು ಕ್ಷತ್ರಿಯಧರ್ಮವಲ್ಲ; ಅಲ್ಲದೆ ನರಸರಾಜೇಂದ್ರನು ಸಾಯುವಾಗ "ದಕ್ಷಿಣ ದಿಗ್ವಿಜಯವನ್ನು ಈಡೇರಿಸಿ, ಗಜಪತಿಗಳ ಗರ್ವವನ್ನು ಮುರಿದು, ವಿಜಾಪುರದ ಅದಿಲ್‌ಷಹನು ನುಂಗಿಕೊಂಡ 'ಅಂತರ್ವೇದಿ'ಯ ಪ್ರಾಂತಗಳನ್ನು ಹಿಂದೆ ತರಿಸುವ, ಮೂರು ಮುಖ್ಯ ಕಾರ್ಯಗಳನ್ನು ತನ್ನ ಮಕ್ಕಳು ಸಾಧಿಸಬೇಕು" ಎಂದು ಮರಣ ಶಾಸನವನ್ನು ಬರೆದಿಟ್ಟಿರುತ್ತಾನೆ. ಹಿರಿಯಮಗನಾದ ವೀರ ನರಸಿಂಹರಾಯನಿಂದ ಆ ಕಾರ್ಯಗಳು ಸಾಧಿಸಲಾಗದೆ ಹೋಗಿದ್ದುವು. ಆದುದರಿಂದ ಆ ಕರ್ತವ್ಯಗಳು ಕೃಷ್ಣದೇವರಾಯನ ಪಾಲಿಗೆ ಕಾದಿದ್ದುವು. ಇದನ್ನೆಲ್ಲಾ ತಿಮ್ಮರಸನು ರಾಯನಿಗೆ ವಿವರಿಸಿ ಹೇಳಿ, ಶ್ರೀ ಭುವನೇಶ್ವರಿಯ ಪಾದದ ಇದಿರಿನಲ್ಲಿ ಆ ಮರಣ ಶಾಸನವನ್ನಿಟ್ಟು, ಕರ್ತವ್ಯವನ್ನು ನಿಶ್ಚಯ ಮಾಡಿಕೊಳ್ಳುವಂತೆ ರಾಯನನ್ನು ಅಲ್ಲಿ ಕೂಡಿಸಿದ್ದನು. ರಾಯನು ಬಹುಹೊತ್ತು ಯೋಚನೆ ಮಾಡಿ, ಸಿಂಹಾಸನಾರೋಹಣವೇ ತನ್ನ ಕರ್ತವ್ಯವೆಂದು ನಿಶ್ಚಯಿಸಿಕೊಂಡು ಶ್ರೀ ಭುವನೇಶ್ವರಿಯ ಪಾದಸಾಕ್ಷಿಯಾಗಿ, ಕರ್ತವ್ಯ ಪರಾಙ್ಮುಖನಾಗಲಾರೆನೆಂದು ಪ್ರತಿಜ್ಞೆ ಮಾಡಿಕೊಂಡನು. ಹಾಗೆಯೇ ಪಟ್ಟಾಭಿಷಿಕ್ತನಾಗಿ ತನ್ನ ಪ್ರತಿಜ್ಞೆಯನ್ನು ಪಾಲಿಸುತ್ತಲೂಬಂದನು. ಅವನ ಪ್ರೇಮದಗ್ಧ ಹೃದಯದಲ್ಲಿ ಹೊಸ ಜ್ಯೋತಿಯನ್ನು ಬೆಳಗಿಸಲು ಗಜಪತಿನಂದಿನಿಯಾದ ಜಗನ್ಮೋಹಿನಿಯೇ ತಕ್ಕವಳೆಂದು ಭಾವಿಸಿ, ಅದಕ್ಕಾಗಿ ರಾಯನನ್ನು ಒಪ್ಪಿಸಬೇಕಾದರೆ ತಿಮ್ಮರಸನಿಗೆ ಸಾಕು ಸಾಕಾಗಿ ಹೋಗಿತ್ತು.

ಹೀಗೆ ಕರ್ತವ್ಯನಿಷ್ಠನಾದ ರಾಯನು, ಆ ಉಂಗುರದ ದರ್ಶನದಿಂದಾದ ಭಾವನಾ ವಿಕಾರವನ್ನು, ಕರ್ತವ್ಯ ಸ್ಮರಣೆಯಿಂದ ಬೇಗನೇ ಅಡಗಿಸಿಕೊಂಡು "ಅಪ್ಪಾಜಿ, ನೀವು ಇನ್ನೇನೋ ಹೇಳಲಿಕ್ಕಿರುವಂತೆ

ತೋರುವುದಲ್ಲಾ?" ಎಂದನು.

ತಿಮ್ಮರಸನು ಎದ್ದು ರಾಯನ ಭುಜಗಳನ್ನು ಹಿಡಿದು, "ಹೌದು ಕೃಷ್ಣಸಾರ್ವಭೌಮ, ನೀನು ತುಂಬಾ ಸ್ಥೈರಣೆಯನ್ನು ವಹಿಸಿಕೊಳ್ಳಬೇಕು. ನಿರ್ವಾಹವಿಲ್ಲದೆ ನಿನಗೆ ಅರಿಕೆ ಮಾಡಿಕೊಳ್ಳಬೇಕಾಗಿ ಬಂದಿರುವ, ಈ ಶೋಕ ವಾರ್ತೆಯನ್ನು ಕೇಳಿ, ಧೀರವರೇಣ್ಯನಾದ ನೀನು ಎದೆಗೆಡಬಾರದು. ಕಾಲಧರ್ಮವು ಯಾರಿಗೂ ತಪ್ಪಿದ್ದಲ್ಲ. ನಿನ್ನ ಪೂಜ್ಯ ಮಾತೆಯಾದ ನಾಗಲಾದೇವಿ ಕಾಲಧರ್ಮದಂತೆ ವೈಕುಂಠವಾಸಿನಿ—"

"ಹಾ! ಜನನಿ! ಅ....ಮ್ಮಾ!" ಎಂದೊಂದು ಆರ್ತನಾದವನ್ನು ಮಾಡಿ ಬಲಗುಂದಿ ಬೀಳಲಿರುವ ರಾಯನನ್ನು ತಿಮ್ಮರಸನು ಆನಿಸಿ ಹಿಡಿದುಕೊಂಡನು.

೯

ವಿಜಯನಗರದ ದಾರಿಯಲ್ಲಿ ಕೃಷ್ಣಾ-ತುಂಗಭದ್ರಾ ನದಿಗಳ ನಡುವಣ 'ಅಂತರ್ವೇದಿ'ಯಲ್ಲಿ ಚರಿತ್ರ ಪ್ರಸಿದ್ಧವಾದ ರಾಯಚೂರು ದುರ್ಗವು ಕಾಣಬರುತ್ತದೆ. ಅದೀಗ ವಿಜಾಪುರದ ಅದಿಲ್‌ಷಹನ ವಶದಲ್ಲಿತ್ತು. ತೋಪಲಖಾನನು ಈಗ ಅಲ್ಲಿಯ ಅಧಿಕಾರಿ. ರಾಮಯಾಮಾತ್ಯನೂ ಇಲ್ಲಿಗೇ ಬಂದು ಸೇರಿದ್ದಾನೆ. ಅವನು ತೋಪಲ್‌ಖಾನನನ್ನು ಸಂಧಿಸಿ ಸ್ವಲ್ಪಹೊತ್ತು ಮಾತ್ರವೇ ಆಗಿತ್ತು. ರಾಮಯಾಮಾತ್ಯನು ಹೇಳಿದ ಮಾತು ತೋಪಲ್‌ಖಾನನಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತ್ತು. "ಏನೇನು ! ರಾಮಯಾಮಾತ್ಯರೆ, ವಿಜಯನಗರದ ಸೆರೆಯಲ್ಲಿರುವುದು ನಿಜವಾದ ಗಜರಾಣಿ-ಕುಮಾರಿಯರಲ್ಲವೇ?"

"ಹೌದು ತೋಪಲ್‌ಖಾನ್, ಸಂದೇಹವೇ ಇಲ್ಲ. ವೀರರುದ್ರರೊಬ್ಬರೇ, ಹೆಂಡತಿಯನ್ನೂ ಪ್ರಿಯ ಮಗಳನ್ನೂ ಬಿಟ್ಟು ತಪ್ಪಿಸಿಕೊಳ್ಳಲಿಲ್ಲ. ಕುಟುಂಬಸಮೇತವಾಗಿಯೇ ಸುರಂಗಮಾರ್ಗದಿಂದ ತಪ್ಪಿಸಿಕೊಂಡಿದ್ದಾರಂತೆ. ನನ್ನ ಈ ಗೂಢಚಾರ ಪ್ರವರರಾದ ಚತುರ-ರಂಗರು, ಅವರೆಲ್ಲರನ್ನೂ ಕಣ್ಣಾರೆ ಕಂಡು, ಬಾಯಾರೆ ಮಾತಾಡಿಬಂದಿರುತ್ತಾರೆ. ಖಾನ್‌ಸಾಹೇಬ್, ಅಂದು ನಾಸಿಲ್ಲದ ವೇಳೆಯಲ್ಲಿ ಉದಯಗಿರಿ ದುರ್ಗವು ಆಕಸ್ಮಿಕವಾಗಿ ಶತ್ರುಗತವಾಗುವಾಗ ನಮ್ಮ ವೀರರುದ್ರ ರಾಜರು ಅರಮನೆಯ ದಾಸಿಯನ್ನೂ ಅವಳ ಮಗಳನ್ನೂ,

ರಾಣಿ ಹಾಗು ಕುಮಾರಿಯ ವೇಷದಲ್ಲಿರಿಸಿ, ತಾವು ಸಕುಟುಂಬರಾಗಿ ಪಲಾಯನ ಮಾಡಿದರಂತೆ. ಪ್ರಿಯ ರಾಣೀ ಕುಮಾರಿಯರನ್ನು ಬಿಟ್ಟು ಅವರು ಒಬ್ಬರೇ ತಪ್ಪಿಸಿಕೊಂಡಾರೇ ಎಂದು ನನಗೆ ಸಂದೇಹವೇ ಇತ್ತು. ಅದೀಗ ನಿಜವಾಯಿತು." ರಾಮಯಾಮಾತ್ಯನೆಂದ.

"ಹಾಗಾದರೆ ಕೃಷ್ಣದೇವನು ಮೋಸಹೋದನೆಂದಾಯಿತು." ತೋಪಲಖಾನನೆಂದ.

"ಸಂದೇಹವೇ ಇಲ್ಲ."

"ಹಾಗಾದರೆ ರಾಮಯಾಮಾತ್ಯರೆ, ತಾವು ಈಗ ಇಲ್ಲಿಗೆ ಬಂದಿರುವುದನ್ನು ನೋಡಿದರೆ, ಆ ದಿನ ನಾನು ಹೇಳಿದ್ದನ್ನು ಮನಸ್ಸಿಗೆ ತಂದುಕೊಂಡಿರುವ ಹಾಗೆ ಕಾಣುತ್ತದೆ."

"ಹೌದು ಖಾನ್‌ಸಾಹೇಬ್, ನಮ್ಮ ಸದ್ಯದ ಇಕ್ಕಟ್ಟಿನ ಸ್ಥಿತಿಯನ್ನೂ, ನಿಮ್ಮ ಸುಲ್ತಾನರಿಂದ ನಮಗಾಗಬೇಕಾದ ಸಹಾಯವನ್ನೂ ಕುರಿತು ಈ ಮೊದಲೇ ನಿಮಗೆ ವಿವರಿಸಿದ್ದೇನೆ. ಮುಖ್ಯ ನಿಮ್ಮ ಸುಲ್ತಾನರ ಇಷ್ಟದಂತೆ ನಡೆಯಬೇಕಾದ ಸ್ಥಿತಿ ನಮ್ಮದಾಗಿದೆ ಈಗ. ರಜಪೂತರು ಡಿಲ್ಲೀ ಸುಲ್ತಾನರಿಗೆ ಕನ್ಯೆಯನ್ನು ಕೊಡಲಿಲ್ಲವೆ? ದೈವವೇ ಬಗ್ಗಿಸುವಾಗ ಬಗ್ಗುವುದಿಲ್ಲವೆಂದರೆ ಸಾಗೀತೆ? ನಾನೂ ಪ್ರತಾಪರುದ್ರರೂ ಯೋಜನೆ ಮಾಡಿ ನಿಮ್ಮ ಅಭಿಮತಕ್ಕೆ ಅನುಮೋದಿಸಿಕೊಂಡಿದ್ದೇವೆ. ಅಂದು ನೀವು ಪಾತಪಲ್ಲಿಯಲ್ಲಿ ನನ್ನೊಡನೆ ಮಾತಾಡಿಕೊಂಡು ಹೋದ ಎರಡು ದಿನದಲ್ಲಿಯೇ ಉದಯುಗಿರಿಯ ರಾಜಕುಟುಂಬದ ನಿಜವಾದ ವರ್ತಮಾನವನ್ನು ನನ್ನ ಈ ಗುಪ್ತಚಾರರು ಬಂದು ನನಗೆ ತಿಳಿಸಿದರು. ಆಗ ನಾನು ನಿಮ್ಮ ಸೂಚನೆಗಳನ್ನು ಇವರ ಮೂಲಕವಾಗಿಯೇ ವೀರರುದ್ರ ಗಜಪತಿಯವರಿಗೆ ಹೇಳಿಕಳುಹಿಸಿಕೊಟ್ಟೆನು. ಈ ಸಂಬಂಧಕ್ಕೆ ವೀರರುದ್ರರು ಅರೆಮನಸ್ಸು ಮಾಡಿರುವರಂತೆ. ಆದರೆ ರಾಣಿ ಮಾತ್ರ ತಮಗೆ ಕ್ಷೇಮಕರವಾದ ಈ ಸಂಬಂಧಕ್ಕೆ ಕೂಡಲೇ ಒಪ್ಪಿರುತ್ತಾಳಂತೆ." ರಾಮಯಾಮಾತ್ಯನೆಂದ.

"ಆಹಾ! ಇನ್ನೇನಿದೆ? ನೀವೂ ಉದಯಗಿರಿಯ ರಾಣಿಯೂ ಪ್ರತಾಪರುದ್ರರೂ ಒಪ್ಪಿದಮೇಲೆ, ವೀರರುದ್ರನ ಒಪ್ಪಿಗೆ ಯಾವ ಲೆಕ್ಕ?"

"ಹೌದು. ಅವರನ್ನು ಸುಲಭದಲ್ಲಿಯೇ ಒಪ್ಪಿಸಬಹುದಿನ್ನು. ಈಗ ಮಾತ್ರ ನಾವು ಒಂದು ಉಪಾಯ ಮಾಡಬೇಕಾಗಿದೆ. ಖಾನ್ ಸಾಹೇಬ್, ನಮಗೀಗ ನಿಮ್ಮ ಸಹಾಯವು ಅತೀ ಅವಸರ. ತಕ್ಕ ಕರಾರುಗಳ ಮೇಲೆ ಸುಲ್ತಾನರು ಈಗಲೇ ಸಹಾಯವನ್ನು ಕಳುಹಿಸಿ ಯಾರೆ?"

"ಕಳುಹಿಸಿಯಾರೆ? ಮೊದಲು ಕನ್ಯೆಯನ್ನು ವಶಪಡಿಸಿಕೊಳ್ಳ ಬೇಕೆಂದಾರು."

"ಹೌದು. ನಾನೂ ಹಾಗೇ ಊಹಿಸಿದೆನು. ವೀರರುದ್ರ ಗಜಪತಿಯವರಿಗೆ ಗೊತ್ತಾಗದ ಹಾಗೆ ಕನ್ಯೆಯನ್ನು ಎತ್ತಿಕೊಂಡು ಬರಬೇಕಾಗಿದೆ. ಅವರು ವಿಜಯನಗರದ ದಕ್ಷಿಣದಲ್ಲಿ ಒಂದು ಹಳ್ಳಿ ಯಲ್ಲಿ ಅಡಗಿದ್ದಾರಂತೆ. ನಾನು ಹೋಗಿ ಕನ್ಯೆಯನ್ನು ಸಾಗಿಸಿಕೊಂಡು ಬೇಗನೇ ಬರುತ್ತೇನೆ. ಅಷ್ಟರೊಳಗೆ ನೀವು ವಿಜಾಪುರಕ್ಕೆ ಹೋಗಿ, ಸುಲ್ತಾನರೊಡನೆ ಮಾತಾಡಿ ಸಹಾಯವನ್ನು ಸಿದ್ಧಪಡಿಸಿಟ್ಟಿರಿ. ಈಗ ನನ್ನ ಜತೆಯಲ್ಲಿ ನಿಮ್ಮ ಒಬ್ಬಿಬ್ಬರು ಆಳುಗಳನ್ನು ಕಳುಹಿಸುವಿರಾ?"

"ಭೇಷಾಗಿ ಕಳುಹಿಸುವೆನು. ನಾಳೆ ಷಹಾಜಾದಾ ಮಾಲಾ ಖಾನರೇ ಇಲ್ಲಿಗೆ ಬರುತ್ತಾರೆ. ಅವರನ್ನು ರಾಯಚೂರಿನ ಆಧಿಪತ್ಯ ದಲ್ಲಿರಿಸಿ, ನನ್ನನ್ನು ಮುದಗಲ್ಲಿಗೆ ವರ್ಗಾಯಿಸುವಂತೆ ಕಾಣುತ್ತದೆ. ನೀವು ಕನ್ಯೆಯನ್ನು ಸಾಗಿಸಿಕೊಂಡು ಇಲ್ಲಿಗೆ ಬರುವಾಗ ಮಾಲೂ ಖಾನರೇ ಇಲ್ಲಿರುವುದು ಒಳ್ಳೇದಾಯಿತು. ನೀವು ಬರುವಾಗ ನಿಮಗೆ ತಕ್ಕ ಸಹಾಯಕ ಸೈನ್ಯವನ್ನೊದಗಿಸಿ ಸಿದ್ಧಮಾಡಿಟ್ಟಿರುವುದು ನನ್ನ ಭಾರ. ಮಿತ್ರರೆ, ಕನ್ಯೆ ಹೆಚ್ಚಿಗೆ ಏನೂ ಹಟ ಮಾಡಲಾರಳಷ್ಟೆ?"

"ಸಣ್ಣ ಹುಡುಗಿಯಲ್ಲವೇ ಖಾನ್‌ಸಾಹೇಬ್? ಹೊಸ ಸ್ಥಳ, ಹೊಸ ಆಚಾರ ವಿಚಾರಗಳ ಜನರು, ಆದ್ದರಿಂದ ಮೊದಲು ಸ್ವಲ್ಪ ಸಂಕಟವೇ ಪಟ್ಟಾಳು. ಹೆಣ್ಣು ಮಕ್ಕಳ ಗತಿ ಅಷ್ಟೇ ತಾನೇ? ಇಲ್ಲಿ ಮೊದಲು ಅವಳಿಗೆ ಹಿಂದೂ ಆಚಾರ-ವ್ಯವಹಾರಗಳನ್ನೇ ನಡೆಯ ಗೊಡಿಸಬೇಕು. ಅವಳಿಗೆ ಹಿಂದೂ ದಾಸಿಯರನ್ನೇ ನಿಯಮಿಸಬೇಕು. ಕ್ರಮೇಣ ಎಲ್ಲಾ ಸರಿಹೋಗುತ್ತೆ. ಆಮೇಲೆ ಉಪಾಯದಿಂದ ವೀರ

ರುದ್ರರ ಅನುಮತಿಯನ್ನು ದೊರಕಿಸಿಕೊಂಡು ವಿವಾಹವನ್ನು ನೆರವೇರಿಸಬಹುದು."

"ಹೌದು ಹೌದು. ಷಹಾಜಾದಾರಿಗೆ ವಿವಾಹಕ್ಕೇನೂ ಅವಸರವಿಲ್ಲ. ನಿಮ್ಮ ಯುದ್ಧ ಪ್ರಕರಣವೆಲ್ಲಾ ಮುಗಿದ ನಂತರ ನಿಮ್ಮೆಲ್ಲರ ಸಮ್ಮುಖದಲ್ಲಿಯೇ ವಿವಾಹವಾದೀತು. ನಾನು ಈಗಲೇ ವಿಜಾಪುರಕ್ಕೆ ಈ ವಿಚಾರವನ್ನೆಲ್ಲಾ ಬರೆದು ಕಳಿಸಿ, ಸಹಾಯಕ ಸೇನೆಯನ್ನು ಬರಮಾಡಿಕೊಳ್ಳುವೆನು."

ಹೀಗೆ ಅವರು ಮಾತಾಡಿಕೊಳ್ಳುತ್ತಿರುವಾಗ, ಯವನ ಸಿಪಾಯಿಯೊಬ್ಬನು, ಬಹಳವಾಗಿ ತೇಕುತ್ತಾ ಅಲ್ಲಿಗೆ ಬಂದು ತೋಪಲ್‌ಖಾನನಿಗೆ ಸಲಾಮು ಮಾಡಿ ಉಬ್ಬಸ ಬಡಲಾರಂಭಿಸಿದನು.

"ಕ್ಯಾರೇ ಅಜಾದ್, ಇಷ್ಟು ಗಡಿಬಿಡಿ?" ತೋಪಲ್ ಖಾನನು ಆ ಸಿಪಾಯಿಯನ್ನು ಆಶ್ಚರ್ಯದಿಂದ ನೋಡುತ್ತಾ ಕೇಳಿದನು.

ಅಜಾದನು ರಾಮಯಾಮಾತ್ಯನ ಮುಂದೆ ಹೇಳಲು ತಯಂಗುವುದನ್ನರಿತು, "ಹೇಳೋ ಅಜಾದ್. ಇವರು ನಮ್ಮವರೆ" ಎಂದು ತೋಪಲ್‌ಖಾನನ ಅಭಯಾನುಮತಿಯಾದ ಮೇಲೆ, ಅಜಾದನೆಂದ:

"ಖುದಾನ ಕೃಪೆಯಿಂದಲೇ ನಾನು ಪಾರಾಗಿ ಬಂದೆ."

"ಏನಾಯಿತು?" ತೋಪಲ್‌ಖಾನನು ಕೇಳಿದನು.

"ನಾನು ತಿಪ್ಪಾಂಬೆಯೊಂದಿಗೆ ಮಾತಾಡುತ್ತಾ ಇದ್ದೆ. ನಾವು ಹೇಳಿದ್ದಕ್ಕೆಲ್ಲಾ ಅವಳು ಒಪ್ಪಿದಳು. ನಾಲ್ಕೈದು ದಿನದಲ್ಲಿ ಕನ್ಯೆಯನ್ನು ನಮ್ಮ ಸ್ವಾಧೀನಪಡಿಸುವುದಾಗಿಯೂ ಹೇಳಿದಳು. ತನ್ನ ಜವಾಬುದಾರಿಕೆಯನ್ನು ಪತ್ರದಲ್ಲಿ ಬರೆದುಕೊಟ್ಟಳು. ಅಷ್ಟರಲ್ಲಿ ನಮ್ಮ ರಹಸ್ಯವನ್ನು ಯಾವ ಮಾಯೆಯಿಂದಲೋ ತಿಳಿದು, ನಾಗಲಾದೇವಿ ಸಿಪಾಯಿಗಳೊಂದಿಗೆ ಧುಡುಮ್ಮನೆ ಒಳಗೆ ಬಂದು, ನನ್ನ ಕೈಯಲ್ಲಿದ್ದ ಪತ್ರವನ್ನು ಕಸಿದುಕೊಂಡು, ನನ್ನನ್ನು ಸಿಪಾಯಿಗಳ ವಶಮಾಡಿ ಹೊರಗೆ ಕಳುಹಿಸಿಬಿಟ್ಟಳು."

"ಅರರೆ! ಮೋಸವಾಯಿತಲ್ಲ! ನಮ್ಮ ರಹಸ್ಯವೆಲ್ಲಾ" ಎಂದನು ತೋಪಲ್‌ಖಾನ್.

"ಇಲ್ಲಯಿಲ್ಲ. ಖುದಾನು ಕಾಪಾಡಿದ. ಭಲೇ ಅದ್ಭುತ. ನಾನು ಸಿಪಾಯಿಗಳ ಸ್ವಾಧೀನನಾಗಿ ಹೊರಗೆ ಹೋದಮೇಲೆ, ಆ ಕೋಣೆ ಯೊಳಗೆ ತಿಪ್ಪಾಂಬೆ, ನಾಗಾಂಬೆ, ನಾಗಾಂಬೆಯ ದಾಸಿ ಇಷ್ಟೇ ಜನರಿದ್ದರು. ಸ್ವಲ್ಪಹೊತ್ತಿನಲ್ಲಿಯೇ ಆ ಕೋಣೆಯಿಂದ ಕೆಟ್ಟ ಆರ್ತನಾದವು ಕೇಳಿಬಂತು. ಮತ್ತೆ ಇನ್ನೊಂದು ಆರ್ತನಾದವು ಕೇಳಿಸಿತು. ತಿಪ್ಪಾಂಬೆ ಕೂಗಿಕೂಗಿ ಸಿಪಾಯಿಗಳನ್ನು ಕರೆದಳು. ಓಡಿದರು ಸಿಪಾಯಿಗಳು ಒಳಗೆ. 'ಅವಳನ್ನು ಹಿಡಿಯಿರಿ. ಬಂಧಿಸಿರಿ' ಎಂದು ತಿಪ್ಪಾಂಬೆ ಆಜ್ಞೆ ಮಾಡಿದಳು. ಬಳಿಕ 'ಆ ಯವನ ಸಿಪಾಯಿಯನ್ನು ಇತ್ತ ತನ್ನಿ.' ಎಂದು ನನ್ನನ್ನು ಒಳಗೆ ಕರೆಯಿಸಿದಳು. ಆಃ! ಏನು ಭಯಂಕರ! ಬಾಗಿಲ ಬಳಿಯಲ್ಲಿಯೇ ನಾಗಲಾದೇವಿಯ ದಾಸಿ ಖೂನಾಗಿ ಬಿದ್ದಿದ್ದಳು. ಕತ್ತಿಯೊಂದು ಅವಳ ಬೆನ್ನಿನಲ್ಲಿ ಹೊಕ್ಕು ಹೊಟ್ಟೆಯಲ್ಲಿ ಹೊರಗೆ ಬಂದಿತ್ತು. ಒಳಗೆ ನಾಗಲಾದೇವಿಯೂ ಸಾಯುತ್ತಿದ್ದಳು. ಅವಳ ಎದೆಯೊಳಗೂ ಒಂದು ಕಠಾರಿ!"

ತೋಪಲ್ ಖಾನನೂ ರಾಮಯಾಮಾತ್ಯನೂ "ಆಹಾ! ನಾಗಲಾದೇವಿಯೂ ಕೊಲೆಯಾದಳೆ?" ಎಂದು ಚಕಿತರಾದರು.

"ಹೌದು. ಆ ತಿಪ್ಪಾಂಬೆಯ ಯುಕ್ತಿಯೇ ಯುಕ್ತಿ! ಏನೋ ನನ್ನನ್ನು ದೊಡ್ಡ ಬಂದೀಖಾನೆಗೆ ಹಾಕುವ ಹಾಗೆ 'ಈ ಯವನ ಸಿಪಾಯಿಯನ್ನು ಆ ಕೋಣೆಗೆ ತಳ್ಳಿರಿ' ಎಂದು ಆಜ್ಞೆ ಮಾಡಿ, ನನ್ನನ್ನು ಸುರಂಗದ ನೆಲಮನೆಗೇ ದಬ್ಬಿಸಿದಳು. ಅಬ್ಬಾ! ಭಲೇ ಮುದುಕಿ!"

"ಆ ಪತ್ರ?" ಎಂದನು ತೋಪಲ್ ಖಾನ್.

"ಅದು ತಿಪ್ಪಾಂಬೆಯ ಕೈಯಲ್ಲಿತ್ತು, ಖಾವಂದ್. ನಾನು ಕೂಡಲೇ ಓಡಿಬಾರದೆ ಸ್ವಲ್ಪಹೊತ್ತು ಅಲ್ಲಿಯೇ ಅಡಗಿದ್ದು ನೋಡಿದೆ. ಆಶ್ಚರ್ಯದ ಮೇಲೆ ಆಶ್ಚರ್ಯ! ಕೊಲೆಗಾರಿಣಿಯಾಗಿ ಸಿಕ್ಕಿಬಿದ್ದವಳು ಯಾವಳೋ ಇನ್ನೊಬ್ಬಳು ಹೆಂಗಸು."

"ಅದು ಯಾರು? ಅದು ಹೇಗೆ?"

"ಹೇಗೊ? ಯಾರೋ? ಬಲು ತೇಜಸ್ವಿನಿ! ಎಲ್ಲಿಂದ ಹೇಗೆ ಬಂದಳೋ ಅಲ್ಲಾಗೇ ಅರಿಕೆ! ತಿಪ್ಪಾಂಬೆ ಅವಳನ್ನೇ ಕೊಲೆಗಾರಿಣಿ

ಯೆಂದು ಸಿಪಾಯಿಗಳಿಂದ ಹಿಡಿಸಿದಳು. ಅವಳಾದರೂ ಕಿಂಕಂ ಎನ್ನದೆ ಸಿಕ್ಕಿಬಿದ್ದಳು. ತಿಪ್ಪಾಂಬೆ ಸ್ವಂತವಾಗಿ ಅವಳ ಮೈಯನ್ನು ಝಡತಿ ಮಾಡಿದಳು. ಆಗ ಅವಳ ಸೀರೆಯ ಮರೆಯಲ್ಲಿ ಒಂದು ಕತ್ತಿಯೂ, ಬೆರಳಿನಲ್ಲಿ ವಿಜಯನಗರದ ರಾಜಮುದ್ರೆಯ ಒಂದು ಉಂಗುರವೂ ಸಿಕ್ಕಿದುವು!"

"ಏನೇನು? ವಿಜಯನಗರದ ರಾಜಮುದ್ರೆಯೆ?" ಎಂದು ರಾಮಯಾಮಾತ್ಯನು ಆಶ್ಚರ್ಯದಿಂದ ಉದ್ಗರಿಸಿದನು.

"ಹೌದು, ತಿಪ್ಪಾಂಬೆ ಆ ಉಂಗುರವನ್ನು ನೋಡಿ 'ವಿಜಯ ನಗರದ ರಾಜ ಮುದ್ರೆಯ ಈ ಉಂಗುರ ಇವಳ ಕೈಗೆ ಹೇಗೆ ಬಂತು?' ಎಂದು ಹೇಳಿಕೊಂಡದ್ದು ನಾನು ಕಿವಿಯಾರೆ ಕೇಳಿದೆ."

"ಅವಳು ಯಾರೆಂದು ನಿಮಗೆ ಗೊತ್ತೇ ರಾಮಯಾಮಾತ್ಯರೆ?" ಎಂದು ತೋಪಲ್‌ಖಾನನು ಕೇಳಿದನು.

"ಈಗ ಗೊತ್ತಾಯಿತು. ಸುಪ್ರಸಿದ್ಧಳಾದ 'ಅಜ್ಞಾತಾ' ಎಂಬ ಆ ಚೋರನಾಯಕಿ ವಿಜಯನಗರದ ರಾಜಮುದ್ರೆಯ ಉಂಗುರವನ್ನು ಕದ್ದಿರುವಳೆಂದು ನಾನು ಕೇಳಿದ್ದೆ."

"ಆ ಚೋರನಾಯಕಿ ಪಾತಪಲ್ಲಿಯಲ್ಲಿ ನಿಮ್ಮೊಂದಿಗೆ ಇದ್ದಳಲ್ಲಾ? ಹೇಗೆ ತಪ್ಪಿಸಿಕೊಂಡಳು, ನಿಮ್ಮ ಕೈಯಿಂದ?"

"ನಾನೇ ಅವಳನ್ನು ಬಿಟ್ಟೆ—ಒಂದು ಕಾರ್ಯಕ್ಕಾಗಿ. ಆಹಾ! ಅವಳ ವಿಧಿ ಅವಳನ್ನು ವಿಜಯನಗರದ ಕಾರಾಗೃಹಕ್ಕೆ ಸೇರಿಸಿಬಿಟ್ಟಿತೆ?" ರಾಮಯಾಮಾತ್ಯನೆಂದನು.

ತೋಪಲ್‌ಖಾನನು "ಒಳ್ಳೇ ಮೋಜು! ಸೂಳೆಯ ಪಾಪ ಸಂನ್ಯಾಸಿಗೆ ಬಡೆದ ಹಾಗಾಯಿತು!" ಎಂದನು.

"ಅಲ್ಲಲ್ಲ. ಸೂಳೆಯ ಪಾಪ ಅವಳ ದಾಸಿಗೇ ಬಡೆಯಿತೆನ್ನಿ. ಆ ಚೋರನಾಯಕಿ ಸಿಕ್ಕಿಬಿದ್ದದ್ದು ಲೋಕಕ್ಕೇ ಕ್ಷೇಮ" ಎಂದನು ರಾಮಯಾಮಾತ್ಯ.

"ಅವಳು ಅಲ್ಲಿಗೆ ಹೇಗೆ ಬಂದಳೊ?" ಎಂದನು ತೋಪಲಖಾನ್.

"ಅದೇ ಆಶ್ಚರ್ಯವಾಗಿದೆ ನನಗೂ" ಎಂದನು ಅಜಾದ್.

ರಾಮಯಾಮಾತ್ಯ "ಕೃಷ್ಣದೇವರಾಯನು ತನ್ನ ಶತ್ರುವೆಂದು ಹೇಳಿಕೊಂಡಿದ್ದಳು. ತಿಪ್ಪಾಂಬೆಯೂ ರಾಯನಿಗೆ ಶತ್ರುವೇ ಆದ್ದರಿಂದ ಅವಳೊಂದಿಗೆ ಸೇರಿಕೊಂಡು ಏನೋ ಒಳಸಂಚು ಮಾಡಲಿಕ್ಕೆ ಅಲ್ಲಿಗೆ ಬಂದಿರಬಹುದು" ಎಂದನು.

"ನಿಜವಾಗಿ ಖೂನಿಮಾಡಿದ್ದು ಯಾರೊ?" ತೋಪಲಖಾನನೆಂದನು.

"ಯಾರೊ?" ಎಂದನು ಅಜಾದ್.

"ತಿಪ್ಪಾಂಬೆಯೇ ಇದ್ದೀತು. ನಿಮ್ಮ ಸುರಂಗಮಾರ್ಗದಿಂದಲೇ ಆ ಚೋರನಾಯಕಿ ಅಲ್ಲಿಗೆ ಬಂದಿರಬಹುದು" ರಾಮಯಾಮಾತ್ಯನೆಂದ.

"ಏನೋ ಹಾಳಾಗಲಿ ರಾಮಯಾಮಾತ್ಯರೆ, ಹೇಗೂ ಈಗ ನಿಜವಾದ ಮುಕ್ತಾಕುಮಾರಿ ವಿಜಯನಗರದಲ್ಲಿಲ್ಲನಷ್ಟೆ? ಆದ್ದರಿಂದ ಪ್ರಕೃತ ವಿಜಯನಗರದ ಆಕ್ರಮಣವನ್ನು ಬದಿಗಿರಿಸಿ, ನಮ್ಮ ಕಾರ್ಯವನ್ನು ಮುಂದುವರಿಸಬಹುದಷ್ಟೆ?" ಎಂದನು ತೋಪಲ್‌ಖಾನ್.

"ಆದರೆ ತೋಪಲ್‌ಖಾನ್, ನಾಗಲಾದೇವಿಯ ಮರಣದಿಂದ ರಾಯನ ಯುದ್ಧದ ಮುಖವು ತಿರುಗಬಹುದೆಂದು ಭಾವಿಸುವೆನು" ಎಂದನು ರಾಮಯಾಮಾತ್ಯ.

"ಅಂದರೆ ಈಗ ನೀವು ಒಪ್ಪಿಕೊಂಡ ಮಾತಿಗೆ ಹಿಂದೆಗೆಯುವಿರೆಂದು ಅರ್ಥವೊ?" ಎಂದು ತೋಪಲ್‌ಖಾನನು ಕೇಳಿದನು.

"ಛೆ ಛೆ, ಅದನ್ನು ನೆರವೇರಿಸಲೇಬೇಕು. ಮಾತೃವಿಯೋಗದಿಂದ ರಾಯನು ಒಂದುವೇಳೆ ಯುದ್ಧದಿಂದ ಪರಾಙ್ಮುಖನಾದರೂ, ಬೇಗನೇ ಮತ್ತೆ ದಂಡೆತ್ತಿಕೊಂಡು ಬರಲಿಕ್ಕಿಲ್ಲವೆಂದು ಹೇಳುವುದೆಂತು? ಆಗಾದರೂ ನಿಮ್ಮ ಸಹಾಯವು ನಮಗೆ ಅಗತ್ಯವಲ್ಲವೆ? ಈಗ ಮಾತ್ರ ಅವಸರದಿಂದ ಚಡಪಡಿಸಬೇಕಾಗಿಲ್ಲವೆಂದಷ್ಟೇ ನನ್ನ ಅಭಿಪ್ರಾಯ. ವಿಶೇಷವಿದ್ದರೆ ಒಡನೆಯೇ ಇಲ್ಲಿಗೆ ಸುದ್ದಿ ಬಂದೀತು" ರಾಮಯಾಮಾತ್ಯನೆಂದನು.

"ಶತ್ರುವಿಗುಂಟಾದ ಈ ಶೋಕ ಸಂದರ್ಭವು ನಮ್ಮ ವಿಜಯಕ್ಕೆ ಅನುಕೂಲವೇ ಆಯಿತು. ಮಿತ್ರರೇ, ನೀವು ಶೀಘ್ರವೇ ಹೋಗಿ ಕನ್ಸ

ಯೊಂದಿಗೆ ಬನ್ನಿರಿ. ನಾನೆಲ್ಲಾ ಸುಲ್ತಾನರಿಗೆ ಅರಿಕೆ ಮಾಡುತ್ತೇನೆ."

ಹೀಗೆ ಮಾತುಕತೆಯಾದ ಮೇಲೆ, ತೋಪಲಖಾನನು ಜತೆ ಗೂಡಿಸಿಕೊಟ್ಟ ಕೆಲವು ಮಂದಿ ಸೇವಕರೊಂದಿಗೆ, ಚತುರ-ರಂಗರನ್ನು ಮುಂದಿಟ್ಟುಕೊಂಡು ರಾಮಯಾಮಾತ್ಯನು ಅಲ್ಲಿಂದ ಹೊರಟನು. ಕಟಕಪುರದಲ್ಲಿ ನಡೆದ ರುಚೀಹರಣವೇ ಮೊದಲಾದ ಹೊಸ ಸಂಗತಿ ಗಳು ಇನ್ನೂ ರಾಮಯಾಮಾತ್ಯನಿಗೆ ತಿಳಿಯದು. ಆ ಚೋರನಾಯಕಿ ವಿಜಯನಗರದಲ್ಲಿ ಸಿಕ್ಕಿ ಬಿದ್ದಿರುವ ಈ ಸಂದರ್ಭವು ತನ್ನ ಈ ಕೃತ್ರಿಮ ಕಾರ್ಯಕ್ಕೆ ಅನುಕೂಲವಾಯಿತೆಂದು ಅವನು ಸಂತೋಷಪಡು ತ್ತಿದ್ದನು.

## ೧೦

ಪ್ರಾಚೀನಕಾಲದ ಪ್ರಸಿದ್ಧ ರಾಜಧಾನಿಯಾಗಿ ಮೆರೆದ ಆನೆಗೊಂದಿ ಕ್ರಿ. ಪೂ. ೧೩೩೩ ರಲ್ಲಿ ಮಹಮದ್ ಬಿನ್ ತೊಗ್ಲಖನಿಂದ ಪತನ ಹೊಂದಿತು. ಅದೇ ಸಮಯದಲ್ಲಿ ವಿದ್ಯಾರಣ್ಯಸ್ವಾಮಿಗಳ ತಪಸ್ಸಾಧನೆಯ ಫಲದಿಂದ ಅದರ ನೆರೆಯಲ್ಲಿಯೇ ವಿಜಯ ಅಥವಾ ವಿದ್ಯಾನಗರವು ಸ್ಥಾಪಿಸಲ್ಪಟ್ಟಿತು. ಆಮೇಲೆ ಪಾಳುಬಿದ್ದ ಆನೆಗೊಂದಿಯನ್ನು ವಿದ್ಯಾನಗರದ ರಾಯರು ಪುನರುದ್ಧಾರ ಮಾಡಿಸಿ, ಕೋಟೆ, ಕೊತ್ತಳ, ದುರ್ಗ, ಭವನಾದಿಗಳಿಂದ ಬಹು ಭದ್ರವಾದ ದೊಡ್ಡ ಬಂದೀಖಾನೆಯನ್ನಾಗಿ ಏರ್ಪಡಿಸಿದರು. ರಾಜಕೀಯ ಖೈದಿಗಳನ್ನು ಅಲ್ಲಿಯೇ ಇಡುತ್ತಿದ್ದರು. ಉದಯಗಿರಿಯ ರಾಣಿಯೂ, ಮುಕ್ತಾಕುಮಾರಿಯೂ, ಪ್ರತಾಪರುದ್ರನ ಕುಮಾರನೂ ಅಲ್ಲಿಯೇ ಬಂದಿಗಳಾಗಿದ್ದರು. ಬಂದಿಗಳು ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲದಂತೆ, ದೊಡ್ಡದೊಡ್ಡ ಬೆಟ್ಟಗಳಿಗೆ ಬಂಧಿಸಿಕೊಂಡು ಅತ್ಯುನ್ನತವಾದ ಪ್ರಹರಿಗಳು ಸುತ್ತುವರಿದಿದ್ದುವು. ಅಗಣಿತರಾದ ಶಸ್ತ್ರಧಾರೀ ರಕ್ಷಕಭಟರು ಸರ್ವದಾ ದಕ್ಷರಾಗಿದ್ದರು. ಈ ಆನೆಗೊಂದಿ–ವಿಜಯನಗರಗಳನ್ನು ವಿಭಜಿಸಿಕೊಂಡು, ಪುಣ್ಯವಾಹಿನಿಯಾದ ತುಂಗಭದ್ರೆ ಪ್ರವಹಿಸುತ್ತಿದ್ದಳು.

ಆ ವಿಶಾಲವಾದ ಬಂದೀಖಾನೆಗಳ ಮಧ್ಯದಲ್ಲೊಂದು ಪ್ರತ್ಯೇಕವಾದ ಕೊಠಡಿಯೊಳಗೆ ಅಜ್ಞಾತಾದೇವಿ ಬಂದಿನಿಯಾಗಿ ಕುಳಿತಿದ್ದಳು.

ಅವಳ ಕೋಮಲವಾದ ಕೈಕಾಲುಗಳಲ್ಲಿ ಕಠಿನವಾದ ಶೃಂಖಲೆಗಳು ನೇತಾಡುತ್ತಿದ್ದುವು. ಕೃಷ್ಣಪಕ್ಷದ ಸಪ್ತಮಿಯ ಚಂದ್ರನು, ಬಂದೀ ಖಾನೆಯ ಕಂಬಿಗಳೆಡೆಯಿಂದ ಅಮೃತ ಕಿರಣಗಳನ್ನು ಹೋಗಿಸಿ ಅವಳ ಸುವರ್ಣಾಂಗದ ಮೇಲೆ ಲೇಪಿಸಿಕೊಂಡಿದ್ದನು.

ಅವಳು ರಾಜಮಾತೆಯ ಕೊಲೆ ಮಾಡಿದಳೆಂಬ ಆಪಾದನೆಗೆ ಗುರಿಯಾಗಿದ್ದರೂ, ಅವಳ ಮುಖದಲ್ಲಿ ಕಾಣುವ ಸಾತ್ವಿಕ ಕಳೆಯ ಮಹಿಮೆಯಿಂದಲೋ ಏನೋ, ಅಚ್ಯುತರಾಯನು ಆ ಸುಕುಮಾರ ದೇವೀ ಮೂರ್ತಿಯನ್ನು ತೀರ ಕತ್ತಲೆಯಲ್ಲಿ ಕೆಡವುವಷ್ಟು ಕಾಠಿಣ್ಯ ವನ್ನು ತೋರಿರಲಿಲ್ಲ. ಅವಳು ಸಾದಾ ನೋಟದಿಂದ ನೀರಸ ಭಾವ ದಿಂದ ಆ ಛಿದ್ರ ಚಂದ್ರನನ್ನೇ ನೋಡುತ್ತಿದ್ದಳು. ಮನಸ್ಸಿನಲ್ಲಿ ಏನೋ ವಿಚಾರಗಳು ಹರಿದಾಡುತ್ತಿರಬೇಕು.

ಇಬ್ಬರು ಬಿಚ್ಚುಗತ್ತಿಯ ಕಾವಲುಗಾರರು ಅವಳನ್ನು ಎಚ್ಚರ ದಿಂದ ಕಾಯುತ್ತಿದ್ದರು. ಈಗ ಬಂದವರಲ್ಲಿ ಒಬ್ಬನು ನಡುವಯಸ್ಸಿ ನವನು; ಇನ್ನೊಬ್ಬನು ಮುದುಕ. ಮುದುಕನು ಸ್ವಲ್ಪಹೊತ್ತು ನಿಂತಿದ್ದು ಬಳಿಕ ದಂಡೆಯಮೇಲೆ ಕುಳಿತನು. ಚಳಿಯಾದ ತೂಕಡಿಕೆಯ ಗಾಳಿ ಬೀಸಲಾರಂಭಿಸಿತ್ತು. ಇದರಿಂದ ಆ ವಯೋಧಿಕನು ಆಗಾಗ ತೂಕಡಿಸಿ ಬೀಳಲಾರಂಭಿಸಿದ್ದನು. ಇದನ್ನು ಕಂಡು ಕರುಣಾಳುವಾದ ಆ ನಡುವಯಸ್ಸಿನವನು “ನಿದ್ದೆ ಬಂದರೆ ಅಕೋ ಆ ಜಗಲೀ ಮೇಲೆ ಹೋಗಿ ಮಲಗೋಯ್ಯಾ. ನಾನೊಬ್ಬ ಇದ್ದೇನಲ್ಲಾ ಕಲ್ಲಗುಂಡು ಇದ್ದಾಂಗೆ” ಎಂದನು. ನಿನ್ನೆಯೂ ಅವನು ಹೀಗೆಯೇ ಹೇಳಿದುದಕ್ಕೆ ಆ ಹಳಬನು ಭಯ ದಾಕ್ಷಿಣ್ಯಗಳಿಂದ ಮಲಗಿರಲಿಲ್ಲ. ಇಂದು ಹಾಗೇ ನಿಲ್ಲದೆ “ನಿನ್ನ ದಯ ಮಾರಾಯಾ” ಎಂದಂದು ಅನತಿ ದೂರದಲ್ಲಿರುವ ಒಂದು ಜಗಲಿಯಲ್ಲಿ ಬಿದ್ದುಕೊಂಡನು.

ಆ ನಡುವಯಸ್ಸಿನ ಕಾವಲುಗಾರನಿಗೆ ಆ ಬಂದಿನಿಯನ್ನು ಮಾತಾಡಿಸಬೇಕೆಂದು ಬಹಳ ಕೌತುಕವಿದ್ದಂತೆ ತೋರುತ್ತಿತ್ತು. ಅವಳ ಉತ್ತಮವಾದ ಲಕ್ಷಣಸಂಪನ್ನವಾದ ತೇಜೋವದನವನ್ನು ನೋಡಿ ನೋಡಿದಂತೆ, ಅವನ ಹೃದಯವೇನೋ ಸಂಕಟಪಡಲಾರಂಭಿಸಿತ್ತು.

ಕೃಷ್ಣದೇವರಾಯನು ಅತ್ಯಂತ ಮಾತೃಭಕ್ತನು. ಆ ಭಕ್ತಿಮೂಢತ್ವ ದಿಂದ ಇವಳು ತನ್ನ ಮಾತೃದೈವವನ್ನೆ ಕೊಲೆ ಮಾಡಿದಳೆಂದು ನಂಬಿ, ಆ ರಾಯನು ಇವಳಿಗೆ ಎಂತಹ ಘೋರಶಿಕ್ಷೆಯನ್ನು ವಿಧಿಸುವನೋ! ಇದನ್ನು ನೆನೆಯುವಾಗ ಅವನಿಗೆ ಭಯವಾಗುತ್ತಿತ್ತು. ಅವನು ಕೆಲವು ದಿನಗಳಿಂದ ಅವಳ ಮುಖಭಾವಗಳನ್ನು ಸುಮ್ಮನೆ ಗಮನಿಸಿಕೊಂಡೇ ಬಂದಿದ್ದನು. ಬರುಬರುತ್ತ ಅವಳ ಮೇಲೆ ಅವನಿಗೆ ಒಂದು ಬಗೆಯ ಪೂಜ್ಯಬುದ್ಧಿ ವೃದ್ಧಿಯಾಗುತ್ತಿತ್ತು. ಅವಳಿಗಾದರೂ ಹಾಗೆಯೇ ಆಗುತ್ತಿರಬೇಕು. ಅವಳೂ ಆ ನಡುವಯಸ್ಸಿನ ಪಹರೆಯವನನ್ನು ಆಗಾಗ ನೋಡುತ್ತಿದ್ದಳು. ಅವನು ನೋಡುತ್ತಿರುವುದರಿಂದ, ಅದೇಕೆಂದು ಅರಿಯಲಿಕ್ಕಾಗಿ ಅವಳೂ ನೋಡಿದಳು. ಅವನ ಭಾವ-ಲಕ್ಷಣಾದಿಗಳನ್ನು ಗ್ರಹಿಸಿಕೊಂಡಂತೆ ಅವಳಿಗೂ ಹೃದಯದೊಳಗೆ ಅವನ ಮೇಲೆ ಏನೋ ವಿಶ್ವಾಸವು ಹುಟ್ಟಲಾರಂಭಿಸಿತ್ತು. ಹೃದಯ-ಹೃದಯಗಳ ಸಂಬಂಧಿಕ ವ್ಯಾಪಾರವೆಂದರೆ ಹೀಗೆಯೇ ಇರಬೇಕು ಈ ಕಾವಲುಗಾರನಿಂದ ಮಾತ್ರ ತನಗೇನಾದರೂ ಸಹಾಯವಾದರೆ ಆಗಬೇಕು, ಎಂದು ಅವಳ ಮನೋದೇವತೆಗೆ ತೋರುತ್ತಿತ್ತು. ಅವನು ನಿಜವಾಗಿಯೂ ಕಾವಲುಗಾರನೆ? ಅವನು ಅವಳ ಕಾವಲಿಗೆ ಬರಲಾರಂಭಿಸಿ ಕೇವಲ ಐದು ದಿನಗಳು ಮಾತ್ರವೇ ಆಗಿದ್ದುವು. ಆತನ ದೃಢವಾದ ಸುಂದರಗಾತ್ರ, ಅದರಲ್ಲಿ ಕಾಣುವ ಭೀಷ್ಮ ಬ್ರಹ್ಮಚರ್ಯದ ಕಳೆ, ಆ ದಪ್ಪ ಮೀಸೆಯ ಗಂಭೀರ ಮುಖಭಾವದಲ್ಲಿ ತೇಲಾಡುತ್ತಿರುವ ಸಾರಳ್ಯ ಭಾವ ಇವನ್ನೆಲ್ಲಾ ಮನಗಂಡರೆ, ಯಾವುದೋ ಉಚ್ಚಾಧಿಕಾರ ದಲ್ಲಿ ಮೆರೆಯಬೇಕಾದ ಅವನಿಗೆ, ಈ ದರಿದ್ರ ಬಂದೀಕಾವಲಿನ ಕೆಲಸವು ಯಾಕೆ ಬಂತಪ್ಪಾ ಎನಿಸುತ್ತಿತ್ತು. ಅಂತೂ ಅವರಿಬ್ಬರ ಹೃದಯಗಳು ಸಮ-ಸಮಾಪಿಸುತ್ತ ಮಾತಾಡಲು ತವಕಿಸಿಕೊಂಡಿದ್ದರೂ, ತಕ್ಕ ಸಮಯವು ದೊರೆತಿರಲಿಲ್ಲ.

* * *

ಅಂದು ಪಾತಪಲ್ಲಿಯಲ್ಲಿ ರಾಮಯ್ಯನ ಬಳಿಯಿಂದ ಹೊರಟು ಹೋದ ಅಜ್ಞಾತಾದೇವಿ ಈ ಬಗೆಯಾಗಿ ಸಿಕ್ಕಿಬಿದ್ದುದು ವಿಚಿತ್ರ. ಅಂದು

ಮಾದರಸನನ್ನು ರಾಮಯಾಮಾತ್ಯನ ಜತೆಯಲ್ಲಿ ಕಟಕಪುರಿಗೆ ಕಳುಹಿಸಿ ಹೊರಟ ಅಜ್ಞಾತಾ ಅಲ್ಲಿ ಕೆರೆಯ ಬದಿಯಲ್ಲಿ ತೋಪಲ್ ಖಾನನೂ ರಾಮಯಾಮಾತ್ಯನೂ ಮಾತಾಡಿಕೊಂಡುದನ್ನು ಕೇಳಿದು ದರಿಂದ ಹೊಸಹೊಸ ರಹಸ್ಯಗಳನ್ನು ಅರಿತು, ಇನ್ನೂ ಕೆಲವು ಮುಖ್ಯ ರಹಸ್ಯಗಳನ್ನು ಅರಿತುಕೊಳ್ಳಲಿಕ್ಕಾಗಿಯೇ ಹುಲ್ಲಿನವಳ ವೇಷ ದಿಂದ ಉದಯಗಿರಿಗೆ ಬಂದಿದ್ದಳು. ಆದರೂ ಮುಂದಾಲೋಚನೆ ಮಾಡಿಕೊಂಡು, ವೀರರುದ್ರ-ಗಜಪತಿಗಳಿಂದ, ಪ್ರತಾಪರುದ್ರರಿಗೊಂದು ಪತ್ರವನ್ನೂ, ಪ್ರಯಾಣದ ಅನೇಕ ಚೀಟುಗಳನ್ನೂ ಪಡೆದುಕೊಂಡು, ಅನೇಕ ಮಂದಿ ವೀರಬಂಧುಗಳೊಂದಿಗೆ ಬಂದಿದ್ದಳು. ಅಕಸ್ಮಾತ್ತಾಗಿ ರಾಮಯಾಮಾತ್ಯನ ದರ್ಶನವಾದುದರಿಂದ, ಉದಯಗಿರಿಯ ಕಾರ್ಯವು ಸುಲಭವಲ್ಲಿ ಮುಗಿದುದಲ್ಲದೆ, ಕರೆದುಕೊಂಡು ಬಂದ ವೀರಬಂಧು ಗಳಿಂದ ಉಪಯೋಗವಾಗುವ ಹಾಗೂ ಆಯಿತು. ಪಾತಪಲ್ಲಿಯಿಂದ ಹೊರಟವಳು, ಉದಯಗಿರಿಯ ಬೆಟ್ಟಗಳ ಮರೆಯಲ್ಲಿ ಅಡಗಿದ್ದ ತನ್ನ ವೀರಬಂಧುಗಳ ಬಳಿಗೆ ಹಿಂದಿರುಗಿ, ಮಾರಪ್ಪನೆಂಬ ಮುಖಂಡ ನೊಂದಿಗೆ, ಈ ಮೊದಲೇ ತಯಾರಿಸಿದ್ದ ವೀರರುದ್ರರ ಪತ್ರವನ್ನು ಕೊಟ್ಟು, ಇನ್ನೂರು ಮಂದಿಯೊಡನೆ ಹೋಗಿ ರುಚೀದೇವಿಯನ್ನು ಅಪಹರಣ ಮಾಡಿಕೊಂಡು ಬರುವಂತೆ ಹೇಳಿ ಅವನನ್ನು ಕಟಕಪುರಿಗೆ ಕಳುಹಿಸಿದಳು. ಅನಂತರ ಅಲ್ಲಿಂದ ವಿಜಯನಗರದ ಕಡೆಗೆ ಹೊರಟಳು. ತೋಪಲ್ ಖಾನನ ಬಾಯಿಂದ ಹೊರಟ ತಿಪ್ಪಾಂಬೆಯ ವಿಷಯದಲ್ಲಿ ಅವಳಿಗೆ ಸಂಬಂಧಿಸಿದ ಹೊಚ್ಚಹೊಸ ಸಮಾಚಾರವಿತ್ತು. ಅದರಲ್ಲಿ ಅವಳಿಗೆ ಬಹಳ ಆಶ್ಚರ್ಯವೂ, ಸಂದೇಹವೂ, ಸಮಾಧಾನವೂ ಕುತೂಹಲವೂ ಅಡಗಿತ್ತು. ಅದನ್ನು ಚೆನ್ನಾಗಿ ಅರಿತುಕೊಳ್ಳಲಿಕ್ಕಾಗಿ ತಿಪ್ಪಾಂಬೆಯನ್ನು ನೋಡಬೇಕಾಗಿತ್ತು. ಜತೆಯಲ್ಲಿ 'ಮಲ್ಲ'ನೆಂಬ ಚತುರ ಬಂಧುವಿನೊಂದಿಗೆ ತೋಪಲ್ ಖಾನನು ಗುರುತು ಹೇಳಿದ್ದ 'ಜೋಳದ ರಾಶಿ' ಗುಡ್ಡದ ಕಡೆಗೆ ಹೊರಟಳು. ಅಜ್ಞಾತಾ ತಿಪ್ಪಾಂಬೆ ಯನ್ನು ರಹಸ್ಯದಲ್ಲಿ ಸಂಧಿಸಲು, ಅವಳ ಆ ಗುಪ್ತವಾದ ಸುರಂಗ ಮಾರ್ಗವೇ ಬೇಕಾಗಿತ್ತು.

ವಿಜಯನಗರದ ಪಶ್ಚಿಮದಲ್ಲಿ ಜೋಳದರಾಸಿಯಂತೆ ಕಾಣುವ ಬೋಳುಗುಡ್ಡವದು. ಅಜ್ಞಾತೆಯೂ ಮಲ್ಲನೂ ಎರಡು ದಿನ ಅಲ್ಲಿ ಅಲೆದಾಡಿದರೂ ಸುರಂಗದ ಜಾಡೇ ತಿಳಿಯದೆ ಹೋಯಿತು. 'ತಿಪ್ಪಾಂಬೆಯನ್ನು ರಹಸ್ಯದಲ್ಲಿ ಕಾಣಲು ಬೇರೆ ಮಾರ್ಗವಿದೆಯೇ ನೋಡಿ ಬಾ' ಎಂದು ಮಲ್ಲನನ್ನು ವಿಜಯನಗರಕ್ಕೆ ಕಳುಹಿಸಿದಳು. ಆಮೇಲೆ ಆ ಬೋಳುಗುಡ್ಡ ಪ್ರದೇಶದ ಕಡೆಗೇ ಲಕ್ಷ್ಯವಿಟ್ಟು ಅವಳೊಬ್ಬಳೇ ಕಾದಿದ್ದಳು.

ಆಗ ಒಬ್ಬ ಹೊಸ ಯವನ ಸಿಪಾಯಿ ಆ ಗುಡ್ಡದ ಕಡೆಗೆ ನಡೆಯುವುದನ್ನು ನೋಡಿ, ಅವನಿಗೆ ತಿಳಿಯದ ಹಾಗೆ ಅವನ ಹಿಂದೆಯೇ ಹೋದಳು. ಹೊತ್ತು ಮುಳುಗಿ ಇದಿರುಗತ್ತಲೆ ಕವಿಯುತ್ತಿತ್ತು. ಆ ಸಿಪಾಯಿ ಗುಡ್ಡದ ಪಾರ್ಶ್ವದಲ್ಲಿ ದೊಡ್ಡದೊಂದು ಪೊದರಿನೆಡೆಯಲ್ಲಿ ನುಸುಳಿ ಫಕ್ಕನೆ ಮಾಯವಾದನು.

ಕ್ಷತ್ರಿಯ ರಮಣಿಯಾದ ಅಜ್ಞಾತಾ ಕೈಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಧೈರ್ಯದಿಂದ ಆ ಪೊದರಿನ ಬಳಿಗೆ ಹೋಗಿ, ಗಿಡಗಳನ್ನು ಬಿಡಿಬಿಡಿಸಿ ಪರೀಕ್ಷಿಸಿದಾಗ ನಡುವೆ ಒಂದು ಹೊಂಡವಿದ್ದುದು ತೋರಿತು. ಎಚ್ಚರಿಕೆಯಿಂದ ಅದರೊಳಗೆ ಧುಮುಕಿದಳು. ಸುತ್ತೂ ತಡವಿದಾಗ ಕೈಗೊಂದು ಹಿಡಿಕೆ ಸಿಕ್ಕಿತು. ಅದನ್ನೆಳೆಯಲು, ಬಾಗಿಲು ತೆರೆಯಿತು. ಅದರೊಳಗೆ ಬಾಗಿ ನುಸುಳಿ, ಎರಡು ಮೆಟ್ಟಲು ಕೆಳಗಿಳಿದು ಬಾಗಿಲು ಮುಚ್ಚಿದಳು. ಮುಂದೆ ಇದ್ದುದೇ ಅಂಧಕಾರಮಯವಾದ ಸುರಂಗಮಾರ್ಗ. ಕತ್ತಲೆ ಕವಿದ ಆ ಮಾರ್ಗದಲ್ಲಿ, ಕೂರಲಗಿನ ಕತ್ತಿಯನ್ನು ಮುಂದಕ್ಕೆ ನೀಡಿಕೊಂಡು, ಆಡಿಸಿಕೊಳ್ಳುತ್ತಾ ಎಷ್ಟು ಹೊತ್ತು, ಎಷ್ಟು ಮುಂದೆ ಹೋದಳೋ ಏನೋ, ಇಕ್ಕಟ್ಟಾದ ಆ ಮಾರ್ಗವು ಒಂದು ವಿಶಾಲ ಭಾಗಕ್ಕೆ ತಲಪಿಸಿತು. ಅಲ್ಲೊಂದು ಬದಿಯಲ್ಲಿ ಮೇಲಿನಿಂದ ಬರುತ್ತಿರುವ ಪ್ರಕಾಶವು ಬಿದ್ದಿತ್ತು. ಕೆಲವು ಮೆಟ್ಟಲುಗಳೂ ಮಸುಮಸುಕಾಗಿ ತೋರಿದುವು. ಹೆಜ್ಜೆಯಮೇಲೆ ಹೆಜ್ಜೆಯಿಡುತ್ತ ಮೆಟ್ಟಲನ್ನೇರಿದಳು ಅಜ್ಞಾತಾ. ಮೇಲೆ ಬಾಗಿಲು ತೆರೆದುಕೊಂಡೇ ಇತ್ತು. ಇದಿರಿನಲ್ಲಿ ಕಾಣುವ ವಿಶಾಲವಾದ ಕೋಣೆಯೊಳಗೆ, ಕಾಲುದೀವಿಗೆಗಳು

ಜ್ವಲಿಸಿಕೊಂಡಿದ್ದವು. ಅಮೂಲ್ಯವಾದ ರೇಶಿಮೆಯ ಶುಭ್ರವಸನದಿಂದ ವಿಭೂಷಿತೆಯಾದ ವೃದ್ಧೆಯೊಬ್ಬಳು ಸುವರ್ಣಪೀಠದ ಮೇಲೆ ಕುಳಿತು ಕೊಂಡು, ಅದೇ ಯವನ ಸಿಪಾಯಿಯೊಂದಿಗೆ ಮಾತಾಡುತ್ತಿದ್ದಳು. ಅಜ್ಞಾತಾ ಬಾಗಿಲೆಡೆಯಲ್ಲಿ ಹೊಂಚುತ್ತಾ ನಿಂತಳು.

ಆ ವೃದ್ಧೆ ಬಹಳ ವೃದ್ಧೆಯೇ ಆಗಿದ್ದರೂ ಐವತ್ತು ವರ್ಷದ ಬಲಿಷ್ಠ ಪುರುಷನ ಬಲವು ಅವಳ ನಿರಿಗೆಗೂಡಿದ ದೇಹದಲ್ಲಿ ಹರಿದು ಕೊಂಡಿರುವಂತೆ ಕಾಣುತ್ತಿತ್ತು. ತಲೆಗೂದಲು ಪೂರಾ ಹಣ್ಣಾಗಿ ಬೆಳ್ಳಿಯ ಸರಿಗೆಗಳಂತೆ ಹೊಳೆಯುತ್ತಿದ್ದುವು. ಅಗಲವಾದ ಮುಖ, ಅದರಲ್ಲಿ ಅನೇಕ ನಿರಿಗೆಗಳು; ಹಣೆಯಲ್ಲಿ ದೊಡ್ಡ ಚಂದನದ ಬೊಟ್ಟು. ನೀಳವಾದ ಮೂಗಿನಲ್ಲಿ ದೊಡ್ಡದಾಗಿ ಕಾಣುತ್ತಿತ್ತು ಬೊಟ್ಟಿನ ತೂತು. ಮೂಗಿನ ಸೊಳ್ಳೆಗಳ ಪಾರ್ಶ್ವದಿಂದ ಆಳವಾದ ಎರಡು ರೇಖೆಗಳು, ದವಡೆ ಗಳ ಗುಣಿಗಳೊಂದಿಗೆ ಸೋಂಕಿ, ಗಂಡಸ್ಥಳದವರೆಗೆ ಇಳಿದಿದ್ದುವು; ಬಾಯಿ ಚಪ್ಪಟೆಯಾಗಿತ್ತು. ಹಲ್ಲುಗಳೇ ಇಲ್ಲ. ತುಟಿಗಳು ಒಳ ಸೇರಿ, ಕೆಳದುಟಿ ಜೋಲುತ್ತಿತ್ತು. ತುಸು ನೇತಾಡುವಂತೆ ಕಾಣುವ ಕಿವಿಗಳಲ್ಲಿ ಸುವರ್ಣ ನಕ್ಷತ್ರಗಳಿಂದ ತೊಳಗುವ ತುಲಸೀ ಮಣಿಗಳಿದ್ದುವು. ಕೊರಳಿ ನಲ್ಲಿ ಬಂಗಾರವೂ ತುಲಸೀ ಮಣಿಗಳೂ ಸೇರಿದ ಮಾಲೆ; ಸ್ಥೂಲವಾದ ದೇಹ; ಗೌರವರ್ಣ; ಬಿಳೀವಸ್ತ್ರವನ್ನು ಧರಿಸಿಕೊಂಡು ವೈರಾಗ್ಯ ಸೂಚಕಳಾಗಿ ಕಾಣುವ ವೃದ್ಧೆಯೇ ತಿಪ್ಪಾಂಬೆ ಎಂದು ಊಹಿಸಿದಳು.

ಹೊಂಚಿ ಕೇಳುವಾಗಲೇ ಅವರ ಮಾತಿಗೆ ಪ್ರಾರಂಭ ವಾಗಿತ್ತು. ತಿಪ್ಪಾಂಬೆ ಆ ಸಿಪಾಯಿಯನ್ನು ನೋಡಿ–"ಏನಪ್ಪಾ ಅಜಾದ್, ಬಹಳ ದಿನಗಳಿಂದ ನಿಮ್ಮ ವರ್ತಮಾನವಿಲ್ಲವಲ್ಲಾ?" ಎಂದು ಕೇಳಿದಳು.

ಅಜಾದನು ಅವಳಿದಿರು ಒಂದು ಪೀಠದ ಮೇಲೆ, ಒಂದು ಪಾದ ವನ್ನೂರಿ ನಿಂತುಕೊಂಡು– "ಹೌದು ಮಾತೋಜಿ. ಸುಲ್ತಾನರು ಬೇರೆ ರಾಜಕಾರಣದಲ್ಲಿ ವ್ಯಗ್ರರಾಗಿದ್ದುದರಿಂದ ಸಾವಕಾಶವಾಯಿತು. ಅದಿರಲಿ. ಈಗ ನಿಮ್ಮ ಏರ್ಪಾಡು ಎಲ್ಲಿಯವರೆಗೆ ಬಂದಿದೆ? ನೀವು ಕೇಳುವ ಪ್ರತಿಫಲವೇನು? ಎಂದು ಸುಲ್ತಾನರು ಕೇಳುತ್ತಾರೆ."

ಎಂದನು. ಅದಕ್ಕೆ ಮುದುಕಿ– "ಎಲ್ಲಾ ಏರ್ಪಾಡೂ ಸರಿಯಾಗಿಯೇ ಆಗಿದೆ. ನೀವು ಬರೇ ಐನೂರು ಮಂದಿ ಸೇನೆಯೊಂದಿಗೆ ಗುಪ್ತವಾಗಿ ಇಲ್ಲಿಗೆ ಬರುವುದೇ ಬಾಕಿ. ಆಮೇಲೆ ಈ ನಗರವು ನಿಮ್ಮದೇ. ನನ್ನಂಥ ಮುದುಕಿಗೆ ಇನ್ನು ಬೇರೆ ಪ್ರತಿಫಲ ಏಕೆ ಹೇಳು? ಏನೂ ಬೇಡ. ಮಾತ್ರ ಕೃಷ್ಣದೇವನಿಗೂ ತಿಮ್ಮರಸನಿಗೂ ನನ್ನ ಇಚ್ಛಾನುಸಾರವಾದ ಶಿಕ್ಷೆ ವಿಧಿಸಬೇಕು. ಅದೇ ನನಗೆ ಪ್ರತಿಫಲ!" ಎಂದಳು. ಅದಕ್ಕೆ ಅಜಾದನು, "ಅದು ಸರಿ. ಆದರೆ ಈ ನಗರ ರಕ್ಷಣೆಗೆ ಹತ್ತು ಲಕ್ಷ ಸೈನ್ಯವು ಸಿದ್ಧವಿರುವುದೆಂದು ಕೇಳಿದ್ದೆವಲ್ಲ? ಇಂಥಾ ಮಹಾ ನಗರವನ್ನು ಇಷ್ಟು ಅಲ್ಪ ಬಲದಿಂದ, ಇಷ್ಟು ಸುಲಭವಾಗಿ ವಶಪಡಿಸುವೆವೆನ್ನುವಿರಿ ಈ ಅತಿಶಯೋಕ್ತಿಯನ್ನು ಹೇಗೆ ನಂಬುವುದು? ಒಬ್ಬಳು ಮುದುಕಿಯ ಮಾತನ್ನು ನಂಬಿ ಮೋಸಹೋದರೆ ಉತ್ತರವಾದಿ ಯಾರು? ಹಾಗೇನಾದರೂ ಆದರೆ ಸುಲ್ತಾನರ ಕೆಟ್ಟ ಕೋಪಕ್ಕೆ ನೀವೇ ಆಹುತಿಯಾಗಬೇಕಾದೀತು. 'ಹೀಗೆ ಸುಲ್ತಾನರೇ ನಿಮ್ಮನ್ನು ಎಚ್ಚರಿಸಿದ್ದಾರೆ" ಎಂದುದಕ್ಕೆ ತಿಪ್ಪಾಂಬೆ ನಕ್ಕು, "ಹಾಗೇ ಆಗಲಿ. ಈಗ ಅಧಿಕಾರವಿಲ್ಲದ್ದರಿಂದ ನಾನೊಂದು ಸಾಮಾನ್ಯ ಮುದುಕಿಯಾಗಿ ನಿಮಗೆ ಕಾಣುತ್ತೇನೆ. ಆದರೆ, ಅಜಾದ್, ತುಳುವ ನರಸರಾಜೇಂದ್ರರ ಪಟ್ಟದರಾಣಿ ನಾನು! ವೀರನರಸಿಂಹರಾಜೇಂದ್ರನ ವೀರಮಾತೆ ನಾನು! ರಾಜಕಾರಣವು ನನಗರಿಯದೆ? ಆ ಹತ್ತುಲಕ್ಷ ರಕ್ಷಕ ಸೈನ್ಯದಲ್ಲಿ ಅರ್ಧಭಾಗವು ನನ್ನ ಒಳಸಂಚಿಗೆ ಸೇರಿದೆ! ಆನೆಗೊಂದಿಯ ಬಂದೀಖಾನೆಯ ಮುಖ್ಯಸ್ಥನೇ ನನ್ನ ಕೈಯಾಳಾಗಿದ್ದಾನೆ. ನೀವು ಬರುವ ದಿನವನ್ನು ಮಾತ್ರ ಸೂಚಿಸಿರಿ. ನಾನು ಎಲ್ಲವನ್ನೂ ಆಯತ್ತಗೊಳಿಸಿರುತ್ತೇನೆ. ಕೇಳು ಅಜಾದ್, ನಾಗಲೆಯ ಅಂತಃಪುರದಿಂದ ರಾಜಸಿಂಹಾಸನದ ಸಭಾಭವನಕ್ಕೆ ಒಂದು ಗುಪ್ತಮಾರ್ಗವುಂಟು. ಹೊರಗಿನ ಸೈನ್ಯವು ಕಾದಾಟಕ್ಕೆ ಸಿದ್ಧವಾಗುವುದರೊಳಗೆ, ನೀವು–ಸಭಾಭವನವನ್ನು ಸೇರಿ, ಸಿಂಹಾಸನವನ್ನು ಆಕ್ರಮಿಸಿ ವಿರಾಜಿಸಿದಿರೆಂಸರೆ, ಎಲ್ಲರೂ ಜಂಘಾಬಲವುಡುಗಿ ನಿರ್ವೀರ್ಯರಾಗುವರು. ಆಗಲೇ ನಿಮ್ಮ ಪ್ರಚಂಡ ಬಲವು ಹೊರಗಿನಿಂದಲೂ ಮುತ್ತಲಿ. ತೀರಿ ಹೋಯಿತು. ಮಾತ್ರ ಈ ಕೆಲಸವು

ಕೃಷ್ಣದೇವನು ಕಟಕದ ಕಡೆಯಿಂದ ಹಿಂದಿರುಗಿ ಬರುವುದರೊಳಗೆ ಮುಗಿದು ಬಿಡಬೇಕು" ಎಂದಳು.

"ಅದಿರಲಿ ತಿಪ್ಪಾರಾಣಿಯವರೆ, ಮೊದಲು ಸಣ್ಣ ಕಾರ್ಯವನ್ನು ತೀರಿಸಿ ಅನಂತರ ದೊಡ್ಡ ಕಾರ್ಯವನ್ನು ಮುಗಿಸೋಣವೆಂದು ಸುಲ್ತಾನರ ಖಂಡಿತಾಭಿಪ್ರಾಯ. ಮೊದಲು ಆನೆಗೊಂದಿಯಲ್ಲಿರುವ ಮುಕ್ತಾಕುಮಾರಿಯನ್ನು ನಮ್ಮ ವಶಪಡಿಸಿರಿ. ಅನಂತರ ನಗರವನ್ನು ಹಿಡಿಯುವ ವಿಚಾರ" ಎಂದು ಅಜಾದನೆನ್ನಲು, ತಿಪ್ಪಾಂಬೆ ತುಸು ಬೇಸರದಿಂದ—"ಒಟ್ಟಾರೆ ಈ ನಗರದ ಮೇಲೆ ನಿಮಗಷ್ಟು ಆಸೆಯಿಲ್ಲ. ಮುಖ್ಯ ಹೆಣ್ಣು ಬೇಕು ನಿಮಗೆ. ಸರಿ. ಇನ್ನು ನಾಲ್ಕು ದಿನದಲ್ಲಿ ಕೆಲವು ವೀರರೊಂದಿಗೆ ಬನ್ನಿರಿ. ಗಜಪತಿನಂದಿನಿಯನ್ನು ನಿಮ್ಮ ಕೈಗೆ ಸಿಕ್ಕಿಸುತ್ತೇನೆ ಎಂದಳು."

"ಈ ಎಲ್ಲಾ ವಿಷಯಗಳನ್ನು ನಾನು ಬಾಯಿಯಿಂದ ಹೇಳಿದರೆ ಸುಲ್ತಾನರು ನಂಬಲಿಕ್ಕಿಲ್ಲ. ಸಂದೇಹಿಸಿಯಾರು. ನೀವೇ ಒಂದು ಪತ್ರದಲ್ಲಿ ಲಿಖಿಸಿ ಕೊಟ್ಟು ಬಿಡಿರವ್ವ" ಎಂದು ಅಜಾದನು ಹೇಳಿದುದಕ್ಕೆ ತಿಪ್ಪಾಂಬೆ ಒಪ್ಪಿ, ಓಲೆಯನ್ನು ಬರೆಯಲಾರಂಭಿಸಿದಳು. ಅಜಾದನು ಅವನಿಗಾಗಿ ತರಿಸಿಟ್ಟಿದ್ದ ಹಣ್ಣುಗಳನ್ನು ಆಗತಾನೇ ತಿನ್ನಲು ತೊಡಗಿದನು.

ತಿಪ್ಪಾಂಬೆ ಪತ್ರವನ್ನು ಬರೆದು ಅಜಾದನ ಕೈಗೆ ಕೊಟ್ಟಾಯಿತು. ಆಗಲೇ ಜರುಗಿತೊಂದು ಅದ್ಭುತ ಘಟನೆ! ಧಡಾಲ್ಲೆಂದು ಆ ಕೋಣೆಯ ಬಾಗಿಲನ್ನು ತೆರೆದುಕೊಂಡು ಖಡ್ಗಪಾಣಿಯಾಗಿ, ಕೋಪದ ರಂಗನ್ನು ಸೂಸುತ್ತ ಇನ್ನೊಬ್ಬಳು ವೃದ್ಧಸ್ತ್ರೀ ಒಳಗೆ ಹೊಕ್ಕಳು. ಅವಳನ್ನು ನೋಡುತ್ತಲೇ ತಿಪಾಂಬೆಯೂ ಅಜಾದನೂ ದಿಗ್ಭ್ರಮಿಸಿದರು. ಅವಾಕ್ಕಾದರು. ಸ್ತಬ್ಧರಾದರು.

ಆ ಹೊಸ ವೃದ್ಧೆಗೆ ಸುಮಾರು ಎಪ್ಪತ್ತು ವರ್ಷ ವಯಸ್ಸಾಗಿದ್ದರೂ, ಒಳ್ಳೇ ಚಟುವಟಿಕೆಯವಳಾಗಿ ಕಾಣುತ್ತಿದ್ದಳು. ಸವಳು ಮೈ; ಗೌರವರ್ಣ; ದೀರ್ಘ ವೃತ್ತಾಕಾರದ ಮುಖ; ಅದರಲ್ಲಿ ಬೇಕಾದಷ್ಟು ವಾರ್ಧಕ್ಯದ ನಿರಿಗೆಗಳು. ಆ ಮುಖದಲ್ಲಿ ಗಾಂಭೀರ್ಯವಿತ್ತು. ಸಡಲಿ ನಡುಗುವ ತುಟಿಗಳಲ್ಲಿಯೂ ಕಣ್ಣುಗಳಲ್ಲಿಯೂ

ಕೋಪವು ವ್ಯಕ್ತವಾಗುತ್ತಿತು. ವೇಷಭೂಷಣಗಳೆಲ್ಲವೂ ತಿಪ್ಪಾಂಬೆ ಯಂತೆಯೇ ವೈರಾಗ್ಯ ಸೂಚಕಗಳಾಗಿದ್ದುವು. ಅವಳು ನಾಗಲಾ ದೇವಿಯೇ ಇರಬಹುದು ಎಂಬ ಅಜ್ಞಾತೆಯ ಊಹೆ ನಿಜವಾಯಿತು.

ಒಳಗೆ ಹೊಕ್ಕ ನಾಗಲಾದೇವಿ ಒಮ್ಮೆ ಆ ಕೋಣೆಯೊಳಗೆಲ್ಲಾ ದೃಷ್ಟಿಯನ್ನು ಸಾರಿಸಿ, ಅಜಾದನನ್ನು ಆಪಾದಮಸ್ತಕ ಪರ್ಯಂತವಾಗಿ ಪರಿಶೀಲಿಸಿ, ಬಳಿಕ ತಿಪ್ಪಾಂಬೆಯನ್ನು ಕುರಿತು-"ಅಕ್ಕಾ, ಇದೆಂತಹ ಕೆಲಸ? ಯಾರಿವನು?" ಎಂದು ಕೇಳಿದಳು. ಆಗ ಆ ತಿಪ್ಪಾಂಬೆಯ ಕಣ್ಣಿನಲ್ಲಿ ಹೊಳೆಯುತ್ತಿದ್ದ ಕ್ರೂರಭಾವವನ್ನು ನೋಡಿ ಅಜ್ಞಾತೆಗೆ ತುಂಬಾ ದಿಗಿಲಾಯಿತು. "ನಾಗಲಾ! ಬಿಚ್ಚುಗತ್ತಿಯೊಂದಿಗೆ ನೀನು ಇಲ್ಲಿಗೆ ಯಾಕೆ ಬಂದಿ?" ಎಂದು ಕೇಳಿದಳು ತಿಪ್ಪಾಂಬೆ.

"ನಿನ್ನೊಡನೆ ಮಾತಾಡಲಿಕ್ಕೆ ಬಂದೆ. ಆತ್ಮರಕ್ಷಣೆಗಾಗಿ ಬಿಚ್ಚು ಗತ್ತಿಯನ್ನು ತಂದೆ. ಅಕ್ಕಾ, ನೀನು ಏಕಾಂತದಲ್ಲಿ ಉಪಚಾರ ಮಾಡುತ್ತಿರುವ ಈ ಮುಹಮ್ಮದೀಯನಾರು?" ಎಂದು ಕೇಳಿದಳು ನಾಗಲಾದೇವಿ.

ಆಗ ಅಜಾದನು ಮೆಲ್ಲನೆ ಓಡಿಹೋಗುವ ಹವಣಿಕೆಯಲ್ಲಿರು ವುದನ್ನು ಕಂಡು, ನಾಗಲಾದೇವಿ "ಯಾರಲ್ಲಿ?" ಎಂದು ಅಧಿಕಾರ ಧ್ವನಿಯಿಂದ ಕೂಗಿದಳು. ತತ್‍ಕ್ಷಣವೇ ನಾಲ್ವರು ಭಟರು ಓಡಿ ಬಂದು, ಒಡತಿಯ ಸನ್ನೆಯ ಮೇರೆಗೆ ಅಜಾದನನ್ನು ಹಿಡಿದರು. ಅಜಾದನು ಬೆಪ್ಪುನೋಟದಿಂದ ತಿಪ್ಪಾಂಬೆಯನ್ನು ನೋಡಿದನು. ತಿಪ್ಪಾಂಬೆಯ ಕಣ್ಣಿನಿಂದ ಉರಿ ಹಾರುತ್ತಿತ್ತು. ಅಜಾದನ ಕೈಯಲ್ಲಿದ್ದ ಪತ್ರವು ನಾಗಲಾದೇವಿಯ ಕೈ ಸೇರಿತು. "ಈತನನ್ನು ಎಳೆದುಕೊಂಡು ಹೊರಗೆ ಹೋಗಿರಿ" ಎಂದು ನಾಗಲಾದೇವಿ ಆಜ್ಞೆ ಮಾಡಲು, ಭಟರು ಅಜಾದನನ್ನು ಎಳೆದುಕೊಂಡು ಹೊರಗೆ ಹೋದರು. ನಾಗಲಾದೇವಿ ತನ್ನ ದಾಸಿಗೆ "ಬಾಗಿಲು ಹಾಕು" ಎಂದಳು. ಆ ದಾಸಿ ಬಾಗಿಲು ಹಾಕಿ ಬಾಗಿಲ ಬಳಿಯಲ್ಲಿಯೇ ನಿಂತಿದ್ದಳು

ನಾಗಲಾದೇವಿ ತಿಪ್ಪಾಂಬೆಯ ಇದಿರಿನಲ್ಲಿ ಕುಳಿತು ಕತ್ತಿಯನ್ನು ಬದಿಗಿಟ್ಟು, "ಅಕ್ಕಾ, ನೀನು ಮಾಡುವ ಕಾರ್ಯವೇನೆಂಬುದನ್ನು ನನ್ನ

ಮುಂದೆ ಹೇಳಲಾರೆಯಾ? ನಾವಿಬ್ಬ...." ಎನ್ನುವಾಗ ತಿಪ್ಪಾಂಬೆ ನಡುವೇ ಬಾಯಿಹಾಕಿ "ನಿನ್ನ ಅಧಿಕಾರದ ಪ್ರಶ್ನೆ ನಿಲ್ಲಿಸು. ನನ್ನ ಮೇಲೆ ಅಧಿಕಾರ ಮಾಡಲಿಕ್ಕೆ ನೀನಾರೇ ಕುಲಗೇಡಿ?" ಎಂದು ಗರ್ಜಿಸಿದಳು.

ನಾಗಲಾದೇವಿ ಹೇಳಿದಳು: "ನಾನು ಯಾರು, ನೀನು ಯಾರೆಂದು ನಿನಗೆ ಗೊತ್ತಿಲ್ಲವೆ? ನಿನ್ನ ಕುಲಘಾತುಕತನವನ್ನು ಚೆನ್ನಾಗಿ ಬಲ್ಲ ತಿಮ್ಮರಸನು ಅಂದೇ ನಿನ್ನನ್ನು ಬಂದೀಖಾನೆಗೆ ಹಾಕ ಬೇಕೆಂದು ಹಟ ಹಿಡಿದನು. ಆದರೆ ಕೃಷ್ಣದೇವನು ನೀನೂ ಒಬ್ಬಳು ತಾಯಿ ಎಂದು ಗೌರವಿಸಿ ಹೀಗೆ ಸ್ವತಂತ್ರಳನ್ನಾಗಿ ಬಿಟ್ಟಿದ್ದಾನೆ. ಆದರೂ ತಿಮ್ಮರಸನು ಹೊರಟುಹೋಗುವಾಗ ನಿನ್ನ ವಿಷಯವಾಗಿ ಎಚ್ಚರಿಕೆ ಕೊಟ್ಟದ್ದು ತುಂಬಾ ಸತ್ಯವೇ ಆಯಿತು" ಎನ್ನುತ್ತಿರುವಾಗ ತಿಪ್ಪಾಂಬೆ "ಏನೆಂದು ಎಚ್ಚರಿಸಿದ್ದ?" ಎಂದು ಗುರುಗುಟ್ಟಿದಳು.

"ಮತ್ತೇನು? ನಿನ್ನ ಮೇಲೆ ಒಂದು ಕಣ್ಣು ಇಟ್ಟಿರಬೇಕೆಂದು ನನಗೆ ಹೇಳಿದ್ದನು. ಹಿಂದೊಮ್ಮೆ ನೀನು ಯವನ ಸಿಪಾಯಿಯೊಡನೆ ಮಾತಾಡಿದ್ದೂ ನನಗೆ ಗೊತ್ತಾಗಿತ್ತು. ಇನ್ನು ನಿನ್ನನ್ನು ಹೀಗೆಯೇ ಬಿಟ್ಟರೆ ರಾಜ್ಯಕ್ಕೇ ಆಪತ್ತು. ಏನು ಪತ್ರವಿದು?" ಎಂದು ನಾಗಲಾಂಬೆ ಆ ಪತ್ರದ ಮೇಲೆ ಕಣ್ಣನ್ನು ಹರಿಯಿಸಿದಳು. ಅದೇ ನಿಮಿಷದಲ್ಲಿ ತಿಪ್ಪಾಂಬೆ ಮೂಟೆ ಉರುಳಿದ ಹಾಗೆ ನಾಗಲಾದೇವಿಯ ಮೇಲೆ ಬಿದ್ದಳು. ಅವಳ ಭದ್ರಮುಷ್ಟಿಯಲ್ಲೊಂದು ಕಠಾರಿ ಮಿಂಚಿತು. ಕೂಡಲೇ ಅಜ್ಞಾತೆ ತತ್ತರಿಸಿಕೊಂಡು ಮುಂದಕ್ಕೆ ಹಾರಿದಳು. ದಾಸಿ ಕಿರ್ರನೆ ಕಿರುಚಿದಳು. 'ಹಾ! ನಾರಾಯಣಾ' ಎಂಬೊಂದು ಆರ್ತನಾದ ನಾಗಲಾದೇವಿಯ ಕಂಠದಿಂದ ಮಿಂಚಿಯೇಹೋಗಿತ್ತು. ನಾಗಲಾದೇವಿ ನಾಲಗೆ ಚಾಚಿ ಬಿದ್ದಿದ್ದಳು. ಅವಳ ಎದೆಯೊಳಗೆ ಕಠಾರಿ ನೆಟ್ಟಿತ್ತು.

ಫೂತ್ಕರಿಸುತ್ತಾ ಘೋರ ವ್ಯಾಘ್ರಿಣಿಯಂತೆ ತಿಪ್ಪಾಂಬೆ ಎದ್ದು ನಿಂತಾಗ, ನಾಗಲಾದೇವಿಯ ಕತ್ತಿ ಅವಳ ಕೈಯಲ್ಲಿತ್ತು. ಮತ್ತೊಂದು ಕೈಯಿಂದ ನಾಗಲಾದೇವಿಯ ಕೈಯಿಂದ ಜಾರಿಬಿದ್ದ ಆ ಪತ್ರವನ್ನೆತ್ತಿ ಕೊಂಡು, ಆ ಬಡದಾಸಿಯನ್ನು ನೋಡಿದಳು. ಹಿಂದೆಯೇ ನಿಂತಿದ್ದ

ಅಜ್ಞಾತೆಯಂತೂ ಆ ಭೀಷಣಾಕಾರದ ಹಂತಕಿ ವೃದ್ಧೆಯನ್ನು ನೋಡಿ ಬೆದರಿ ಬೆವರಿದಳು. ದಾಸಿ ಗಡಗಡನೆ ನಡುಗುತ್ತ 'ಅಯ್ಯೋ! ಕೊಲೆ ಕೊಲೆ!' ಎಂದು ಅರಚುತ್ತ ತಬ್ಬಿಬ್ಬಾಗಿ ಬಾಗಿಲು ತೆರೆಯುತ್ತಿದ್ದಳು.

ತಿಪ್ಪಾಂಬೆಯ ಕತ್ತಿಯ ಕೈ ಆ ದಾಸಿಯ ಮೇಲೆ ಹಾಗುವುದನ್ನು ನೋಡಿ ಅಜ್ಞಾತೆ ಮುಂದಕ್ಕೆ ಹಾರಿ, ಆ ಕೈಯನ್ನು ಹಿಡಿಯಲೆತ್ನಿಸಿದಳು. ಆ! ಆ ಮುದುಕಿಯ ಬಲವೇ ಬಲ! ಅವಳ ಮೊಣಕೈ ಗಂಟಿನ ಬಲವಾದ ಕುಟ್ಟನ್ನುಂಡು ಅವಳು ಹಿಂದೆ ಮಗುಚಿ ಬಿದ್ದಳು. ಮರುಕ್ಷಣವೇ ಗರ್ಭನಿರ್ಭೇದನವಾಗುವಂತೆ ಆ ದಾಸಿ ಅರಚಿದಳು. ಆ ಬಡದಾಸಿಯ ಬೆನ್ನಿನಲ್ಲಿ ಹೊಕ್ಕು ಹೊಟ್ಟೆಯನ್ನು ಮುಟ್ಟಿತ್ತು ಆ ಕತ್ತಿ. ಅರೆತೆರೆದ ಬಾಗಿಲಲ್ಲಿಯೇ ಅಸ್ತವ್ಯಸ್ತವಾಗಿ ಬಿದ್ದಿದ್ದಳವಳು.

ರಕ್ತದ ಕಾಲುವೆ ಅಜ್ಞಾತೆಯ ಕಣ್ಣನ್ನು ಕಟ್ಟಿತು. ಸಪ್ತನಾಡಿಗಳೂ ಸ್ತಬ್ಧವಾದವು. ಬಳಿಕ ನಡೆದುದೆಲ್ಲಾ ಒಂದು ಭೀಕರ ಸ್ವಪ್ನದಂತೆಯೇ ತೋರಿತು. ತಿಪ್ಪಾಂಬೆ 'ಹೋ! ಕೊಲೆ! ಬನ್ನಿ, ಹಿಡಿಯಿರಿ!' ಎಂದು ಕೂಗಿದ್ದು, ಸೇವಕರು ಓಡಿಬಂದು ಅಜ್ಞಾತೆಯನ್ನು ಮುತ್ತಿ ಬಂಧಿಸಿದ್ದು, 'ಆ ಯುವನ ಸಿಪಾಯಿಯನ್ನು ಇತ್ತ ತನ್ನಿ' ಎಂದು ತಿಪ್ಪಾಂಬೆ ಅಧಿಕಾರವಾಣಿಯಿಂದ ಕೂಗಿದ್ದು, ಅವನನ್ನು ಅವಳು ಸುರಂಗದ ನೆಲಮನೆಯೊಳಗೆ ದೂಡಿಸಿದ್ದು, ಅಜ್ಞಾತೆಯ ಮೈಯನ್ನು ತಿಪ್ಪಾಂಬೆಯೇ ಎಳೆದು, ಮುಟ್ಟಿ, ಪರಿಶೋಧಿಸಿ ಏನೇನೋ ಕೇಳಿದ್ದು, ಅವಳ ಬಾಯಿಯಿಂದ ಏನೂ ಮಾತು ಹೊರಡದಿದ್ದುದು, ಅಜ್ಞಾತೆಯ ಬೆರಳಿನಲ್ಲಿದ್ದ ಉಂಗುರವನ್ನು ಕಸಿದುಕೊಂಡು 'ಇವಳೇ ಚೋರನಾಯಕಿ ಅಜ್ಞಾತಾ' ಎಂದು ಅನೇಕರು ಕೂಗಿದ್ದು ಎಲ್ಲವೂ ಏನೋ ಒಂದು ಮಾಯೆ ಎಂದೇ ಭಾವಿಸಿದಳು. ಬೆಳಗಾದ ಮೇಲೆ ಅಜ್ಞಾತೆ ಬಂದೀಖಾನೆಯಲ್ಲಿ ಶೃಂಖಲಾಬದ್ಧಳಾಗಿರುವುದನ್ನೂ, ತನ್ನ ಬೆರಳಿನಲ್ಲಿ ಪ್ರಾಣ ಸಮಾನವಾದ ಆ ಉಂಗುರವು ಇಲ್ಲದಿರುವುದನ್ನೂ ಪ್ರತ್ಯಕ್ಷ ನೋಡಿದಾಗಲೇ ಎಲ್ಲವೂ ಸತ್ಯವೆಂದು ತೋರಿತು. ಆಹಾ! ಅವಳು ಏನೋ ಯೋಚಿಸಿಕೊಂಡು ತಿಪ್ಪಾಂಬೆಯ ಅಂತಃಪುರಕ್ಕೆ ಹೋದರೆ, ಏನಾಗಿಹೋಯಿತು!

* * * *

"ತಾಯಿ" ಎಂಬ ಮೆಲ್ದನಿ ಕೇಳಿಬಂತು. ಅಜ್ಞಾತೆ ತಿರುಗಿ ನೋಡಿದಳು. ಬಾಗಿಲ ಕಂಬಿಗಳ ಹೊರಗೆ ಆ ನಡು ವಯಸ್ಸಿನ ಕಾವಲಿಗನ ಮೂರ್ತಿ ನಿಂತಿತ್ತು. ಅವನು ಪುನಃ ಮೆಲ್ದನಿಯಿಂದ–"ಸುಮ್ಮನೆ ಕುಳಿತಿದ್ದಿಯಲ್ಲ ತಾಯಿ? ನಿದ್ದೆ ಬರುವುದಿಲ್ಲವೆ?" ಎಂದು ಕೇಳಿದನು.

"ಇಲ್ಲ ಅಣ್ಣ" ಎಂದು ಇಸಿದಾದ ಮೆಲ್ದನಿಂದ ಅಜ್ಞಾತಾ ಉತ್ತರವಿತ್ತಳು. ಅಪ್ರಯತ್ನವಾಗಿಯೇ ಈ ಉತ್ತರ ಹೊರಟಿತ್ತು.

"ಅಮ್ಮ, ನಿನ್ನೊಡನೆ ಎರಡುಮಾತು ಆಡಬೇಕೆಂದು ಮೊನ್ನಿನಿಂದಲೇ ಕಾಯುತ್ತಿದ್ದೇನೆ. ನಿನಗೆ ಕೋಪವಿಲ್ಲವಷ್ಟೆ?"

"ಕೋಪವೇಕಣ್ಣ? ನಿನ್ನ ಈ ಸುಹೃದಯತೆಯ ಮಾತುಗಳನ್ನು ಕೇಳಿದರೆ, ನಾನು ಊಹಿಸುವಂತೆ ನೀನು ಒಳ್ಳೆಯವನಾಗಿ ಕಾಣುವಿ. ಅಣ್ಣ ನಿನ್ನ ಹೆಸರು?"

"ರಾಮಣ್ಣ. ನಿನ್ನ ಹೆಸರು?"

"ಅಜ್ಞಾತಾ, ಎಂದು ನೀನು ಊಹಿಸಿರಬಹುದಲ್ಲವೆ?"

"ಹೌದು. ಆದರೆ ಭಯಂಕರಳಾದ ಆ ಚೋರನಾಯಕಿ ನೀನಾಗಿರಲಿಕ್ಕಿಲ್ಲ?"

"ಅಜ್ಞಾತಾ ಎಂದು ಪರಿಚಿತಳಾಗಿರುವವಳು ನಾನೇ ಅಣ್ಣ."

"ಓಹೊ! ಹಾಗಿದ್ದರೆ ಉಪಾಯವಿಲ್ಲ. ನಿನ್ನ ದಿವ್ಯ ಲಕ್ಷಣಗಳನ್ನು ನೋಡಿ, ನೀನು ಅಜ್ಞಾತಾ ಎಂಬ ಚೋರನಾಯಕಿಯಾಗಿರಲಿಕ್ಕಿಲ್ಲವೆಂದೂ, ನಿರಪರಾಧಿನಿಯೆಂದೂ ಭಾವಿಸಿ, ನಿನ್ನ ನಿಜವಾದ ಸಮಾಚಾರವನ್ನರಿತು ಬಿಡುಗಡೆಗೆ ಉಪಾಯ ಮಾಡೋಣವೆಂದು ನಿನ್ನನ್ನು ಮಾತಾಡಿಸಿದೆ. ನೀನು ಕೊಲೆಗಾರಿಣಿಯಲ್ಲವೆಂಬ ನಂಬುಗೆಯೂ ನನಗಿತ್ತು...."

"ಅದು ಮಾತ್ರ ಸತ್ಯವಣ್ಣ. ನಿಜವಾದ ಕೊಲೆಗಾರಿಣಿ ನಾನಲ್ಲ."

"ಹಾಗಿದ್ದರೆ ನೀನು ತಿಪ್ಪಾಂಬೆಯ ಅಂತಃಪುರಕ್ಕೆ ಹೇಗೆ ಬಂದೆ?"

"ಅದನ್ನು ನಾನು ಈಗ ಹೇಳಲಾರದವಳಾಗಿದ್ದೇನೆ. ಆ ಹತ್ಯಾಕಾರಿಣಿಯನ್ನು ಸಿಕ್ಕಿಸಿಹಾಕಬೇಕೋ ಬೇಡವೋ ಎಂಬುದನ್ನು

ನಿಶ್ಚಯಮಾಡಿಕೊಳ್ಳಬೇಕಾದರೆ, ಅವಳೊಡನೆ ಸ್ವಲ್ಪ ವಿಚಾರ ಪರಿಶೀಲನೆ ಮಾಡಬೇಕಾಗಿದೆ. ಆ ಪರಿಶೀಲನೆಗಾಗಿಯೇ ಆ ಅಂತಃಪುರವನ್ನು ಹೊಕ್ಕೆ. ಒಡನೆಯೇ ಹೀಗೆ ಸಿಕ್ಕಿಬಿದ್ದೆ."

"ಹಾಗಾದರೆ ನಾನು ಊಹಿಸುವವಳೇ ಹತ್ಯಾಕಾರಿಣಿಯೆಂದಾಯಿತು."

"ನಿನ್ನ ಊಹೆಗೆ ಕಾರಣವೇನಣ್ಣ?"

"ತಂಗಿ, ಅವಳ ಗುಪ್ತ ಕಾರಸ್ಥಾನವೆಲ್ಲಾ ನಾನು ಬಲ್ಲೆ. ಅವಳು ನನ್ನನ್ನೂ ತನ್ನ ಬಲೆಯಲ್ಲಿ ಹಾಕಿಕೊಂಡಿರುವುದಾಗಿ ನಂಬಿದ್ದಾಳೆ. ಅವರೆಲ್ಲರನ್ನೂ ಸರಿಯಾದ ಸಮಯದಲ್ಲಿ ಹಿಡಿದುಹಾಕುವ ಏರ್ಪಾಡು ಮಾಡಿಕೊಂಡೇ ನಾನು ಸುಮ್ಮನಿದ್ದೇನೆ."

"ಹಾಗಿದ್ದರೆ ಯವನರು ಅವಳ ಅಂತಃಪುರಕ್ಕೆ ಬರುವ ದಾರಿಯನ್ನೂ ನೀನು ಬಲ್ಲೆಯಾ?"

"ಊಹಿಸಿರುವೆನು. ಖಂಡಿತ ತಿಳಿಯಲಿಲ್ಲ. ಅದನ್ನೇ ಹುಡುಕುತ್ತಿದ್ದೇನೆ."

"ಅದನ್ನು ನಾನು ಬಲ್ಲೆ. ಈಗ ತಿಳಿಸಲಾರೆ."

"ಅದಿರಲಿ. ಅಮ್ಮಾ, ನೀನು ಯಾರೋ ನಿರಪರಾಧಿಯಾದ ಹೆಂಗಸೆಂದು, ನಿನ್ನ ಮುಖಲಕ್ಷಣದಿಂದ ನಾನು ಗ್ರಹಿಸಿ, ಸಾರ್ವಭೌಮರು ನಿನಗೆ ವಿಧಿಸುವ ಘೋರ ಶಿಕ್ಷೆಯನ್ನು ನೆನೆದು, ಅಂಜಿ, ನಿನ್ನ ನಿಜ ವೃತ್ತಾಂತವನ್ನರಿತು, ನಿನ್ನನ್ನು ಬಿಡುಗಡೆ ಮಾಡಿಬಿಡೋಣವೆಂದು ಭಾವಿಸಿದ್ದೆನು........"

"ಹೌದೆ? ಹಾಗಿದ್ದರೆ ನಾನು ಊಹಿಸಿದ್ದು ನಿಜ. ನೀನು ಕೇವಲ ಕಾವಲುಗಾರನಲ್ಲ?".

"ನಿಜ. ನಾನು ಈ ಬಂದೀಖಾನೆಯ ಮುಖ್ಯಸ್ಥ"

"ದೇವರೇ ನನ್ನ ಸಹಾಯಕ್ಕಾಗಿ ನಿನ್ನನ್ನು ಕಳುಹಿಸಿರುವನು."

"ಇಲ್ಲಮ್ಮ. ನೀನು ಹತ್ಯಾಕಾರಿಣಿಯಲ್ಲದಿದ್ದರೂ, ಚೋರನಾಯಕಿಯಾಗಿರುವುದರಿಂದ ಶಿಕ್ಷಾರ್ಹಳಾಗಿರುವಿಯಲ್ಲಾ?"

"ಅಣ್ಣ! ಅದೂ ಅಲ್ಲ. ನಾನು ಚೋರನಾಯಕಿಯಲ್ಲ, ಬಂಧು

ನಾಯಕಿ. ಇನ್ನೂ ಕೇಳಿದರೆ ನಾನು ಯಾವ ನಾಯಕಿಯೂ ಅಲ್ಲ. ಅನಾಥೆ! ತಬ್ಬಲಿ! ವಿರಾಗಿಣಿ! ಆದರೆ ಅಣ್ಣಾ, ನನ್ನ ಈ ದುರ್ಗತಿಗೆ ಮೂಲಕಾರಣವಾದ ಕೆಲವು ರಹಸ್ಯಗಳನ್ನು ಶೋಧಿಸಲಿಕ್ಕಾಗಿಯೇ ನಾನು ಹೀಗೆಲ್ಲಾ ವರ್ತಿಸುತ್ತಿದ್ದೇನೆ. ಆ ನನ್ನ ಉದ್ದೇಶವು ಇನ್ನು ಬೇಗನೇ ಕೊನೆ ಮುಟ್ಟಿ, ಬಳಿಕ ನಾನಾಗಿಯೇ ನ್ಯಾಯದೇವತೆಯ ಮುಂದೆ ನಿಲ್ಲುವೆನೆಂದು ಖಂಡಿತವಾಗಿ ತಿಳಿ. ಅಣ್ಣಾ, ಆ ಉದ್ದೇಶ ಸಿದ್ಧಿಗಾಗಿಯೇ ಲಾರ್ಡ್ ಲೂಯಿಸನೆಂಬ ಹೆಸರಿನಿಂದ ಉದಯಗಿರಿಯಲ್ಲಿ ಮೋಸ ಮಾಡಿದೆನು. ಆ ದುರ್ಗವನ್ನು ಸುಲಭವಾಗಿ ಒಂದೇ ರಾತ್ರಿಯೊಳಗೆ ನಿಮ್ಮ ರಾಯನ ಕೈಗೆ ಸಿಕ್ಕಿಸಿದವಳೂ ನಾನೇ. ನನ್ನ ಬೆರಳಿನಲ್ಲಿದ್ದ ನಿಮ್ಮ ರಾಜಮುದ್ರೆಯ ಉಂಗುರವನ್ನಾದರೂ ನಾನು ಮೋಸದಿಂದ ಸಂಪಾದಿಸಲಿಲ್ಲ. ನನ್ನ ಆರಾಧ್ಯದೇವನೇ ನನಗೆ ಅದನ್ನು ಕೊಟ್ಟಿರುವನು. ಇದಕ್ಕಿಂತ ಹೆಚ್ಚಿಗೆ ಈಗ ಹೇಳಲಾಗುವುದಿಲ್ಲ. ಅಣ್ಣಾ, ಅಂತಃಸಾಕ್ಷಿಗೆ ಒಪ್ಪುವಂತೆ ನಡೆಯುವವರೆಲ್ಲರೂ, ಬಹಿಃಸಾಕ್ಷಿಯಿಂದ ವಿಪರೀತವಾಗಿ ಪರಿಗಣಿಸಲ್ಪಡುತ್ತಾರೆ. ಅಂತಃಸಾಕ್ಷಿಯಿಂದ ದೂಷಿತರಾಗಿ ಕಾಣುವವರನ್ನು ಹಿಡಿದು ದಂಡಿಸುವುದರಿಂದಲೇ ನನ್ನ ಕಾರ್ಯವು ಚೋರಕಾರ್ಯವೆನಿಸಲ್ಪಟ್ಟಿದೆ. ಈಗ ನಾನು ಅಂತಃಸಾಕ್ಷಿಯ ಮುಂದೆ ನಿರಪರಾಧಿನಿಯೆಂದು ನಿನ್ನ ಅಂತರ್ಯಕ್ಕೆ ತಿಳಿದಿದ್ದರೂ, ನನ್ನನ್ನು ಬಹಿರಂಗವಾಗಿ ಬಿಡುಗಡೆ ಮಾಡಿದರೆ, ಬಹಿಃಸಾಕ್ಷಿಯಿಂದ ನೀನು ರಾಜದಂಡನೆಗೆ ಗುರಿಯಾಗುವಿ."

"ನಿಜ ತಂಗಿ. ನಿನ್ನ ಅಂತರುದ್ದೇಶವು ಯಾವುದೇ ಇರಲಿ, ಬಹಿರಂಗದಲ್ಲಿ ನೀನು ಅಪರಾಧಿನಿಯೆಂದೇ ಸಿದ್ಧವಾಗುತ್ತದೆ. ಸಾರ್ವಭೌಮರು ಇನ್ನೊಂದು ವಾರದೊಳಗಾಗಿ ಇಲ್ಲಿಗೆ ಬರುವರು. ಆಮೇಲೆ ನಿನ್ನ ಗತಿ ಹೇಗೋ ಏನೊ? ತಂಗಿ, ನಿಜ ಹೇಳು. ನಿನಗೆ ಇಲ್ಲಿಂದ ಜಾರಿ ಹೋಗಲು ಇಷ್ಟವುಂಟೆ?"

"ನೀನು ನಿಜವಾಗಿಯೂ ನನ್ನನ್ನು ಜಾರಗೊಳಿಸುವಿಯಾ?"

"ಅದೇ ನನ್ನ ಇಚ್ಛೆಯಾಗಿದೆ. ನೀನು ಚೋರನಾಯಕಿ ಎಂಬುದೇ ನನಗಿರುವ ತಳ್ಳಂಕ."

"ಹಾಗಾದರೆ ಅಣ್ಣ, ತಳ್ಳಂಕಪಡಬೇಡ. ಸತ್ಯವನ್ನು ಶೋಧಿಸುವ, ಪಾಪಿಗಳನ್ನು ಬಯಲಿಗೆಳೆಯುವ, ನನ್ನ ಮನೋಗತ ಕರ್ತವ್ಯವು ಇನ್ನೂ ಮುಗಿದಿಲ್ಲ. ಆದುದರಿಂದ ನಾನು ಬಿಡುಗಡೆ ಹೊಂದಲೇಬೇಕಾಗಿದೆ. ನೀನು ನನ್ನನ್ನು ಬಿಡುಗಡೆ ಮಾಡಿದಿಯಾದರೆ, ನಾನು ಆಜನ್ಮ ನಿನಗೆ ಕೃತಜ್ಞಳಾಗಿರುವೆನು. ನೀನು ಕೋರಿದಾಗಲೆಲ್ಲಾ ನಾನು ನಿನಗೆ ಸಿಕ್ಕುವೆನು. ನಾನು ಅಪರಾಧಿಯೆಂದು ನಿನ್ನ ಮನಸ್ಸಿಗೆ ಖಚಿತವಾದರೆ, ಆಗ ನನ್ನನ್ನು ಹಿಡಿದು ಬಂಧಿಸು."

"ಇಲ್ಲಿಂದ ಪಾರಾದ ಮೇಲೆ ನೀನು ನನಗೆ ಸಿಕ್ಕುವೆಯೆಂದು ನಾನು ಹೇಗೆ ನಂಬಲಿ?"

"ನನ್ನ ಹೃದಯವನ್ನು ನಿನ್ನ ಹೃದಯವು ಕಾಣುವುದಾದರೆ ನಂಬು. ಮತ್ತೇನು ಹೇಳಲಿ?"

ರಾಮಣ್ಣನು ಒಂದು ನಿಮಿಷ ಯೋಚಿಸಿ ತನ್ನೊಳಗೆ 'ಇವಳು ಹತ್ಯಾಕಾರಿಣಿಯೆಂತೂ ಖಂಡಿತ ಅಲ್ಲ. ಆದರೂ ಇವಳಲ್ಲಿ ಏನೋ ರಹಸ್ಯವಿದೆ. ಅದನ್ನು ತಿಳಿಯಬೇಕಾದರೆ ಇವಳನ್ನು ಬಿಡುಗಡೆ ಮಾಡಿಯೇ ನೋಡಬೇಕು' ಎಂದು ಭಾವಿಸಿ "ತಂಗಿ, ನಿನ್ನನ್ನು ನಂಬುವೆನು. ಬಿಡುಗಡೆ ಮಾಡಿಯೇ ತೀರುವೆನು" ಎಂದನು.

"ಅಣ್ಣ, ನಾನು ಇಲ್ಲಿಂದ ಜಾರುವುದಕ್ಕೆ ಮೊದಲು ಒಂದು ಕಾರ್ಯವಾಗಬೇಕಾಗಿದೆಯಲ್ಲ?"

"ಅದೇನು?"

"ನಿಜವಾದ ಹತ್ಯಾಕಾರಿಣಿಯನ್ನು ಹಾಗೆಯೇ ಬಿಡುವುದರಿಂದ, ಈ ಪವಿತ್ರ ರಾಜಧಾನಿಗೆ ಬಹಳ ಅಪಾಯವುಂಟು. ಅವಳನ್ನು ಉಪಾಯದಿಂದ ನನ್ನ ಗುಪ್ತ ನಿವಾಸಕ್ಕೆ ಸೇರಿಸಬೇಕಾಗಿದೆ. ಅದು ನಾನು ಇಲ್ಲಿಂದ ಜಾರುವುದಕ್ಕೆ ಮೊದಲೇ ನಡೆಯಬೇಕು. ನಂತರವಾದರೆ ನಗರವೆಲ್ಲಾ ಜಾಗೃತವಾದೀತು, ಅವಳೂ ಎಚ್ಚರಿಕೆಯಿಂದಿರ್‍ವಾಳು. ಆ ಘೋರ ವೃದ್ಧೆಯಲ್ಲಿ ನಾನೊಂದು ರಹಸ್ಯವನ್ನು ಹುಡುಕಬೇಕಾಗಿದೆ."

"ಅದು ನೆರವೇರುವ ಬಗೆ ಹೇಗೊ?"

"ಅಣ್ಣ, ನಾನೊಂದು ಪತ್ರವನ್ನು ಬರೆದು ಕೊಡುತ್ತೇನೆ. ಅದನ್ನು ನೀನು ನಾನು ಹೇಳುವಲ್ಲಿಗೆ ಮುಟ್ಟಿಸಿದರೆ ಸಾಕು. ಮತ್ತೆ ರಾತ್ರಿ ಬೆಳಗಾಗುವುದರೊಳಗೆ ಆ ಹತ್ಯಾಕಾರಿಣಿ ಅವಳ ಮನೆಯಲ್ಲಿ ಇಲ್ಲದಂತಾಗುವಳು."

"ಆಶ್ಚರ್ಯ! ಸರಿ. ಪತ್ರವನ್ನು ಬರೆದು ಕೊಡು."

"ಅಣ್ಣ, ಇದರಿಂದ ನನ್ನ ರಹಸ್ಯ ರಂಗಸ್ಥಳವು ನಿನಗೆ ಗೊತ್ತಾಗುವ ಸಂಭವವುಂಟು. ನನ್ನ ಅನುಮತಿಯಿಲ್ಲದೆ ನನ್ನ ಯಾವ ರಹಸ್ಯವನ್ನೂ ಬಯಲು ಮಾಡುವುದಿಲ್ಲವೆಂದು ನೀನು ನನಗೆ ಭಾಷೆ ಕೊಡಬೇಕು. ನೀನು ಕೋರಿದಾಗಲೆಲ್ಲಾ ನಾನು ಗುರುತಿಸುವ ಅದೊಂದು ಜಾಗೆಯಲ್ಲಿ ನಿನಗೆ ಸಿಕ್ಕುವೆನೆಂದು ನಾನು ನಿನಗೆ ಭಾಷೆ ಕೊಡುವೆನು. ನನ್ನ ಮುದ್ದು ಮಗಳೇ ಇದಕ್ಕೆ ಸಾಕ್ಷಿ!"

"ನಿನಗೆ ಎಷ್ಟು ಮಂದಿ ಮಕ್ಕಳಿರುವರಮ್ಮ?"

"ಒಬ್ಬಳೇ ಒಬ್ಬಳು ಮಾತ್ರ. ಹದಿನಾಲ್ಕು ವರ್ಷದ ಹುಡುಗಿ. ನನಗಾಗಿ ಕುತೂಹಲದಿಂದ ಕಾದಿರಬಹುದು" ಎನ್ನುವಾಗ ಅವಳ ಮಾತೃಹೃದಯವೇ ಮೇಲೆದ್ದು ಬಂದುದನ್ನು ಮನಗಂಡು ರಾಮಣ್ಣನು ತುಂಬ ಕರಗಿದನು.

"ಇಗೋ ತಂಗಿ, ಆರ್ವೀಡು ವಂಶದಲ್ಲಿ ಹುಟ್ಟಿದ ಈ ರಾಮರಾಜನು ಕೊಟ್ಟ ಭಾಷೆಗೆ ತಪ್ಪುವವನಲ್ಲ. ಶ್ರೀ ಪಂಪಾ ವಿರೂಪಾಕ್ಷನ ಆಣೆ. ನಿನ್ನ ಅನುಮತಿಯಿಲ್ಲದೆ, ನಿನ್ನ ಅಂತರ್ಯವಾವುದನ್ನೂ ನಾನು ಬಹಿರಂಗಪಡಿಸಲಾರೆ."

ಅನಂತರ ರಾಮಣ್ಣನು ಲೇಖನ ಸಾಮಗ್ರಿಗಳನ್ನು ಒಳಗೆ ಹಾಕಿದನು. ಅಜ್ಞಾತಾದೇವಿ ಆ ಬೆಳುದಿಂಗಳ ಬೆಳಕಿನಲ್ಲಿ ಕೆಲವು ಪಙ್ತಿಗಳನ್ನು ಬರೆದು, ರಾಮಣ್ಣನ ಕೈಗೆ ಕೊಟ್ಟು, ಅದನ್ನು ಎಲ್ಲಿ, ಹೇಗೆ ಯಾರಿಗೆ ಮುಟ್ಟಿಸಬೇಕೆಂಬುದನ್ನೂ ತಿಳಿಸಿದಳು.

೧೧

ಬೆಳಗಾಗುತ್ತಲೇ ರಾಮಣ್ಣನು, ಸಿದ್ದ-ಮುದ್ದ ಎಂಬ ತನ್ನ ಪರಮ ವಿಶ್ವಾಸದ ಸೇವಕರ ಕೈಯಲ್ಲಿ ಆ ಪತ್ರವನ್ನು ಕೊಟ್ಟು ಅಜ್ಞಾತಾದೇವಿ ಹೇಳಿದ ಗುರುತುಗಳನ್ನು ತಿಳಿಸಿ, "ಈ ಪತ್ರವನ್ನು ಕೊಟ್ಟಮೇಲೆ ಸ್ವಲ್ಪಹೊತ್ತುಮರೆಯಾಗಿದ್ದು, ಅಲ್ಲಿ ಏನೇನು ನಡೆಯುವು ದೆಂಬುದನ್ನೂ ಕಂಡುಕೊಂಡು ಬಂದು ನನಗೆ ಹೇಳಿರಿ" ಎಂದೂ ಜಡಿದು ಹೇಳಿ ಕಳುಹಿಸಿಕೊಟ್ಟನು.

ಸಿದ್ದಮುದ್ದರು ಕುದುರೆಯ ಮೇಲೇರಿಕೊಂಡು, ಹೊರಟು ಸೊಂಡೂರಿನ ಪರ್ವತಗಳ ಪಕ್ಕದಲ್ಲಿರುವ 'ತಪ್ಪಲಹಳ್ಳಿ' ಎಂಬ ಗ್ರಾಮ ವನ್ನು ಸೇರಿದರು. ದೂರದಿಂದ ಹೊರಟು ಬರುವ ತುಂಗಭದ್ರೆಯ ಕಾಲುವೆಯೊಂದು ಆ ಗ್ರಾಮ ಮಧ್ಯದಲ್ಲಿ ಹರಿದುಕೊಂಡು ಹೋಗು ತ್ತಿತ್ತು. ಆ ಕಾಲುವೆಯ ಬಳಿಯಲ್ಲಿ ಒಂದು ದಿನ್ನೆ. ಅದರ ಮೇಲೊಂದು ಬೇವಿನ ಮರವೂ,ಕೆಂಪುರಂಗು ಬಳಿದ ಬಾಂದುಕಲ್ಲೂ ಇತ್ತು. ಅದಕ್ಕೆ 'ದುರುಗಮ್ಮನ ದಿನ್ನೆ' ಎಂದು ಹೆಸರು. ಗ್ರಾಮಸ್ಥರು ಅಲ್ಲಿಗೆ ಬಂದು, ಧೂಪ-ದೀಪ, ಹೂ, ಹಣ್ಣು, ಕರ್ಪೂರಾದಿಗಳಿಂದ ಆ ಕಲ್ಲನ್ನು ಪೂಜಿಸಿ ಹೋಗುತ್ತಿದ್ದರು. ಸಿದ್ದ ಮುದ್ದರು ಕುದುರೆಗಳನ್ನು ಗ್ರಾಮದ ಹೊರಗೆ ಒಂದು ಮರಕ್ಕೆ ಕಟ್ಟಿಹಾಕಿ, ಆ ದುರುಗಮ್ಮನ ದಿನ್ನೆಯನ್ನೇರಿ ರಂಗಿನ ಕಲ್ಲಿಗೆ ನಮಸ್ಕರಿಸಿದರು. ಬಳಿಕ "ದುರುಗಮ್ಮ ರಾಣೀದೇವಿಕೀ ಜೈ!"

ಎಂದು ಮೂರುಬಾರಿ ಘೋಷಣೆ ಮಾಡಿದರು.

ಕೂಡಲೇ ಆ ದಿಣ್ಣೆಯ ಪಕ್ಕದ ಗುಡಿಸಲಿನೊಳಗಿಂದ ಕೊಣಪನೊಬ್ಬನು ಹೊರಟು ಅವರ ಬಳಿಗೆ ಬಂದನು. ಬಂದು "ಏನು ವರ್ತಮಾನ?" ಎಂದು ಕೇಳಿದನು. ಬಳಿಕ ಅವನು ಸಿದ್ದನು ಕೊಟ್ಟ ಪತ್ರವನ್ನು ಪಡೆದುಕೊಂಡು–"ಕೊಂಚ ಇಲ್ಲಿರಿ. ಪ್ರತ್ಯುತ್ತರವಿದ್ದರೆ ತರುವೆನು" ಎಂದಂದು ದಿಣ್ಣೆಯಿಂದಿಳಿದು ತುಸುದೂರದಲ್ಲಿ ಕಾಣುವ ಇನ್ನೊಂದು ಗುಡಿಸಲಿನೊಳಗೆ ಹೊಕ್ಕನು.

ಅಲ್ಲಿ ಇಬ್ಬರು ಹಳ್ಳಿಯ ಹೆಂಗಸರೊಡನೆ ಹದಿನಾಲ್ಕು ವರ್ಷದ ದಿವ್ಯ ತೇಜಸ್ವಿನಿಯಾದ ಬಾಲೆಯೊಬ್ಬಳು, ಕಂಡವರ ಕಣ್ಮನಗಳನ್ನು ಸೆಳೆಯುವಂತೆ ಸುಳಿಯುತ್ತಿದ್ದಳು. ಕೊಣಪನು ವಿನಯದಿಂದ ಆ ಪತ್ರವನ್ನು ಆ ಬಾಲೆಗೆ ಕೊಟ್ಟನು. ಅವಳು ಅಕ್ಷರಗಳ ಗುರುತು ಹಿಡಿದು ಆನಂದದಿಂದ "ಆಹಾ! ಅಮ್ಮನ ಕಾಗದ" ಎನ್ನುತ್ತಾ ಓದಿದಳು.

ಅದು ಸಾಮಾನ್ಯವಾಗಿ ಅರ್ಥವಾಗದಂತೆ ಸಂಕೇತವಾಕ್ಯಗಳಿಂದ ಬರೆಯಲ್ಪಟ್ಟಿತ್ತು. "ಮಲ್ಲನನ್ನು ಕರೆಯಿರಿ. ಆ ಪತ್ರವನ್ನು ತಂದು ಕೊಟ್ಟವರು ಹೋಗಲಿ" ಎಂದಳು ಆ ಬಾಲೆ. ಆಗಲೇ ಇದನ್ನೆಲ್ಲಾ ನೋಡಿದ್ದ ಮಲ್ಲನು ಅಲ್ಲಿಗೇ ಬಂದು "ಏನಾದರೂ ವಿಶೇಷವಿದೆಯೆ?" ಎಂದು ಕೇಳಿದನು. "ಸವಿಯಾದ ಸುದ್ದಿ ಮಲ್ಲಣ್ಣಾ. ನಾಳೆ ಬೆಳಗಾಗುವಾಗ ಅಮ್ಮ ಬರುತ್ತಾಳಂತೆ. ಅಷ್ಟರೊಳಗೆ, ಅಂದರೆ ಈದಿನ ರಾತ್ರಿ ಬೆಳಗಾಗುವುದರೊಳಗೆ ನೀನು ನಾಲ್ಕೈದು ಮಂದಿಯೊಂದಿಗೆ, ಆ ಜೋಳದರಾಸಿ ಗುಡ್ಡ, ನೀನು ನೋಡಿರುವಿಯಂತಲ್ಲಾ, ಆ ಗುಡ್ಡದ ತೆಂಕಣ ಬದಿಯಲ್ಲಿ ಒಂದು ದೊಡ್ಡ ಪೊದರಿನ ಎಡೆಯಲ್ಲಿ ನೆಲದಾರಿ ಉಂಟಂತೆ; ನೀನು ಅದರಲ್ಲಿ ಹೊಕ್ಕು ರಾಜಾಂತಃಪುರದಲ್ಲಿರುವ ಮುದುಕಿ ತಿಪ್ಪಾಂಬೆ ಎಂಬವಳನ್ನು ಎತ್ತಿಕೊಂಡು ಬರಬೇಕು. ಇದು ತಾಯಿಯ ಆಜ್ಞೆ. ಇಕೋ ಕಾಗದ ನೋಡು" ಎಂದು ಬಾಲೆ ಓಲೆಯನ್ನು ಮಲ್ಲನ ಕೈಗೆ ಕೊಟ್ಟಳು.

ಅಷ್ಟರೊಳಗೆ ಅಲ್ಲಿ ಅನೇಕ ಮಂದಿ ಗುಂಪುಗೂಡಿದರು. ಮಲ್ಲನು ಎಲ್ಲರನ್ನೂ ಕುರಿತು, "ಶುಭವಾರ್ತೆ! ನಮ್ಮ ತಾಯಿ

ನಾಳೆ ಸೂರ್ಯೋದಯವಾಗುವಾಗ ಇಲ್ಲಿಗೆ ಬಂದು ಸೇರುತ್ತಾಳೆ. ಆದ್ದರಿಂದ ನಾವು ಆನೆಗೊಂದಿಯ ಬಂದೀಖಾನೆಯಲ್ಲಿ ಊಟ ಮಾಡುವ ಅಗತ್ಯವಿಲ್ಲ. ಈ ದಿನ ರಾತ್ರಿ ಒಂದು ಕಾರ್ಯವಾಗ ಬೇಕೆಂದು ತಾಯಿಯ ಆಜ್ಞೆಯಾಗಿದೆ. ನಾಲ್ಕು ಮಂದಿ ನನ್ನೊಂದಿಗೆ ಈಗಲೇ ಹೊರಡಿರಿ!" ಎಂದನು.

ಸ್ವಲ್ಪಹೊತ್ತಿನ ಮೇಲೆ ಮಲ್ಲನೂ ಸೇರಿ ಐದು ಮಂದಿಯ ಸಂಗಡವೊಂದು, ದೂರಪ್ರಯಾಣ ಹೊರಟವರಂತೆ ಕುದುರೆಗಳ ಮೇಲೇರಿಕೊಂಡು ಆ ಗ್ರಾಮದಿಂದ ಹೊರಟಿತು. ಬಾಲೆಯೂ ಒಂದು ಚೆಲುವಾದ ಬಿಳೀ ಕುದುರೆಯ ಮೇಲೇರಿಕೊಂಡು ಅವರೊಂದಿಗೆ ಹೊರಟಳು. ಬರಬೇಡವೆಂದು ಮಲ್ಲನು ಅವಳನ್ನು ತಡೆದನು. "ನಿಮ್ಮೊಂದಿಗೆ ಸ್ವಲ್ಪ ದೂರ ಬರುತ್ತೇನೆ" ಎಂದು ಹೇಳಿ ಬಾಲೆ ಅವರಿ ಗಿಂತ ಮುಂದಾಗಿ ತನ್ನ ಕುದುರೆಯನ್ನು ಹರಿಸಿದಳು.

ಹಾಗೆ ಅವರೆಲ್ಲ ಆ ಗುಡ್ಡದಾರಿಯಲ್ಲಿ ಸುಮಾರು ಒಂದು ಹರ ದಾರಿಯಷ್ಟು ಹೋದ ಮೇಲೆ, ಮಲ್ಲನು ಒತ್ತಾಯದಿಂದ ಆ ಬಾಲೆ ಯನ್ನು ಹಿಂದಿರುಗಿಸಿ, ಅವಳ ಜತೆಯಲ್ಲಿ ಇನ್ನೊಬ್ಬನೂ ಹಿಂದಿರುಗು ವಂತೆ ಹೇಳಿದನು. ಅದಕ್ಕೆ ಆ ವೀರಬಾಲೆ "ಏನೂ ಬೇಡ. ನನ್ನ ಜತೆಗೆ ಈ ಚತುರ ಕುದುರೆಯೂ ಈ ಕತ್ತಿಯೂ ಇದೆಯಲ್ಲವೆ? ಸಮೀಪವೇ ಮನೆ. ಮೇಲೆ ಹಗಲು ಹೊತ್ತು, ಭಯವೇನಿದೆ?" ಎಂದು ಆ ಜತೆಗಾರ ನನ್ನು ಖಂಡಿತವಾಗಿ ನಿರಾಕರಿಸಿ, ತಾನೊಬ್ಬಳೇ ಹಿಂದಿರುಗಿದಳು. ಕುದುರೆಗಳನ್ನು ಹಾರೋಡಿಸಿಕೊಂಡು, ಆ ಐವರೂ ಗುಡ್ಡಗಳ ಅಡ್ಡದಲ್ಲಿ ಮಾಯವಾದರು.

ಸಂಜೆಯ ಬಿಸಿಲು ಕಂದಿತ್ತು. ಆಗಸದಲ್ಲಿ ಮೋಡಗಳು ಕೆಂಪು ಸಿಂಗರದಿಂದ ಅತ್ತಿತ್ತ ಓಡಾಡುತ್ತಿದ್ದವು. ಸುಳಿ ಸುಳಿಯಾಗಿ ಗಾಳಿ ಬೀಸುತ್ತಿತ್ತು. ಉತ್ತಮಜಾತನಾದ ಚತುರ ತುರಗನು, ವೀರಬಾಲೆ ಯನ್ನು ಬೆನ್ನಿನ ಮೇಲೇರಿಸಿಕೊಂಡು ನಿಧಾನವಾಗಿ ಗಂಭೀರವಾಗಿ ನಡೆ ಯುತ್ತಿದ್ದನು. ತಾಯಿಯ ಕ್ಷೇಮವಾರ್ತಾಶ್ರವಣದ ಆನಂದವು ಆ ಬಾಲೆಯ ಚೆಲುಮೊಗದಲ್ಲಿ ತಾಂಡವವಾಡುತ್ತಿತ್ತು. ಬಲಗಡೆಯಲ್ಲಿ

ಕಾಣುವ ಗುಪ್ಪೆಗುಪ್ಪೆಯಾದ ಬಂಡೆಯ ಗುಡ್ಡಗಳಲ್ಲಿಯೂ, ಅವುಗಳ ಬುಡದಲ್ಲಿರುವ ದೊಡ್ಡದೊಡ್ಡ ಪೊದರುಗಳಲ್ಲಿಯೂ, ಕಾಡುಮರಗಳಲ್ಲಿಯೂ ಅಡಗಿರುವ ಸೌಮ್ಯ ಸೌಂದರ್ಯವು, ಆಗಾಗ ಅವಳ ಕಣ್ಮನಗಳನ್ನು ಆಕರ್ಷಿಸುತ್ತಿತ್ತು. ಅದು ಜನಸಂಚಾರವಿಲ್ಲದ ಪ್ರದೇಶವಾದುದರಿಂದ, ಅವಳು ಏಕಾಂಗಿನಿಯಾಗಿ ಸಮೀಪದಲ್ಲಿ ಕಾಣುವ ತಪ್ಪಲಹಳ್ಳಿಗೆ ಸಾಗುತ್ತಿದ್ದಳು.

ಏನೋ ಒಂದು ಆರ್ತನಾದವು ಅವಳನ್ನು ನಿಲ್ಲಿಸಿತು. ಪುರುಷ ಕಂಠಗಳ ಆ ನಾದವು ಬಳಿಯಲ್ಲಿದ್ದೊಂದು ದಿನ್ನೆಯ ಆಚೆಯ ಬದಿಯಿಂದ ಕೇಳಿಬರುತ್ತಿದ್ದಿತು. “ಯಾರಾದರೂ ಪುಣ್ಯಾತ್ಮರಿತ್ತ ಬನ್ನಿ. ರಕ್ಷಿಸಿ, ರಕ್ಷಿಸಿ!” ಎಂದು ಯಾರೋ ಕೂಗುತ್ತಿದ್ದರು. ಧೀರೆಯೂ, ಕರುಣಾಕರೆಯೂ ಆದ ಆ ಬಾಲೆ, ಚಟಕ್ಕನೆ ಆ ಸ್ಥಳಕ್ಕೆ ತನ್ನ ಕುದುರೆಯನ್ನು ತಿರುಗಿಸಿದಳು.

ಅಲ್ಲಿ ದಪ್ಪವಾದೊಂದು ಬೇವಿನ ಮರಕ್ಕೆ, ನಾಲ್ವರು ಪುರುಷರು ಬಿಗಿಯಲ್ಪಟ್ಟು ಚಡಪಡಿಸಿಕೊಂಡಿದ್ದರು. ಕಳ್ಳರಿಂದ ಅವರಿಗೆ ಆ ಗತಿಯುಂಟಾಯಿತೆಂದು ಮೊರೆಯಿಟ್ಟುಕೊಂಡರು. ಮೋಸವರಿಯದ ಆ ಬಾಲೆ ಕುದುರೆಯಿಂದ ಹಾರಿ ಅವರ ಕಟ್ಟುಗಳನ್ನು ಬಿಚ್ಚಿದ್ದೇ ತಡ, ಆ ನಾಲ್ವರೂ ಒಮ್ಮೆಲೇ ಆ ಬಾಲೆಯನ್ನು ಹಿಡಿದು, ಬಾಯಿಗೆ ಬಟ್ಟೆಯನ್ನು ಸಲುಕಿದರು. ಟೊಣಪನೊಬ್ಬನು ಲೀಲಾಜಾಲವಾಗಿ ಅವಳನ್ನು ಹೆಗಲಮೇಲೆ ಹೊತ್ತುಕೊಂಡು ಭರದಿಂದ ಕಾಲನ್ನು ಕಿತ್ತನು.

ಉಳಿದ ಘಾತುಕರಿಗೆ ಫಕ್ಕನೆ ಓಡಿಹೋಗಲಾಗಲಿಲ್ಲ. ಒಡತಿಯ ಅಪಾಯವನ್ನರಿತು, ಚತುರ ತುರುಗನು ಕಿವಿಗಳನ್ನು ಕುಣಿಸಿ, ಜೊಲ್ಲುಗಳನ್ನು ನಿಗುರಿಸಿ, ಕೋಪದಿಂದ ಕೆನೆದು, ಹಾರಿಬಂದು, ಮುಂಗಾಲುಗಳಿಂದ ಕುಟ್ಟಿ, ಹಿಂಗಾಲುಗಳಿಂದ ಒದೆದು, ಆ ದುಷ್ಟರನ್ನು ಕೆಡವಿ ಹಾಕಿ ತನ್ನ ಒಡತಿಯನ್ನು ಹೊತ್ತುಕೊಂಡು ಹೋಗುವವನ ಬೆಂಬತ್ತಿತು! ಆಗ ಪಕ್ಕದ ಗುಡ್ಡದ ಮರೆಯಿಂದ ಮತ್ತೆ ನಾಲ್ವರು ಮಂದಿ ಕತ್ತಿಗಳನ್ನು ಝಳಪಿಸಿಕೊಂಡು ಓಡಿ ಬಂದು ಆ ವೀರ ತುರಗವನ್ನು ಅಡ್ಡಗಿಸಿದರು. ಅವರೊಂದಿಗೆ ಹಗ್ಗದ ಸುರಳಿಯೊಂದಿಗೆ ಓಡಿ

ಬಂದ ರಾಮಯಾಮಾತ್ಯನು "ಕುದುರೆಯನ್ನು ಹೊಡೆಯದಿರಿ" ಎಂದು ಕೂಗಿಕೊಳ್ಳುತ್ತ. ಜಿಗಿಯುವ ಕುದುರೆಗೆ ಗುರಿನೋಡಿ ಹಗ್ಗವನ್ನು ಬೀಸಿದನು. ಉರುಲು ಸರಿಯಾಗಿ ಚತುರನ ಮುಂಗಾಲುಗಳಿಗೆ ಸಿಕ್ಕಿಕೊಂಡಿತು. ಆಮೇಲೆ ಸುಲಭವಾಗಿ ಆ ಕುದುರೆಯನ್ನು, ಹಗ್ಗವೆಳೆದು ಬೀಳಿಸಿ ಉಳಿದ ಕಾಲುಗಳನ್ನು ಬಿಗಿದು ಹಾಕಿಬಿಟ್ಟರು. ಪಾಪ, ಸ್ವಾಮಿಭಕ್ತ ಚತುರನು ಮತ್ತೇನೂ ಮಾಡಲಾರದೆ. ಚಡಪಡಿಸಿಕೊಂಡು ಬೀಳಬೇಕಾಯಿತು.

ರಾಯಚೂರಿನಿಂದ, ಆ ಬಾಲಕಿಯನ್ನು ಅಪಹರಿಸಲಿಕ್ಕಾಗಿ ಹೊರಟಿದ್ದ ರಾಮಯಾಮಾತ್ಯನು, ತನ್ನೆಲ್ಲರ ಕುದುರೆಗಳನ್ನು ಒಂದು ಹಳ್ಳಿಯಲ್ಲಿ ಹುದುಗಿಸಿ, ಚತುರ-ರಂಗರನ್ನು ಮುಂದಿಟ್ಟುಕೊಂಡು, ಆ ಬೆಟ್ಟದ ಮಾರ್ಗವಾಗಿ ತಪ್ಪಲಹಳ್ಳಿಗೆ ಬರುತ್ತಿದ್ದನು. ಅವನು ಮನಸ್ಸಿನಲ್ಲಿ ಏನೋ ಉಪಾಯಗಳನ್ನು ಯೋಚಿಸಿಕೊಳ್ಳುತ್ತಿರುವಾಗ, ದೂರದಲ್ಲಿ ಮಲ್ಲನೇ ಮೊದಲಾದವರೊಂದಿಗೆ ಬರುತ್ತಿರುವ ಆ ಬಾಲಿಕೆಯನ್ನು ಚತುರ-ರಂಗರು ಗುರುತಿಸಿದರು. 'ಹುಡುಕುವ ಬಳ್ಳಿ ಕಾಲ್ತೊಡಕಿದಂತಾಯಿತು' ರಾಮಯಾಮಾತ್ಯನಿಗೆ. ಅವರೆಲ್ಲರೂ ಅಡಗಿ ನೋಡಲು. ಮಲ್ಲನ ಸಂಗಡವು ಅವರನ್ನು ದಾಟಿ ಸ್ವಲ್ಪ ಮುಂದೆ ಹೋದ ಮೇಲೆ, ಆ ಬಾಲಿಕೆಯೊಬ್ಬಳೇ ಹಿಂದಿರುಗುವುದು ಕಂಡು, ಅವರಿಗೆ ಏನೂ ಕಷ್ಟಪಡುವ ಅಗತ್ಯವಿಲ್ಲದೆ ಹೋಯಿತು. ರಾಮಯಾಮಾತ್ಯನು ಮೇಲೆ ಹೇಳಿದ ತಂತ್ರವನ್ನು ವಿರಚಿಸಿ ಆ ಬಾಲಿಕೆಯನ್ನು ಅಪಹರಿಸಿಕೊಂಡು ಹೋದನು. ಇಷ್ಟು ಸುಲಭದಲ್ಲಿ ಕಾರ್ಯವನ್ನು ಕೈಗೂಡಿಸಿದ ಆ ದೈವದ ಆಲೋಚನೆ ಹೇಗೆಂಬುದನ್ನು ಅವನೇನು ಬಲ್ಲನು? ದುಷ್ಟಕೃತ್ಯಗಳಿಗೆ ದೈವವು ಅನುಕೂಲವಾಗಿರುವಂತೆ ತೋರಿದರೂ, ಬೆನ್ನ ಹಿಂದೆಯೇ ಇರುವ ಪ್ರತಿಕೂಲದೃಷ್ಟಿ ಅವರಿಗೆ ಕಾಣುವುದಿಲ್ಲ. ಅಗೋ, ಆಚೆಯ ಬದಿಯ ದಟ್ಟವಾದ ಅಡವಿಯ ಮರದ ಮೇಲಿನಿಂದ ಸಿದ್ದನು ಕೆಳಗಿಳಿಯುತ್ತಿದ್ದಾನೆ!

ಸಿದ್ದ-ಮುದ್ದರು ತಪ್ಪಲಹಳ್ಳಿಯ ದುರಗಮ್ಮನ ದಿನ್ನೆಯಿಂದ ಹೊರಟ ಮೇಲೆ, ಸ್ವಲ್ಪ ಹೊತ್ತು ನೀಳ್ಯ ಹಾಕುತ್ತಲೂ, ಕಾಲುವೆ

ಗಿಳಿದು ವಿಶ್ರಮಿಸುತ್ತಲೂ, ತಿಂಡಿ-ತೀರ್ಥ ಸೇವಿಸುತ್ತಲೂ ಆ ಬಾಲಿಕೆಯ ಗುಡಿಸಲಿನ ಕಡೆಗೇ ಲಕ್ಷ್ಯ ಗೊಟ್ಟಿದ್ದರು. ಸ್ವಲ್ಪ ಹೊತ್ತಿನಲ್ಲಿ ಐವರು ಸವಾರರೊಂದಿಗೆ, ಆ ಬಾಲಿಕೆಯೂ ಹೊರಟುದನ್ನು ನೋಡಿ ಅವರು ಕುತೂಹಲಗ್ರಸ್ತರಾದರು. ಅವರು ದೂರದ ಜನರು ನಡೆಯುವ ಕಾಲುದಾರಿಯನ್ನು ಹಿಡಿದು, ತಮ್ಮ ಕುದುರೆಗಳನ್ನು ಅನುಸರಣ ಮಾಡಿಸಿದರು. ಹೀಗೆ ಸಾಗಲು, ಎಡಬದಿಯ ಗುಡ್ಡೆಯ ಸಂದಿನಿಂದ, ಆ ಬಾಲಿಕೆಯನ್ನು ಹೊಂಚು ಹಾಕುತ್ತಿರುವ, ರಾಮಯಾಮಾತ್ಯನ ಜನರು ಅವರ ದೃಷ್ಟಿಗೆ ಬಿದ್ದರು. ಒಡನೆ ಸಿದ್ದ-ಮುದ್ದರು ತಮ್ಮ ಕುದುರೆಗಳನ್ನು ಕಾಡಿನೊಳಗೆ ಹೋಗಿಸಿದರು. ಆ ಜನರ ಸನ್ನೆಗಳು, ತಿರುಗುವ ಗುಡ್ಡ ಜಾಗೆ ಇವುಗಳ ರೀತಿಗಳಿಂದ ಅವರ ಮೇಲೆ ಸಿದ್ದ-ಮುದ್ದರಿಗೆ ವಿಶೇಷ ಕುತೂಹಲಕ್ಕೆ ಕಾರಣವಾಯಿತು. ವಿಶೇಷ ಲಕ್ಷ್ಯ ಕೊಡುತ್ತಾ ಸಿದ್ದನು ಮರವನ್ನೇರಿ ನೋಡತೊಡಗಿದನು. ಅವರು ತನ್ನನ್ನು ತಾವೇ ಮರಕ್ಕೆ ಬಿಗಿದುಕೊಂಡುದನ್ನೂ, ಬಳಿಕ ಅವರು ಆ ಬಾಲಿಕೆಯನ್ನು ಎತ್ತಿಕೊಂಡು ಹೋದುದನ್ನೂ ನೋಡಿ ಸಿದ್ದನು ಬರ ಬರನೆ ಮರದಿಂದಿಳಿದನು. ಇಬ್ಬರೂ ಆ ಕುದುರೆಯ ಬಳಿಗೆ ಬಂದರು. ಕಟ್ಟಿಂಡು ಚಡಪಡಿಸುವ ಕುದುರೆಯ ಕಟ್ಟುಗಳನ್ನು ಬಿಚ್ಚಿದರು. ಚತುರನು ಚಟಕ್ಕನೆದ್ದು, ಒಮ್ಮೆ ಮೈಯನ್ನು ಝಾಡಿಸಿ, ಕುಣಿದು, ಆ ಕನ್ಯಾಪಹಾರಿಗಳು ಹೋದ ಉತ್ತರ, ದಿಕ್ಕನ್ನು ನೋಡುತ್ತಾ, ಕೇಕಲಾರಂಭಿಸಿದನು. “ಶಾಂತನಾಗು, ತುರಗರಾಜಾ, ಶಾಂತನಾಗು! ಇದ್ದರೆ ಇಂತಹ ಕುದುರೆ ಇರಬೇಕು” ಎಂದು ಸಿದ್ದ, ಮುದ್ದರು ಚತುರನ ಬೆನ್ನು ಚಪ್ಪರಿಸಿದರು.

ರಾಜಕಳೆಯಿಂದ ಶೋಭಿಸುವವಳೂ, ಸುಂದರಳೂ ಸುಕುಮಾರಿಯೂ, ತೇಜಸ್ವಿನಿಯೂ, ಆದ ಕನ್ಯೆಯನ್ನು ಆ ರೀತಿಯಾಗಿ ಅಪಹರಿಸಿಕೊಂಡು ಹೋದಾಗ ಸಿದ್ದ-ಮುದ್ದರ ಬಾಹುಗಳು ತುಡಿಸದಿರಲಿಲ್ಲ. ಆದರೆ ಆ ಘಾತುಕರು ಬಹಳ ಮಂದಿ ಇದ್ದುದರಿಂದ, ನೋಡಿಯೂ ಅವರು ಸುಮ್ಮನಿರಬೇಕಾಯಿತು. ಈಗ ಸಿದ್ದನು ಆ ಚತುರ ಕುದುರೆಯನ್ನು ಮುಂದಿಟ್ಟುಕೊಂಡು ಆ ಕನ್ಯಾಪಹಾರಿಗಳನ್ನು

ಅನುಸರಿಸಿಕೊಂಡು ಹೋಗುವುದಾಗಿಯೂ, ಮುದ್ದನು ವಿಜಯನಗರಕ್ಕೆ ಹಿಂದಿರುಗಿ, ಈ ಸಂಗತಿಯನ್ನು ಒಡೆಯ ರಾಮಣ್ಣನಿಗೆ ತಿಳಿಸುವುದಾಗಿಯೂ ಗೊತ್ತುಮಾಡಿಕೊಂಡರು. ಹಾಗೆಯೇ ಅವರಿಬ್ಬರೂ ಅತ್ತಿತ್ತ ಅಗಲಿದ್ದರು.

ಅತ್ತ ಮಲ್ಲನು ನಾಲ್ವರು ಜತೆಗಾರರೊಂದಿಗೆ ಜೋಳದರಾಶಿ ಗುಡ್ಡದ ಬದಿಯನ್ನು ಸೇರಿ, ಸುರಂಗದ್ವಾರವನ್ನು ಕಂಡುಹಿಡಿದು, ತಿಪ್ಪಾಂಬೆಯ ಅಂತಃಪುರದ ನೆಲಮನೆಯನ್ನು ಸೇರಿ, ಬಾಗಿಲು ತಟ್ಟಿದನು. ವಿಜಾಪುರದ ದೂತನೇ ಬಂದಿರಬೇಕೆಂದು ಭಾವಿಸಿ ತಿಪ್ಪಾಂಬೆ ದೀಪದೊಂದಿಗೆ ನೆಲಮನೆಗಿಳಿದು ಬಾಗಿಲು ತೆರೆದಳು. ದೀಪದ ಬೆಳಕಿನಲ್ಲಿ ಭಯಂಕರಳಾಗಿ ತೋರಿದ ಆ ಹಂತಕ ವೃದ್ಧೆಯನ್ನು ನೋಡಿ ಮಲ್ಲನು "ತಿಪ್ಪಾಂಬಾರಾಣಿ ತಾವೇ ಏನು?" ಎಂದು ಕೇಳಿದನು. ಹೌದೆನ್ನುತ್ತಲೇ ಮಲ್ಲನು ಅವಳ ಮುಖಕ್ಕೆ ಮಾಯಾನಿದ್ರೆಯ ಪುಡಿಯನ್ನೆರಚಿ, ಎಳೆದೆತ್ತಿಕೊಂಡನು. ಹೀಗೆ ಅವಳನ್ನು ಸಾಗಿಸಿಕೊಂಡು, ಮಲ್ಲನ ಪರಿವಾರವು ತಮ್ಮ ನಿವಾಸಕ್ಕೆ ಹೊರಟಿತು.

* * * *

"ತಂಗಿ, ಅಜ್ಞಾತಾ, ನಿನ್ನ ಪತ್ರವು ಕಾರ್ಯವನ್ನು ನೆರವೇರಿಸಿಯೇಬಿಟ್ಟಿತು. ಇದೇ ರಾತ್ರಿ ಮೊದಲನೇ ಜಾವದಲ್ಲಿಯೇ ತಿಪ್ಪಾಂಬೆ ತನ್ನ ಗೃಹದಲ್ಲಿ ಮಾಯವಾಗಿದ್ದಾಳೆ. ನಿನ್ನ ಅಜ್ಞಾತಬಂಧುಗಳ ಸಾಮರ್ಥ್ಯವು ಅತ್ಯದ್ಭುತ."

"ಇದರಲ್ಲೇನೂ ಇಷ್ಟು ಆಶ್ಚರ್ಯವಿಲ್ಲಣ್ಣ. ನಾಗಲಾಪುರದಲ್ಲಿ ನಡೆದ ಘಟನೆ ಇಷ್ಟು ಬೇಗ ನಿನಗೆ ಹೇಗೆ ಗೊತ್ತಾಯಿತು?"

"ಹೀಗೆ ನಡೆದೀತೆಂದು ನೀನೇ ನನಗೆ ಹೇಳಿದ್ದಿಯಲ್ಲಾ? ಇದನ್ನು ತಿಳಿಯಲಿಕ್ಕಾಗಿ ತಿಪ್ಪಾಂಬೆಯ ಮನೆಯ ಬಳಿಯಲ್ಲಿ ನಾನೊಬ್ಬ ಹೊಂಚುಗಾರನನ್ನು ಇಟ್ಟಿದ್ದೆ. ಅವನು ಕೂಡಲೇ ಬಂದು ನನಗೆ ತಿಳಿಸಿದ. ತಂಗಿ, ಅಜ್ಞಾತಾ, ಇನ್ನು ನೀನು ಹೊರಡಬಹುದು."

"ಹೊರಡುವೆನಣ್ಣ. ಆದರೆ ನಾನು ಜಾರಿಕೊಂಡುದರಿಂದ ನಿಮಗಾರಿಗೂ ತೊಂದರೆಯಾಗದಂತೆ ಪತ್ರ ಬರೆದಿಟ್ಟಿದ್ದೇನೆ. ಅದರಲ್ಲಿ

ತಿಪ್ಪಾಂಬೆಯ ಘಾತಕಮಾರ್ಗವನ್ನು ಸೂಚಿಸಿ ಎಚ್ಚರಿಸಿದ್ದೇನೆ."

ರಾಮಣ್ಣನು ತನ್ನ ಟೊಂಕದೊಳಗಿಂದ ಒಂದು ಕೀಲಿ ಕೈಯನ್ನು ತೆಗೆದು, ಸದ್ದಿಲ್ಲದಂತೆ ಬಂದೀಖಾನೆಯ ಬಾಗಿಲನ್ನು ತೆರೆದನು. ಅಜ್ಞಾತೆಯ ಕೈಕಾಲುಗಳ ಶೃಂಖಲೆಗಳನ್ನು ಕಳಚಿದನು. ತರುವಾಯ ತನ್ನ ಉಡುಗೆಯೊಳಗೆ ಬಚ್ಚಿಟ್ಟುಕೊಂಡಿದ್ದ ಉಡುಗೆತೊಡಿಗೆಗಳನ್ನು ತೆಗೆದು ಅವಳಿಗೆ ಕೊಟ್ಟನು. ಅಜ್ಞಾತಾದೇವಿ ಆ ಭೂಷಣಗಳನ್ನು ಧರಿಸಿಕೊಂಡ ಮೇಲೆ, ಹಳೆಯ ಸೀರೆಯನ್ನು ತಾನು ಮಲಗುವ ಚಾಪೆಯಲ್ಲಿ ಹಾಸಿ, ಅದರಡಿಯಲ್ಲಿ ಕಸಕಪ್ಪುಗಳನ್ನು ಸೇರಿಸಿ, ಮೇಲೆ ಹೊದೆಬಟ್ಟೆಯನ್ನು ಹೊದಿಸಿಟ್ಟಳು. ಥಕ್ಕನೆ ನೋಡಿದರೆ ಅಲ್ಲಿ ಅವಳು ಮಲಗಿರುವಂತೆಯೇ ಕಾಣುತ್ತಿತ್ತು. ಅವಳ ವೇಷ ಈಗ ಒಬ್ಬ ಪಹರೇಗಾರನಂತಾಗಿತ್ತು.

ರಾತ್ರಿ ನಾಲ್ಕನೆಯ ಜಾಮದ ಗಂಟೆ ಗಣಗಣಿಸಿತು. ವದ್ಯ ಅಷ್ಟಮಿಯ ಚಂದ್ರನು ಮರಗಳೆಡೆಯಿಂದಲೂ ಕಾರಾಗೃಹಗಳ ಅಲ್ಲಲ್ಲಿಯ ಸಂದುಗಳಿಂದಲೂ ತಂಗಿರಣಗಳನ್ನು ಹರಿಸಿಕೊಂಡಿದ್ದನು. ತಂಗಾಳಿ ಅಡಿಗಡಿಗೆ ಸುಯ್ಯ ಸುಯ್ಯನೆ ಬೀಸುತ್ತಿತ್ತು. ಚಳಿಯಾಗುತ್ತಿದ್ದುದರಿಂದ ಪಹರೆಯವರೆಲ್ಲರೂ ಮೈತುಂಬಾ ಅರಿವೆಗಳನ್ನು ಹೊದ್ದುಕೊಂಡು ಅಡಿಗಡಿಗೆ ಕಂಪಿಸುವ ದನಿಯಿಂದ "ಪಾರಾ ಹುಷಾರ್ !" ಎಂದು ಕೂಗುತ್ತಿದ್ದರು. ಅಜ್ಞಾತಾದೇವಿಯ ಬಂದೀಖಾನೆಯ ಇನ್ನೊಬ್ಬ ಕಾವಲುಗಾರ ಮುದುಕನು ನಿನ್ನಿನಂತೆಯೇ ಆ ಜಗಲಿಯಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದನು. ದೂರದಲ್ಲಿ ಒಂದನ್ನನುಸರಿಸಿ ಇನ್ನೊಂದಾಗಿ ಎರಡು ಮೂರು ಕೋಳಿಗಳು ಕೂಗಿದುವು.

ಅಜ್ಞಾತಾದೇವಿ ಬಂದೀಖಾನೆಯಿಂದ ಹೊರಗೆ ಬಂದ ಮೇಲೆ ರಾಮಣ್ಣನು ಮೊದಲಿನಂತೆಯೇ ಬಾಗಿಲಿಕ್ಕಿ ಬೀಗ ಹಾಕಿ "ತಂಗಿ, ಒಂದು ಮಾತು" ಎಂದನು.

"ಏನಣ್ಣ ?"

ರಾಮಣ್ಣನು ಒಂದು ಪತ್ರವನ್ನು ಅವಳ ಕೈಗೆ ಕೊಟ್ಟು, "ಇದನ್ನು ನೀನು ಸುರಕ್ಷಿತವಾದ ಸ್ಥಾನವನ್ನು ಸೇರಿದ ಮೇಲೆ ಓದಿ ನೋಡು.

ಗಾಬರಿ ಇಲ್ಲ."

"ಏನಿದು ಅಣ್ಣ ? ಏನಾದರೂ ವಿಶೇಷ ?—"

"ಅದೇನೂ ಕೇಳದಿರು. ಹೊರಡಿನ್ನು. ಅಕೋ ಆ ಮರದ ಬುಡದಲ್ಲಿ ಒಬ್ಬ ಭಟನು ನಿನಗಿದಿರಾಗುವನು. ನೀನು ನಿಸ್ಸಂದೇಹ ವಾಗಿ ಅವನೊಂದಿಗೆ ಹೋಗು. ಅವನು ನಿನ್ನನ್ನು ಸುರಕ್ಷಿತವಾದ ಸ್ಥಳದಲ್ಲಿ ಬಿಟ್ಟು ಬರುವನು."

"ಸರಿಯಣ್ಣ. ನಿನಗೆ ನಾನು ಆಜನ್ಮ ಕೃತಜ್ಞಳು. ನನ್ನನ್ನು ನೋಡಬೇಕಾದರೆ, ದುರುಗಮ್ಮನ ದಿನ್ನೆ ನೆನಪಿರಲಿ."

"ಆಗಲಿ ತಂಗಿ, ನಡೆ."

ಅಜ್ಞಾತೆ ಗೋಡೆಯ ಬದಿಯ ನೆರಳಿನಲ್ಲಿಯೇ ನಡೆದು, ಆ ಮರದ ಬುಡಕ್ಕೆ ಹೋದಳು. ಅಲ್ಲಿ ನಿಂತಿದ್ದ ಭಟನು ಅವಳನ್ನು ಕರೆದುಕೊಂಡು ಮುಂದೆ ಹೊರಟನು. ಇಬ್ಬರೂ ನಿರಾತಂಕವಾಗಿ ಬಂದೀಖಾನೆಯ ನಡಾರವನ್ನು ದಾಟಿದರು. ಅಲ್ಲಿ ಚಂದ್ರಬಿಂಬ ತರಂಗಾಯಿತೆಯಾಗಿ, ಬೆಳ್ಳಿಯ ಸರಿಗೆಗಳನ್ನೂ ಮುತ್ತುಗಳನ್ನೂ ತೊಳಗಿಸುತ್ತ, ಭೋರ್ಗರೆದೋಡುತ್ತಿರುವ ತುಂಗಭದ್ರೆಯನ್ನು ಕಲ್ಲ ಸಂಕದಲ್ಲಿ ದಾಟಿದರು. ಅನಂತರ ಕಾಂಪಿಲ್ಯ ನಗರದ ಮಾರ್ಗವನ್ನು ಹಿಡಿದರು.

ಕೋಳಿಗಳು ಕೂಗಿದ್ದಾಯಿತು. ಹಕ್ಕಿಗಳು ಕಲಕಲ ಗೀತವನ್ನು ಹಾಡತೊಡಗಿದವು. ದೇವಾರಗಳಲ್ಲಿ ಮೇಳವಾದ್ಯಗಳ ಸುಸ್ವನವು ಮೊಳಗಿದುವು. ಅರಮನೆಯಲ್ಲಿ ಪ್ರಭಾತಭೇರಿಗೆಗಳು ಶಬ್ದಿಸಿದುವು. ನಿಷ್ಠಾವಂತರು ಸುಸ್ವರದಿಂದ ಉದಯರಾಗವನ್ನು ಹಾಡುತ್ತ, ತುಂಗ ಭದ್ರೆಯ ಸ್ನಾನಕ್ಕೆ ಹೊರಡುತ್ತಿದ್ದರು. ಅಲ್ಲಲ್ಲಿ ಸುಮಂಗಲಿಯರು ಉದಯಗೀತವನ್ನು ಹಾಡುತ್ತ ಮೊಸರು ಕಡೆಯುತ್ತಿದ್ದರು. ನಗರ ವಾಸಿಗಳ ಶಬ್ದವು ಮಂದಮಂದವಾಗಿ ಏಳಲಾರಂಭಿಸಿತು. ಚಂದ್ರ, ಚುಕ್ಕಿಗಳು ಮಂಕಾದವು. ಭ್ರಮರಗಳ ಭ್ರಮಣೆಗೆ ಪ್ರಾರಂಭವಾಯಿತು. ಪುಷ್ಪಸೌರಭವು ಸಾಂದ್ರವಾಗಿ ಪಸರಿಸುತ್ತ ಘೂಪಾರತಿ ಗೈಯುತ್ತಿರಲು, ಅರುಣರಾಗವು ಪಸರಿಸಿತು. ಮುಂಬೆಳಕು ಮೂಡಿತು.

ಹಿಂದೆಯೇ ಬಾಲಸೂರ್ಯನು ಮೂಡಣಾಗಸದಲ್ಲಿ ತೊಳಗ ತೊಡಗಿದನು. ಅವರಿಬ್ಬರೂ ಕಾಂಪಿಲ್ಯನಗರದ ಬಹಿರ್ಭಾಗವನ್ನು ಸೇರಿದರು. ಭಟನು ಅಜ್ಞಾತೆಯನ್ನು ಅಲ್ಲಿ ಬಿಟ್ಟು ಹಿಂತಿರುಗಿದನು.

ಮುಂದೆ ಹೋಗುತ್ತಾ ಅಜ್ಞಾತೆ ರಾಮಣ್ಣನು ಕೊಟ್ಟಿದ್ದ ಪತ್ರವನ್ನು ಓದಿ ನೋಡಿದಳು. "ಅಯ್ಯೋ!" ಎಂಬ ಉದ್ಗಾರವು ಅವಳ ಬಾಯಿಂದ ಹೊರಟಿತು. ಅದರಲ್ಲಿ—

"ಪ್ರಿಯ ಭಗಿನಿ, ಅಜ್ಞಾತಾ! ನಿನ್ನೆಯ ದಿನ ತಪ್ಪಲಹಳ್ಳಿಯಿಂದ ತೇಜಸ್ವಿನಿಯಾದ ಬಾಲೆಯೊಬ್ಬಳನ್ನು ಯಾರೋ ದುಷ್ಟರು ಅಪಹರಿಸಿಕೊಂಡು ಹೋದರೆಂದು, ನನ್ನ ಆ ಸೇವಕನು ಸಮಾಚಾರವನ್ನು ತಂದಿದ್ದಾನೆ. ನೀನೇನೂ ಹೆದರಬೇಡ. ನನ್ನ ಇನ್ನೊಬ್ಬ ಸೇವಕನು ಆ ದುಷ್ಟರನ್ನು ಅನುಸರಿಸಿಕೊಂಡೇ ಹೋಗಿರುತ್ತಾನೆ. ಆದುದರಿಂದ ಆ ಬಾಲೆ ನಿಶ್ಚಯವಾಗಿ ಕಾಪಾಡಲ್ಪಡುತ್ತಾಳೆ. ಅವಳನ್ನು ಕಾಪಾಡಲು ನಾನು ತ್ರಿಕರಣಪೂರ್ವಕವಾಗಿ ಪ್ರಯತ್ನಪಡುವೆನೆಂದು ನಂಬು. ಇದನ್ನು ಬಂದೀಖಾನೆಯಲ್ಲೇ ನಿನಗೆ ತಿಳಿಸಿದ್ದರೆ, ನೀನು ಅಧೀರಳಾಗಬಹುದೆಂದು ಶಂಕಿಸಿ ಹೀಗೆ ತಿಳಿಸಿದ್ದೇನೆ. ಆ ಸೇವಕನು ತಿಳಿಸಿದ ಲಕ್ಷಣಗಳಿಂದ ಆ ಬಾಲೆಯೇ ನಿನ್ನ ಮಗಳಾಗಿರಬೇಕೆಂದು ಊಹಿಸುವೆನು.

ಇತಿ ನಿನ್ನ ಪ್ರೀತಿಯ ನೂತನ ಬಂಧು,

ರಾಮಣ್ಣ."

೧೨

ಇತ್ತ ರಾತ್ರಿ ಬೆಳಗಾಗುವಾಗ ವಿಜಯನಗರದಲ್ಲೆಲ್ಲಾ ಜನರು ಕುತೂಹಲವಾಗಿ ಮಾತಾಡಿಕೊಳ್ಳುತ್ತಿದ್ದರು. ಆನೆಗೊಂದಿಯ ಬಂದೀಖಾನೆಯಿಂದ, ಬಂದಿನಿ ಚೋರನಾಯಕಿ ಮಾಯವಾಗಿರುವಳೆಂದು ಜನರಿಗೆಲ್ಲಾ ಅತ್ಯಾಶ್ಚರ್ಯ. ಬಂದೀಖಾನೆಯ ಅಧಿಕಾರಿ ರಾಮಣ್ಣನು ಏನೂ ಅರಿಯದವನಂತೆ, ಭಾರೀ ಶೋಧಕ ವಿಚಾರಣೆಗಳನ್ನು ನಡೆಸಿದನು. ಬಂದೀಖಾನೆಯ ಕೋಣೆಯಲ್ಲಿದ್ದ ಅಜ್ಞಾತಾದೇವಿಯ ಪತ್ರವನ್ನು, ರಾಜಕಾರ್ಯ ನಿರ್ವಾಹಕನಾದ ಅಚ್ಯುತರಾಯನಿಗೆ ಒಪ್ಪಿಸಿದನು. ಅದರಲ್ಲಿ ಅಜ್ಞಾತಾದೇವಿ, ತಾನು ನಿರಪರಾಧಿನಿಯಾಗಿರುವುದರಿಂದಲೂ, ಇನ್ನೆಷ್ಟೋ ಕಾರ್ಯಗಳು ತನಗೆ ಇರುವುದರಿಂದಲೂ, ತನ್ನ ಬಳಿಯಲ್ಲಿ ರಹಸ್ಯವಾಗಿದ್ದ, 'ಲೋಹಭೇದಿ' ಮತ್ತು 'ಲೋಹಬಂಧ' ಎಂಬ ವನಸ್ಪತಿಗಳ ಸಹಾಯದಿಂದ ತಪ್ಪಿಸಿಕೊಂಡಿರುವೆನೆಂತಲೂ, ಆಂಜನೇಯ ಮಂತ್ರದಿಂದ ಯಾರಿಗೂ ತಿಳಿಯದಂತೆ, ಪಾರಾಗಿರುವೆನೆಂತಲೂ, ಹಾಗೆಯೇ ತಿಪ್ಪಾಂಬೆಯನ್ನು ಎತ್ತಿಕೊಂಡುಹೋಗಿರುವೆನೆಂತಲೂ, ಅವಳ ಅಂತರ್ಗೃಹದಲ್ಲಿ ಇಂತಹ ಜಾಗದಲ್ಲಿರುವ ಸುರಂಗವನ್ನು ಮುಚ್ಚಿಸದಿದ್ದರೆ, ರಾಜಧಾನಿಗೆ ಘಾತವಾದೀತೆಂತಲೂ ಒಕ್ಕಣಿಸಿದ್ದಳು. ಒಂದೇ ರಾತ್ರಿಯಲ್ಲಿ ಅವಳೂ ಪಾರಾಗಿ, ತಿಪ್ಪಾಂಬೆಯನ್ನು ಹೊತ್ತುಕೊಂಡು ಹೋದಳೆಂದರೆ ಯಾರಿಗೆ ತಾನೇ ಆಶ್ಚರ್ಯವಾಗಲಿಕ್ಕಿಲ್ಲ?

*　　　*　　　*

ಮುಂದೆ ನಾಲ್ಕು ದಿನಗಳಲ್ಲಿ ಕೃಷ್ಣದೇವರಾಯನು ಮಂತ್ರಿ ಪರಿವಾರ ಸಮೇತನಾಗಿ ರಾಜಧಾನಿಯನ್ನು ಹೊಕ್ಕನು. ರಾಜಪ್ರಜೆಗಳಲ್ಲಿ ಯಾವ ಆಡಂಬರವೂ, ವಿಜಯ ಘೋಷಣೆಗಳೂ ಕೇಳಿಬರಲಿಲ್ಲ. ಮಾತೃವಿಯೋಗದಿಂದ ಕೃಷ್ಣದೇವರಾಯನು ವ್ಯಸನದಿಂದ ಮ್ಲಾನನಾಗಿದ್ದನು. ನಾಗಲಾದೇವಿಯನ್ನು ಕೆಡದಂತೆ ಔಷಧಮಿಶ್ರಿತವಾದ ತೈಲ ದೋಣಿಯಲ್ಲಿ ಮುಳುಗಿಸಿಡಲ್ಪಟ್ಟಿತ್ತು. ಮಾತೃಭಕ್ತನಾದ ಕೃಷ್ಣದೇವರಾಯನು, ತಾಯಿಯ ಕಳೇಬರವನ್ನು ಕಂಡು ಚಿಕ್ಕಮಗುವಿನಂತೆ ರೋದಿಸಿದನು. ಶೋಕಮಯ ಸಂತಾಪ-ಸಂದೇಹಗಳ ಸುಳಿಗಳೊಂದಿಗೆ ಉತ್ತರಕ್ರಿಯೆಗಳೆಲ್ಲಾ ಸಕ್ರಮವಾಗಿ ನೆರವೇರಿದುವು.

ದೀರ್ಘಾಲೋಚನೆಯಾದ ತಿಮ್ಮರಸನು, ನಡೆದ ಘಟನೆಗಳನ್ನು ವಿಚಾರಮಾಡುತ್ತ, 'ಅಜ್ಞಾತಾದೇವಿ ಎಂಬುವಳಿಗೂ, ರಾಯನ ಪ್ರೇಮ ಪಾತ್ರಳಾದ ಆ ರಮಣೀಮಣಿಗೂ ಏನೋ ಸಂಬಂಧವಿರಬಹುದು. ಈ ಅಜ್ಞಾತಾದೇವಿ ತಿಪ್ಪಾಂಬೆಯೊಂದಿಗೆ ಸೇರಿಕೊಂಡು ಏನೋ ಘಾತುಕಾಲೋಚನೆಮಾಡಿಕೊಂಡಿರಬಹುದು. ಈ ಇಬ್ಬರಲ್ಲಿ ಒಬ್ಬರು ನಾಗಲಾದೇವಿಯನ್ನು ಕೊಂದಿರಬೇಕು. ಘಾತುಕಳಾದ ತಿಪ್ಪಾಂಬೆ ತನ್ನ ಸಹಾಯಕಿಗೆ ದ್ರೋಹ ಬಗೆದಳೋ, ಅಥವಾ ಅವರಿಬ್ಬರೂ ಮೊದಲೇ ಸಂಕಲ್ಪಿಸಿಕೊಂಡೇ ಅಜ್ಞಾತಾ ಸಿಕ್ಕಿಬಿದ್ದಳೋ ತಿಳಿಯದು. ಬಂದಿಸಿಯ ಮಾಯಕ್ಕೆ ಬಂದೀಖಾನೆಯ ಯಾರೋ ಒಬ್ಬನ ಸಹಾಯವು ಇದ್ದೀತು. ಮಂತ್ರೌಷಧಿಯಿಂದ ಮಾಯವಾದುದು ತೀರ ಸುಳ್ಳು....' ಎಂದು ನಿರ್ಧರಿಸಿದನು.

ಬಂದೀಖಾನೆಯಿಂದ ಪಾರಾದ ಅಜ್ಞಾತಾದೇವಿ ಆ ಪುರುಷ ವೇಷದಲ್ಲಿಯೇ, ತಪ್ಪಲಹಳ್ಳಿಯ ತನ್ನ ಗುಡಿಸಲನ್ನು ಸೇರಿದಳು. ಅಲ್ಲಿಯ ಹೆಂಗಸರು ಅವಳ ಗುರುತು ಹಿಡಿದು, ಬಾಲಿಕೆಯ ಕಣ್ಮರೆಯಿಂದ ಒಮ್ಮೆಲೆ ಅಳಲಾರಂಭಿಸಿದರು. ಅವಳು ಆನೆಗೊಂದಿಯ ಬಂದೀಖಾನೆಯಿಂದ ಪಾರಾಗಿ ಬಂದುದನ್ನು ಕೇಳಿ, ಆ ಗ್ರಾಮದ ಸ್ತ್ರೀ ಪುರುಷರೆಲ್ಲರೂ ಧಾವಿಸಿಬಂದರು. ಎಲ್ಲರೂ ಮನೋದ್ವಿಗ್ನರಾಗಿದ್ದರು. ಮಾಯವಾದ ಬಾಲರಾಣಿಯನ್ನು ಶೋಧಿಸಲು ಈ ಮೊದಲೇ ಅನೇಕ ಬಂಧು

ಗಳು ಅತ್ತಿತ್ತ ಓಡಿದ್ದರು. ಆ ಬಾಲರಾಣಿಯು ಮೇಲೆ ಅವರೆಲ್ಲರಿಗೂ ಎಷ್ಟು ಪ್ರೀತಿ! ಎಷ್ಟು ವಿಶ್ವಾಸ! ಎಷ್ಟು ಗೌರವ! ಆ ಬಾಲೆಯು ಮೇಲೆ ಮಹಾಕಾಳಿಯು ಆವಾಹನೆಯಾಗಿ, ಅವರೆಲ್ಲರಿಗೂ ಅವಳೇ ಮಹಾ ಕಾಳೀ ಮಾತೆಯ ಆಜ್ಞೆಯನ್ನು ತಿಳಿಸುತ್ತಿದ್ದಳು. ಅಂತಹ ಮಹಾ ದೇವಿಯ ಮಗು ಎಲ್ಲಿ ಹೋದಳೋ!

ಮಲ್ಲನಾಯಕನಂತೂ ತನ್ನ ತಪ್ಪಿನಿಂದಲೇ ಹಾಗಾಯಿತೆಂದು ಹಣೆ ಬಡಿದುಕೊಂಡು ಗೋಳಿಟ್ಟನು. ಅವರಿಗೆಲ್ಲಾ ಅಜ್ಞಾತಾ ದೇವಿಯೇ ಧೈರ್ಯ ಹೇಳಬೇಕಾಯಿತು. "ಶಾಂತರಾಗಿರಿ. ನಿಮ್ಮದಾವದೂ ಏನೂ ತಪ್ಪಿಲ್ಲ. ಮಹಾಕಾಳಿ ಬೇಗದಲ್ಲಿ ತನ್ನ ಕಂದಮ್ಮನನ್ನು ಬರಮಾಡಿ ಕೊಳ್ಳುವಳೆಂದು ನಂಬಿರಿ. ಇಂದು ಶೈಲಭವನದ ಭದ್ರಕಾಳಿಗೆ ಮಹಾ ಪೂಜೆಯನ್ನು ಮಾಡಿ ಪ್ರಾರ್ಥಿಸೋಣ....." ಎಂದು ಸಮಾಧಾನ ಹೇಳಿ ಅಪ್ಪಣೆ ಕೊಟ್ಟಳು. ಹೆತ್ತವಳೇ ಹೀಗೆ ಧೈರ್ಯ ಹೇಳುವುದನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯವೂ, ಅವಳ ಮೇಲೊಂದು ಅಪೂರ್ವ ವಾದ ಮಹತಾಬುದ್ಧಿಯೂ, ಗೌರವವೂ ಇಮ್ಮಡಿಯಾಯಿತು.

ಅಂದು ಅಪರಾಹ್ನದಲ್ಲಿ ಅಜ್ಞಾತಾದೇವಿ ಗುಡಿಸಲಿನಿಂದ ನಿಜವಾದ ವೈರಾಗ್ಯದೇವಿಯೇ ಹೊರಟಂತೆ ಹೊರಟಳು. ಅವಳ ಮುಖವು ಸೌಂದರ್ಯದಿಂದ ಶೋಭಾಯಮಾನವಾಗಿ, ಪೂಜ್ಯಭಾವ ದಾಯಕವಾಗಿ, ಶಾಂತ ಗಂಭೀರವಾಗಿ, ತೇಜಃಪುಂಜವಾಗಿ ನೋಟಕರ ತಲೆಯನ್ನು ಭಕ್ತಿಯಿಂದ ಬಾಗಿಸುವಂತಹುದಾಗಿತ್ತು. ಕೈಯಲ್ಲಿ ಒಂದೊಂದು ಸುವರ್ಣ ಕಂಕಣವೂ, ಕೊರಳಲ್ಲೊಂದು ತುಲಸೀ ಮಾಲೆಯೂ, ಅದರಲ್ಲೊಂದು ಬಂಗಾರದ ಪದಕವೂ, ಕಿವಿಗಳಲ್ಲಿ ಕೆಂಗಿಡಿ ಗಳಿಂದೊಪ್ಪುವ ತುಲಸೀಮಣಿಗಳೂ ಅವಳ ಆಭರಣಗಳಾಗಿದ್ದುವು. ಉಟ್ಟಿರುವುದು ಧವಳಾಂಬರ. ತೊಟ್ಟಿರುವುದೊಂದು ಸಾದಾ ರವಿಕೆ. ಹಣೆ ಯಲ್ಲಿ ನೆಲ್ಲೀ ಕಾಯಿಯಗಲದ ಚಾಂದಿನ ಬೊಟ್ಟು. ತಲೆಯಲ್ಲಿ ಕಪ್ಪಾಗಿ ತುಂಬಿರುವ ವೇಣೀ ರಾಶಿಯನ್ನು ನೆತ್ತಿಯಮೇಲೆ ಮುಡಿ ಹಾಕಿಕೊಂಡಿ ದ್ದಳು. ತಪಸ್ವಿನಿಯಂತೆಯೇ ಕಾಣುತ್ತಿದ್ದಳು. ಅವಳಿಗೆ ಮೂವತ್ತು ವರ್ಷ ವಯಸ್ಸೆನ್ನುವಳಾದರೂ ಇಪ್ಪತ್ತೈದು ವರ್ಷದ ಯುವತಿಯಂ

ಶಿದ್ದಳು. ಪುತ್ಥಳಿವರ್ಣವು ಒಳ್ಳೇ ಕಾಂತಿಯುತವಾಗಿತ್ತು. ಕೃಶಾಂಗಿಸಿ ಯಾದರೂ ಚುರುಕಾಗಿ, ದೃಢವಾಗಿ, ಮನೋಹರವಾಗಿ, ಸುಕುಮಾರಿ ಯಾಗಿ ಕಾಣುತ್ತಿದ್ದಳು. ಅವಳು ಈ ವಿರಕ್ತವೇಷಕ್ಕೆ ಬದಲಾಗಿ, ತಲೆಯಲ್ಲಿ ಕಿರೀಟವನ್ನೂ ಅದಕ್ಕೆ ತಕ್ಕ ಭೂಷಣಾಭರಣಾದಿಗಳನ್ನೂ ಧರಿಸಿದಳಾದರೆ ಮಹಾ ಸಾಮ್ರಾಜ್ಞಿಯಾಗಿ ಕಾಣಿಸುವಳೆನ್ನಲು ಸಂದೇಹವೇ ಇಲ್ಲ.

ಅವಳು ಆ ಹಳ್ಳಿಯ ಹೊರಭಾಗಕ್ಕೆ ಬರುತ್ತಲೇ ಅಲ್ಲಿ ಮೇಯು ತ್ತಲಿದ್ದ ಕುದುರೆಗಳಲ್ಲೊಂದು ಓಡೋಡಿ ಅವಳ ಬಳಿಗೆ ಬಂದು ಹರ್ಷ ದಿಂದ ನಿಂತಿತು. ಒಡನೆಯೇ ಸಮೀಪದಲ್ಲಿದ್ದೊಬ್ಬನು, ಧಾವಿಸಿ ಬಂದು ಆ ಕುದುರೆಯ ಬೆನ್ನಿಗೆ ಜೀನು ಹಾಕಿ ಕಡಿವಾಣವನ್ನು ಸಿಕ್ಕಿಸಿ ಸಿದ್ಧ ಪಡಿಸಿದನು. ಕೂಡಲೇ ಅವಳು ಛಣ್ಣನೆ ಹಾರಿ ಆ ಕುದುರೆಯ ಬೆನ್ನನ್ನಲಂಕರಿಸಿದಳು. ಬಳಿಕ ಇದಿರಿಗೆ ಕಾಣುವ ಶೈಲಪಙ್ಕ್ತಿಯ ಕಡೆಗೆ ಅವಳ ಧೀರ ಸವಾರಿ ಹೊರಟಿತು.

ಸೊಂಡೂರು ಬೆಟ್ಟಗಳು ಎಂತಹ ವಿಚಿತ್ರಾಕಾರವುಳ್ಳವು! ಚೂಪಾಗಿಯೂ, ವಕ್ರವಾಗಿಯೂ, ಪ್ರಪಾತವಾಗಿಯೂ ಇರುವ, ತುಂಡಾ ಗಿಯೂ, ಗುಂಡಾಗಿಯೂ, ಪ್ರಚಂಡವಾಗಿಯೂ, ಉದ್ದಂಡವಾಗಿಯೂ ಕಾಣುವ ಕರೀ ಮತ್ತು ಕಂದುಬಣ್ಣದ ಬಂಡೆಗಳು ಬೆಟ್ಟದ ತುಂಬಾ ಎದ್ದೆದ್ದು ನಿಂತು ಅವಳನ್ನು ನೋಡುತ್ತಿದ್ದುವು. ಕೆಲವು ಕೋಡು ಗಲ್ಲುಗಳು ಕೈಲಾಸ ಪರ್ವತದ ಶಿಖರಗಳಂತೆ ಮನೋಹರವಾಗಿ ಗಗನಾಂ ಗಣವನ್ನು ಚುಂಬಿಸಿಕೊಂಡಿದ್ದುವು. ಅಲ್ಲಿ ಸಂಚಾರಕ್ಕೆ ತಕ್ಕ ದಾರಿಯೇ ಇರಲಿಲ್ಲ. ಆದರೆ ಆ ಸಿಡುವೆಟ್ಟಗಳ ನಡುತಳದಲ್ಲಿ 'ನಾರೀ ತೊರೆ' ಎಂಬ ಪುಟ್ಟ ಪ್ರವಾಹವೊಂದು ಹಾವಿನ ನಡಿಗೆಯಂತೆ ಓರೆಕೋರೆಯಾಗಿ ಹೋಗಿತ್ತು. ಅದು ಗುಡ್ಡ-ಬೆಟ್ಟ-ಕೋಡುಗಲ್ಲು ಗಳನ್ನು, ತನ್ನ ಹರಿತ ಕೊರೆತಗಳ ಬಲದಿಂದ ಒಡೆದು ಸೀಳಿಕೊಂಡು ಹರಿಯುತ್ತಿತ್ತು. ಅಂತಹ ತೊರೆ ಕೊರೆದ ಭಾಗಗಳು, ಕೈಲಾಸಕ್ಕೆ ಹೋಗುವ ಪ್ರಕೃತಿಜನ್ಯವಾದ ಹೆಬ್ಬಾಗಿಲುಗಳಂತೆ, 'ಭೀಮನ ಗಂಡಿ' 'ಹನುಮನ ಗಂಡಿ' 'ನೃಸಿಂಹ ಗಂಡಿ' ಎಂಬ ಹೆಸರಿನಿಂದ, ಮೂರು

ದ್ವಾರಗಳಾಗಿ ನಿಂತು ಮೆರೆಯುತ್ತಿದ್ದುವು. ಒಂದಕ್ಕಿಂತ ಒಂದು ಅಗಾಧವಾಗಿರುವ ಆ 'ಗಂಡಿ'ಗಳನ್ನು ದಾಟುತ್ತ, ಆಕಾಶವನ್ನು ಮುತ್ತಿಡುವ ನೃಸಿಂಹಗಂಡಿಯ ಬುಡದಲ್ಲಿ ಅಜ್ಞಾತಾದೇವಿ ಕುದುರೆಯನ್ನಿಳಿದಳು. ಆಗಲೇ ಸಂಜೆಯಾಗುತ್ತಿದ್ದಿತು.

ಇಲ್ಲಿಯ ಸೃಷ್ಟಿ ಸೌಂದರ್ಯವೇ ಸೌಂದರ್ಯ! ಇಲ್ಲಿಯ ಸೌಂದರ್ಯವೇ ಪ್ರಪಂಚದ ಬೇರೆಬೇರೆ ಭಾಗಗಳಿಗೆ ಕೊಂಚ ಕೊಂಚ ಹೋಗಿರಬೇಕು. ನಾಲ್ಕು ಸುತ್ತಲೂ ಮೇಘ ಮಂಡಲದೊಳಗೆ ಹೆಣೆದುಕೊಂಡಿರುವ ನೀಳಗಲವಾದ ಆ ಬೆಟ್ಟಗಳ ಅಟ್ಟಳಿಗೆಗಳ ಆ ಸೊಗಸನ್ನು ನೋಡಬಾರದೆ? ಅವುಗಳಲ್ಲಿ ಒಂದು ಆಕಾಶಾಸನದ ಮೋಡವಾಸಿನ ಮೇಲೆ ಗಂಭೀರವಾಗಿ ಒರಗಿದಂತೆ, ನೀಲ ಶ್ಯಾಮಲ ವರ್ಣದಿಂದ ರಂಜಿಸುವ ಶೈಲರಾಜವು 'ಕುಮಾರಸ್ವಾಮಿ ಪರ್ವತ' ವೆಂಬ ದಿವ್ಯನಾಮಧಾರಿಯಾಗಿ ಮೆರೆಯುತ್ತಿದೆ. ಅದರ ಪಶ್ಚಿಮದ ತಪ್ಪಲಿಗೆಲ್ಲಾ ಮುಳುಗಲಿರುವ ಸೂರ್ಯನ ಚೆಂಗಿರಣಗಳು ಚಿನ್ನದ ಹೊದಿಕೆಯನ್ನು ಹೊದಿಸಿದ್ದುವು. ಬುಡದಲ್ಲಿ ತಿಮಿರಮಯವಾದ ಗಭೀರ ವಿಪಿನ. ಇನ್ನೊಂದು ಬದಿಯಲ್ಲಿ ಕೋಟೆಯ ಸಾಲಿನಂತೆ ದೃಢಬಲವಾಗಿ ನಿಂತಿರುವ ಕಡಿದಾದ ಬೆಟ್ಟಗಳು; ಅವುಗಳಲ್ಲಿರುವ ಅನೇಕಾನೇಕ ಕರೀ ಕಂದುಬಂಡೆಗಳು; ಅವುಗಳಲ್ಲಿ ಹಲವು, ಪ್ರಕೃತಿಶಿಲ್ಪಿ ಬುದ್ಧಿ ಪೂರ್ವಕವಾಗಿ ಮಾಡಿದ ದೇವಾಲಯಗಳ ವಿಮಾನಗಳಂತೆಯೂ, ಗೋಪುರಗಳಂತೆಯೂ ಕಂಗೊಳಿಸುತ್ತಿದ್ದುವು. ಭಯಂಕರ ಬೇತಾಳದ ಚಂದದಿಂದ ನಿಂತಿರುವ ನೃಸಿಂಹಶೈಲದ ಬುಡದಲ್ಲಿ, ನಾರೀತೊರೆಯ ತಳತಳ ನಿನಾದವು ವೃಕ್ಷರಾಜಿಗಳ ಅಡವಿಯೊಳಗೆಲ್ಲಾ ಪ್ರತಿನಿನಾದ ಗೈಯ್ಯುತ್ತಿದ್ದಿತು. ಆದರೂ ಅಲ್ಲಿಯ ಶಾಂತತೆಗೆ ಈಡಿಲ್ಲ ಜೋಡಿಲ್ಲ. ಆ ಪ್ರಶಾಂತ-ಭಯಾಂತ ಪ್ರದೇಶಕ್ಕೆ ಕಳಸವಿಟ್ಟಂತೆ, ನೃಸಿಂಹ ಗಂಡಿಯ ಪಕ್ಕದಲ್ಲಿ ಪುಟ್ಟದೊಂದು ಗುಡಿಯಿತ್ತು.

ಆ ಪ್ರಾಂತಪಲ್ಲಿ, ಶಾಂತ ನಿರ್ಜನೀಯದಂತೆ ಕಾಣುವ ಆ ಪ್ರದೇಶದಲ್ಲಿ, ಇಂದು ಸಹಸ್ರ ಸಂಖ್ಯೆಯ ವೀರರು ನಿಂತಿದ್ದಾರೆ! ಎಲ್ಲರ ಮುಖವೂ ಚಿಂತೆಯಿಂದ ಮ್ಲಾನವಾಗಿತ್ತು. ಅಂತೆಯೇ

ಮೌನವಾಗಿದ್ದಾರೆ: ಇಲ್ಲದಿದ್ದರೆ ತಮ್ಮ ನಾಯಕಿಯನ್ನು ಕಾಣುತ್ತಲೇ ಅವರೆಲ್ಲರೂ ಜಯರವಗಳಿಂದ ಆನಂದ ಕೋಲಾಹಲವನ್ನೆಬ್ಬಿಸಿ ಬಿಡುತ್ತಿದ್ದರು. ಎಲ್ಲರೂ ಶಾಂತ ರೀತಿಯಿಂದ, ಗೌರವ ಮರ್ಯಾದೆಗಳಿಂದ ಅಜ್ಞಾತಾದೇವಿಗೆ ದಾರಿ ಬಿಡುತ್ತಿರಲು, ಅವಳು ನಾರೀ ತೊರೆಯಲ್ಲಿ ಕೈಕಾಲು ತೊಳೆದುಕೊಂಡು ದೇವಾಲಯವನ್ನು ಪ್ರವೇಶಿಸಿ, ಭದ್ರಕಾಳಿಯ ದಿವ್ಯಮೂರ್ತಿಗೆ ಪ್ರಣಾಮ ಮಾಡಿದಳು.

ಆಮೇಲೆ ಅಲ್ಲಿಯೇ ದೇವಿಯ ಪೂಜೆಗಾಗಿ ಕುಳಿತಿದ್ದ, ರಾಜಲಕ್ಷಣ ಸಂಪನ್ನನಾದ ವೃದ್ಧನಿಗೆ ವಂದಿಸಿದಳು. ಆ ವೃದ್ಧನು "ದೇವಿ, ನೀನು ಕ್ಷೇಮವಾಗಿ ಬಂದುದಕ್ಕೆ ಸಂತೋಷವೂ, ಮುದ್ದುಮಗು ಅಪಾಯಕ್ಕೀಡಾದುದಕ್ಕೆ ದುಃಖವೂ ಉಂಟಾಗುವಂತಾಯಿತು...." ಎಂದು ಹೇಳುತ್ತಾ ಆಶೀರ್ವದಿಸಿದನು.

ಆ ವೃದ್ಧನೇ ಉದಯಗಿರಿಯ ರಾಜಾ ವೀರರುದ್ರ ಗಜಪತಿ!

ಕತ್ತಲಾಯಿತು; ಗುಡಿ ಪೂರಾ ದೀಪಾಲಂಕಾರಗಳಿಂದ ಬೆಳಗಿತು. ಸುತ್ತುಮುತ್ತೂ ನೂರಾರು ದೀವಿಟಿಗೆಗಳು ಜ್ಯೋತಿಗಳನ್ನು ಬೀರಿದುವು. ಸಾತ್ವಿಕಭಾವಜನಕವಾದ, ದಿವ್ಯಾಲಂಕಾರಗಳಿಂದೊಪ್ಪುವ ಭದ್ರಕಾಳೀ ಮೂರ್ತಿಯನ್ನು ವೀರರುದ್ರ ಗಜಪತಿಯೇ ಪೂಜಿಸಿದನು. ತಮ್ಮಟೆಗಳೂ ಮೃದಂಗಗಳೂ ಮೇಳವಾದ್ಯಗಳೂ ದನಿಗೈಯ್ದುವು. ಸಾತ್ವಿಕ ರೀತಿಯಾಗಿ ಮಹಾ ಪೂಜೆ ನೆರವೇರಿತು. ಬಾಲರಾಣಿ ಸುರಕ್ಷಿತೆಯಾಗಿ ಬಂದು ಸೇರಬೇಕೆಂದೂ, ಹಾಗೆಯೇ ಮಾದರ ಸಾದಿಗಳೂ ವಿಜಯಶಾಲಿಗಳಾಗಿ ಬೇಗನೇ ಬರಬೇಕೆಂದೂ, ಮುಖ್ಯವಾಗಿ ಪ್ರಾರ್ಥಿಸಲ್ಪಟ್ಟಿತು. ಎಲ್ಲರೂ ದೇವಿಯ ತೀರ್ಥ ಪ್ರಸಾದಗಳನ್ನು ಸೇವಿಸಿಕೊಂಡರು. "ಮಹಾಕಾಳೀ ಮಾತೆಗೆ ಜಯವಾಗಲಿ!" "ರಾಣೀ ಅಜ್ಞಾತಾದೇವಿಗೆ ಜಯವಾಗಲಿ!" ಎಂಬ ಘೋಷಣವು ಗುಡ್ಡಗುಡ್ಡಗಳಿಗೆ ತಾಗಿ ಪ್ರತಿಧ್ವನಿಕೊಡುತ್ತಿರಲು, ಆ ಮಹಾ ಬಂಧುಸಮೂಹವು ಅತ್ತಿತ್ತ ಕದಲಿತು. ಮುಂದಿನಿಂದ ಇಬ್ಬರು ದೀವಟಿಗೆಗಳವರು ಸಾಗುತ್ತಿರಲು, ಅವರ ಹಿಂದಿನಿಂದ ಅಜ್ಞಾತಾದೇವಿಯೂ, ವೀರರುದ್ರ ಗಜಪತಿಯೂ ಅಲ್ಲಿಂದ ಹೊರಟರು.

ಆ ಕಾಳೀಗುಡಿಗಿದಿರಾಗಿ, ನಾರೀತೊರೆಯ ಇನ್ನೊಂದು ದಂಡೆಯಲ್ಲಿ, ಎರಡು ನಿಡಿದಾದ ಗೋಲಾಯತ ಗಂಡಶಿಲೆಗಳು ಮೇಲು ಭಾಗದಲ್ಲಿ ಒಂದಕ್ಕೊಂದು ತಾಗಿಕೊಂಡು, ನಡುವೆ ಮುಕ್ಕೋಣಾಕಾರವಾದೊಂದು ಬಾಗಿಲನ್ನುಂಟುಮಾಡಿದ್ದುವು. ಆ ಬಾಗಿಲಲ್ಲಿ ಹೊಕ್ಕು ಇಕ್ಕಟ್ಟಾದ ದಾರಿಯಲ್ಲಿ ಕೊಂಚ ಮುಂದಕ್ಕೆ ನಡೆದು, ಉನ್ನತವಾದುದೊಂದು ಗುಡ್ಡದ ಮುಂದೆ ನಿಲ್ಲುತ್ತಲೇ ಅಲ್ಲೊಂದು ದೊಡ್ಡಬಾಗಿಲು ತೆರೆದುಕೊಂಡಿತು. ಆ ಬಾಗಿಲು ತೆಗೆದವರು, ಒಳಗಿನಿಂದ ದೀಪಗಳನ್ನು ಹಿಡಿದುಕೊಂಡು ಅಜ್ಞಾತಾದೇವಿಯನ್ನು ಬರಮಾಡಿಕೊಂಡರು. ಇಬ್ಬರೂ ಒಳಗೆ ಹೋಗುತ್ತಲೇ ಬಾಗಿಲನ್ನು ಮುಚ್ಚಿಬಿಟ್ಟರು.

ಅದೊಂದು ಪರ್ವತಗಳ ನಡುವಣ ವಲಯಾಕಾರವಾದ ವಿಶಾಲ ಪ್ರದೇಶ. ಸುತ್ತಲೂ ಬೆಟ್ಟಗಳು. ಬಳಿಯಲ್ಲೊಂದು ದೊಡ್ಡ ಕಲ್ಲಡಿಯ ಗೋಮುಖದಿಂದ ಜುಳಜುಳನೆ ತಿಳಿನೀರು ಸುರಿಯುತ್ತಿತ್ತು. ಅಲ್ಲಿಂದ ಕಾಲುವೆಯಾಗಿ ಓಡುತ್ತಿತ್ತು. ಅಲ್ಲಿ ಕೆಲವು ವೀರಪುರುಷರು ಪಾತ್ರೆಗಳನ್ನು ಉಜ್ಜುತ್ತಲೂ, ಮೈ ಕೈ ತೊಳೆಯುತ್ತಲೂ ಇದ್ದರು. ಆ ಗೋಮುಖದ ಬಳಿಯಲ್ಲಿ ಗುಡ್ಡಕ್ಕೆ ಹೊಂದಿದಂತೆಯೇ, ಹಾಸುಗಲ್ಲಿನ ಗೋಡೆಗಳಿಂದ ಕಟ್ಟಲ್ಪಟ್ಟ ನೀಳವೂ, ವಿಸ್ತಾರವೂ ಆದ ಕಟ್ಟಡವಿದೆ. ಅಲ್ಲಿ ಸುಮಾರು ಐನೂರರ ವರೆಗೆ ಜಲೋ ಕುದುರೆಗಳು ಕಟ್ಟಲ್ಪಟ್ಟದ್ದುವು. ಅವೆಲ್ಲವೂ ಅಜ್ಞಾತಾದೇವಿಯನ್ನು ಕಂಡು ಹರ್ಷದಿಂದ ಹೇಷಾರವವನ್ನು ಮಾಡಿದುವು. ಇನ್ನೊಂದು ಕಟ್ಟಡವು ಕೆಲವು ಆನೆಗಳಿಗೆ ಲಾಯವಾಗಿತ್ತು. ಮತ್ತೊಂದು ಬದಿಯ ಕಟ್ಟಡದಲ್ಲಿ ಕೆಲವು ಕಟ್ಟಾಳುಗಳು ಬಗೆಬಗೆಯ ಕಾರ್ಯಗಳಲ್ಲಿ ತೊಡಗಿದ್ದರು. ಕೆಲವರು ಕತ್ತಿ ತಿರುಗಿಸುತ್ತಲೂ, ಕೆಲವರು ತಾಲೀಂ ಮಾಡುತ್ತಲೂ, ಕೆಲವರು ಬರೆಯುತ್ತಲೂ, ಓದುತ್ತಲೂ, ಕಲಿಸುತ್ತಲೂ, ಕೆಲವರು ಬಗೆಬಗೆಯ ಮಾತುಕತೆಯಾಡುತ್ತಲೂ ಇದ್ದರು. ಬೇರೊಂದು ದೊಡ್ಡ ಕಲ್ಲಸಾಲೆಯಲ್ಲಿ ಭಾರೀ ಅಡುಗೆಯಾಗುತ್ತಿತ್ತು. ರುಚಿರುಚಿಯಾದ ಮೇಲೋಗರಗಳ ಸಪಕ್ವವಾದ ಸುವಾಸನೆ.

ಅಜ್ಞಾತಾ ದೇವಿಯನ್ನು ಕಂಡು, ಅಲ್ಲಲ್ಲಿ ವೀರಬಂಧುಗಳು

ಜಯಜಯಾಕಾರವನ್ನು ಮಾಡಿದರು. ಅಜ್ಞಾತೆ ತಾನು ಉದಯಗಿರಿಗೆ ಹೋದ ಮೇಲೆ ಜರುಗಿದ ಸಂಗತಿಗಳನ್ನು ವೀರರುದ್ರನಿಗೆ ಹೇಳುತ್ತಾ ನಡೆದಿದ್ದಳು. ಒಂದು ಮಂಟಪವನ್ನು ಹೊಕ್ಕಮೇಲೆ ವೀರರುದ್ರನು ತನ್ನ ಕೊಟಡಿಯ ಕಡೆಗೆ ತಿರುಗಿದನು. ಅಜ್ಞಾತಾದೇವಿ ಒಂದು ಸುರಂಗದೊಳಗೆ ಹೊಕ್ಕಳು. ಅವಳ ಮುಂದಿನಿಂದ ಸೇವಕನು ದೊಂದಿಯ ದೀಪವನ್ನು ಹಿಡಿದುಕೊಂಡು ಹೋಗುತ್ತಿದ್ದನು. ಕೊಂಚ ದೂರ ಹೋಗುತ್ತಲೇ ಇನ್ನೊಂದು ಮಂಟಪದಲ್ಲಿ ಹೊರಗೆ ಬಂದರು. ಅಲ್ಲಿಯೂ ಇದಿರಿಗೆ ಬೆಟ್ಟದಲ್ಲಿ ಕೊರೆದ ಸಾಲು ಸಾಲಾದ ಅನೇಕ ಕೊಟಡಿಗಳಿದ್ದುವು. ಅವುಗಳಲ್ಲೊಂದರೊಳಗೆ ಹೊಕ್ಕಳು ಅಜ್ಞಾತಾ ದೇವಿ.

ಒಳಗೆ ನಂದಾದೀಪವೊಂದು ಶಾಂತವಾಗಿ ಉರಿಯುತ್ತಿತ್ತು. ಅದರ ಬಳಿಯಲ್ಲಿ ಸುವರ್ಣದೊಂದು ಪೀಠದ ಮೇಲೆ ಪಟ್ಟೆಯ ಹೊದಿಕೆಯ ಒಂದು ಗ್ರಂಥವಿತ್ತು. ಅದರ ಪಕ್ಕದಲ್ಲೊಂದು ಕರವಾಲವು, ಹೂವಿನ ಅಲಂಕಾರದಿಂದ ಏನೋ ಒಂದು ಪವಿತ್ರ ವಸ್ತುವಾಗಿ ಕಾಣು ತ್ತಿತ್ತು. ಅವುಗಳ ಬದಿಯಲ್ಲಿಯೇ ಪ್ರತ್ಯೇಕವಾಗಿ ಎರಡು ಪತ್ರಗಳಿ ದ್ದುವು. ಅವುಗಳೇ ಅವಳು ಉದಯಗಿರಿಯಲ್ಲಿ ಕೈವಶ ಪಡಿಸಿಕೊಂಡು, ಮುಂದಾಗಿ ಕಳುಹಿಸಿದ ಪತ್ರಗಳು. ಅವಳು ಆ ಪತ್ರಗಳನ್ನು ತೆಗೆದು ಕಣ್ಣಿಗೆ ಒತ್ತಿಕೊಂಡು "ಅಮ್ಮ! ನಿನ್ನ ದುರ್ಗತಿಗೆ ಮೂಲ ಕಾರಣ ವಾದ ಸೃಷ್ಟನಾಪತ್ರಗಳು ನನಗೆ ಸಿಕ್ಕಿದುವು. ಇನ್ನು ಸಾಧಾರಣವಾಗಿ ತಂದೆ ಯನ್ನೂ ಲೋಕವನ್ನೂ ನಂಬಿಸಲು ಆ ರಾಮಾಯಣ ಗ್ರಂಥಾರ್ಥವು ದೊರೆಯಬೇಕಾಗಿದೆ. ಆಮೇಲೆ ಆ ಮೂಲಘಾತುಕನನ್ನು ಹಿಡಿಯು ವೆನು. ತಾಯಿ! ನಿನ್ನ ಪಾವಿತ್ರ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಬದ್ಧಕಂಕಣಳಾದ ನನಗೆ ದೇವನು ಇದುವರೆಗೂ ಸಹಾಯವನ್ನೇ ಮಾಡಿದನು. ಇನ್ನು ಬೇಗದಲ್ಲಿಯೇ ನಿನ್ನ ಪವಿತ್ರ ಚರಿತ್ರವನ್ನು ಲೋಕವು ಕಾಣುವುದು" ಎಂದು ನಿವೇದಿಸಿಕೊಂಡು, ಆ ಪತ್ರಗಳನ್ನು ಆ ಗ್ರಂಥದೊಂದಿಗಿಟ್ಟಳು.

ಬಳಿಕ ಆ ಕತ್ತಿಯ ಮೇಲೆ ದೃಷ್ಟಿಯನ್ನು ನೆಟ್ಟು, "ಹೇ ಶಕ್ತಿ

ಖಡ್ಗವೆ! ನಿನ್ನ ನಾಯಕನೆಲ್ಲಿರುವನು? ನಾಥಾ! ನಿನ್ನನ್ನು ಅನ್ಯಾಯವಾಗಿ ಶೂಲಕ್ಕೇರಿಸಿದ ಆ ರಾಯಮಂತ್ರಿಗಳನ್ನು ನ್ಯಾಯ ವಿಚಾರಣೆಗೆ ಸಿಲ್ಲಿಸಿ, ತಕ್ಕ ದಂಡನೆಯನ್ನು ಅನುಭವಿಸುವಂತೆ ಮಾಡುವ ಕಾಲವೂ ಸಮಿಾಪಿಸಿತು. ತಿಪ್ಪಾಂಬೆ ಬಲವಾದ ಸಾಕ್ಷಿಯಾಗಿ ದೊರೆತಿದ್ದಾಳೆ.... ಹೇ! ಪರಮಾತ್ಮ! ನನ್ನ ಮಗಳಿಗೆ ಏನೂ ಅಪಾಯವಾಗದಂತೆ ಕಾಪಾಡು. ಅವಳಿಲ್ಲದೆ ಈಗ ನಮಗೆಲ್ಲಾ ನಿರುತ್ಸಾಹವಾಗಿರುವುದನ್ನು ನೀನು ಕಾಣೆಯಾ? ಆಪದ್ರಕ್ಷಕ! ನಿನ್ನನ್ನೇ ನಂಬಿರುವೆನು...." ಎಂದು ಕಣ್ಣುಮುಚ್ಚಿಕೊಂಡು ಬಹುಹೊತ್ತು ಧ್ಯಾನಿಸುತ್ತಿದ್ದಳು.

* * *

ಶತಮಾನಗಳ ಹಿಂದೆ ಕನ್ನಡನಾಡನ್ನು ಆಳಿದ ಕದಂಬ ವಂಶದ "ಭಗೀರಥ"ನೆಂಬ ರಾಜನು ಆ ಸೊಂಡೂರು ಬೆಟ್ಟಗಳೊಳಗೆ ಮಹತ್ತಾದ ಶೈಲಭವನಗಳನ್ನು ಕೊರೆಯಿಸಿ, ರಾಜಕೀಯ ಗುಪ್ತ ವಸ್ತುಸಂಗ್ರಹ, ರಹಸ್ಯಾಲೋಚನೆ ಮೊದಲಾದ ಕಾರ್ಯಗಳಿಗೆ ಉಪಯೋಗಿಸಿಕೊಂಡಿದ್ದನಂತೆ. ಕುಮಾರಸ್ವಾಮಿ ಪರ್ವತದಲ್ಲಿ ಕಾರ್ತಿಕೇಯ ದೇವಾಲಯವನ್ನು ಕಟ್ಟಿಸಿ, ಮೂರ್ತಿ ಪ್ರತಿಷ್ಠೆಮಾಡಿಸಿದವನೂ ಅವನೇ. ಆ ದೇವಾಲಯವು ಇಂದಿಗೂ ಒಂದು ಯಾತ್ರಾಸ್ಥಳವಾಗಿದೆ. ಅನಂತರ ಕಾಲಗತಿಯಿಂದ ಆ ಶೈಲಭವನದ ಕೆಲವು ಭಾಗಗಳು ಗುಡ್ಡಗಳಡಿಯಲ್ಲಿ ಹೂತುಹೋದುವು. ಜನಸಂಚಾರ ಶೂನ್ಯವಾಗಿ ಸುತ್ತುಮುತ್ತೂ ವನ್ಯಮೃಗಗಳ ಸಂಚಾರವೇ ಹೆಚ್ಚಿತು. ಅಲ್ಲಿ ಅಡಗಿಹೋದ ಶೈಲಭವನವನ್ನು ಕುರಿತು ಅಕ್ಕಪಕ್ಕದ ಗ್ರಾಮವಾಸಿಗಳು ಏನೋ ಕತೆ ಹೇಳುತ್ತಿದ್ದರು, ಅಷ್ಟೆ.

ಮುಂದೆ ವಿಜಯನಗರದ ಬುಕ್ಕರಾಯನು ಈ ಸೊಂಡೂರು ಬೆಟ್ಟಗಳ ಉಪಯೋಗವನ್ನು ಕಂಡುಹಿಡಿದು, ಅದು ಯುದ್ಧಕಾಲದಲ್ಲಿ ಶತ್ರುಗಳನ್ನು ಹಣ್ಣಿಗೆ ತರಲು ಯೋಗ್ಯಪ್ರದೇಶವೆಂದು ತಿಳಿದು, ಅಲ್ಲೊಂದು ದುರ್ಗವನ್ನು ಕಟ್ಟಿಸಿದ್ದನು. ಹಾಗು ಅಲ್ಲಿ ಸಿಕ್ಕುವ ಕಬ್ಬಿಣದ ಅದುರುಗಳನ್ನು ಅಗೆಯಿಸುವ ಕಾರ್ಯಕ್ಕೂ ಕೈಹಾಕಿಸಿದ್ದನು. ಆದರೂ ಶೈಲಭವನದ ರಹಸ್ಯಗಳು ಅವನಿಗೆ [illegible]ವಾಗಿರಲಿಲ್ಲ. ಕಡೆಗೆ

ಅದನ್ನು ಕಾಪಾಡಿ ಕಳ್ಳರೇ ಕಂಡುಹಿಡಿದು ಕೊಂಚಕೊಂಚವಾಗಿ ದುರಸ್ತಿಮಾಡುತ್ತಾ ಬಂದಿದ್ದರು. ಆ ಚೋರರು ಪ್ರದರ್ಶನ ಮಾಡಿದ ಭಯಂಕರ ದೃಶ್ಯಗಳಿಂದ, ಅಲ್ಲಿ ಕುಮಾರಸ್ವಾಮಿಯ ಭೂತಗಣಗಳು ತುಂಬಿ ತೂಗಾಡುತ್ತಿರುವುವೆಂದು ಭಯಂಕರವಾದ ಪ್ರವಾದವು ಹರಡಿತ್ತು. ಅಜ್ಞಾತಾ ದೇವಿಯ ಬಂಧುವೃಂದವೂ, ಈ ಪ್ರಾಂತದ ಕಾಡುಗಳ್ಳರ ಗುಂಪೂ ಸಮರಸರಾದಮೇಲೆ ಆ ಶೈಲಭವನವು ಅಭಿವೃದ್ಧಿ ಸ್ಥಿತಿಗೇರಿತ್ತು. ಸುತ್ತುಮುತ್ತಣ ಗ್ರಾಮಗಳೂ ಆ ಶೈಲಭವನಾಧಿನಾಯಕಿಯ ಆಜ್ಞೆಗೆ ವಿಧೇಯವಾಗಿದ್ದುವು.

೧೩

ಮರುದಿನ ಬೆಳಗಾದ ಮೇಲೆ ಅಜ್ಞಾತಾದೇವಿ ನಿತ್ಯ ನೈಮಿತ್ತಿಕಗಳನ್ನು ತೀರಿಸಿಕೊಂಡು, ಆ ಶೈಲಭವನದ ಬೇರೊಂದು ಕೋಣೆಯೊಳಗೆ ಹೊಕ್ಕಳು. ಅಲ್ಲಿ ವೃದ್ಧ ತಿಪ್ಪಾಂಬೆ ಬೆಪ್ಪು-ಬೆರಗು ನೋಟದಿಂದ ಪಿಳಿಪಿಳಿ ನೋಡುತ್ತಾ ಒಂದು ಕಲ್ಮಣೆಯ ಮೇಲೆ ಕುಳಿತಿದ್ದಳು. ಮೊನ್ನೆಯ ದಿನ ರಾತ್ರಿ ತನ್ನ ಅಂತಃಪುರದೊಳಗಿನಿಂದ, ಈ ಕೊಠಡಿಯೊಳಗೆ ಸೇರಿದ ತನ್ನ ಸ್ಥಿತ್ಯಂತರವನ್ನು ನೋಡಿ, ಸ್ವಪ್ನವೋ ದೃಷ್ಟಾಂತವೋ ಎಂದು ಅವಳಿಗೆ ಇನ್ನೂ ನಿಶ್ಚಯವಾಗಿಲ್ಲವೋ ಏನೊ! ಅಜ್ಞಾತಾದೇವಿಯನ್ನು ನೋಡುತ್ತಲೇ ಅವಳು ಬೆಚ್ಚಿ ಬಿದ್ದಂತಾದಳು. ಅದನ್ನು ಕಂಡು ಅಜ್ಞಾತಾದೇವಿ ಮುಗುಳ್ನಗುತ್ತ—"ಅಜ್ಜೀರಾಣಿ! ಸೆರೆಮನೆಯಲ್ಲಿದ್ದ ನಾನು ಇಲ್ಲಿಗೆ ಹೇಗೆ ಬಂದೆನೆಂದು ಆಶ್ಚರ್ಯಪಡುವಿರಲ್ಲವೆ?" ಎಂದಳು.

ತಿಪ್ಪಾಂಬೆ ಅದನ್ನು ಲಕ್ಷ್ಯ ಮಾಡದೆ ಹುಬ್ಬು ಸುರುಗಿಸಿ "ಇದೇನು ಕೇ..! ಈ ಹಣ್ಣು ಹಣ್ಣು ಮುದುಕಿಯನ್ನು ಯಾವ ಮೂರ್ಖನಿಗಾಗಿ ಅಪಹರಿಸಿದ್ದೊ! ಛೀಃ!"

ಅಜ್ಞಾತಾದೇವಿ ಶಿಲಾಸನವೊಂದರಲ್ಲಿ ಮಂಡಿಸಿ "ನನಗಾಗಿಯೇ! ಇದು ನನ್ನ ಜಾಗೆ. ಇಲ್ಲಿ ನೀವು ನಿಶ್ಚಿಂತೆಯಿಂದ ಜಪಮಾಡಿಕೊಂಡಿರಬಹುದು."

"ನೀನಾರೆ? ಆ ನಾಗಲೆಯನ್ನು ಕೊಂದವಳಲ್ಲವೇನೆ?"

"ಅದು ನಿಮಗೆ ಗೊತ್ತಿಲ್ಲವೆ? ಹಾಗೆಯೆ, 'ಸತ್ಯಕ್ಕೆ ಸಾವಿಲ್ಲ' ಎಂದೂ ನಿಮಗೆ ಗೊತ್ತಿದ್ದೀತು. ಅದಿರಲಿ, ಅಜ್ಜೀರಾಣಿ, ಅಂದು ನಿಮ್ಮೊಡನೆ ರಹಸ್ಯವಾಗಿ ಮಾತಾಡಬೇಕೆಂದೇ ನಾನು ನಿಮ್ಮ ಬಳಿಗೆ ಬಂದಿದ್ದೆ. ಅಷ್ಟರಲ್ಲಿ ನೀವು ನನ್ನನ್ನು ಸಿಕ್ಕಿಸಿ ಹಾಕಿ ತಪ್ಪಿಸಿಕೊಂಡಿರಿ. ನಾನೀಗ ನಿಮ್ಮನ್ನೂ ಹಿಡತರಿಸಿದ್ದಲ್ಲದೆ, ನಾನೂ ತಪ್ಪಿಸಿಕೊಂಡು ಬಂದೆ. ಹೇಗಿದೆ ನನ್ನ ಕತೆ?"

"ನಿನ್ನ ಕತೆ ಸುಟ್ಟಿತು. ನನ್ನೊಡನೆ ನಿನಗೇನು ಕೆಲಸ? ನೀನಾರು?"

"ನಾನು ಯಾರೆಂದು ನೀವು ತಿಳಿದಿದ್ದರೆ ನನ್ನ ಮೇಲೆ ತುಂಬಾ ವಿಶ್ವಾಸವಿಡುತ್ತಿದ್ದಿರಿ. ನಿಮಗೆ ಹೇಗೆ ಕೃಷ್ಣದೇವ ತಿಮ್ಮರಸರು ಶತ್ರುಗಳೋ ನನಗೂ ಹಾಗೆಯೇ. ನಿಮ್ಮ ಮನೆಯಲ್ಲಿ ನಿಮಗೆ ಅಪಾಯವಾದೀತೆಂದೇ ನಿಮ್ಮನ್ನು ಇಲ್ಲಿಗೆ ತರಿಸಿದ್ದೇನೆ. ಇಲ್ಲಿ ನಾನೂ ನೀವೂ ಒಂದಾಗಿ, ಅವರ ಮೇಲೆ ಹಗೆ ತೀರಿಸೋಣ. ಆದರೆ, ಅಜ್ಜೀರಾಣಿ, ಮೊದಲು ಮೊದಲು ನಿಮ್ಮ ಹಗೆತನದ ಕತೆಯನ್ನು ಹೇಳಬೇಕು. ಆ ಘಾತುಕರಾದ ರಾಜಮಂತ್ರಿಗಳು ನಿಮ್ಮ ಸಹೋದರರೊಬ್ಬರನ್ನು ಶೂಲಕ್ಕೇರಿಸಿದ್ದಾರೆಯೆ?"

ತಿಪ್ಪಾಂಬೆ ಕುತೂಹಲದಿಂದ ಅಜ್ಞಾತೆಯ ಮುಖವನ್ನೇ ದಿಟ್ಟಿಸಿ ನೋಡಿ ಬಳಿಕ,–"ಹೌದು. ನಿನಗೂ ಇದಕ್ಕೂ ಸಂಬಂಧವೇನೆ?"

"ಅವರನ್ನು ಏತಕ್ಕೆ ಶೂಲಕ್ಕೇರಿಸಿದರು?"

"ಏತಕ್ಕೆಂದರೆ, ನಿರಾತಂಕವಾಗಿ ಸಿಂಹಾಸನದಲ್ಲಿ ಕೂಡಲಿಕ್ಕೆ."

"ನಿಮ್ಮ ಸಹೋದರರು ಸಿಂಹಾಸನಕ್ಕೆ ಬಾಧ್ಯರಾಗಿದ್ದರೊ?"

"ಹೂಂ."

"ಹೇಗೆ?"

"ನನ್ನ ಮೊಮ್ಮಗನಿಗೆ ಆ ಬಾಧ್ಯತೆಯಿತ್ತು. ನನ್ನ ಸೋದರ ವಿರೂಪಾಕ್ಷರಾಯನು ಆ ಮಗುವಿನ ರಕ್ಷಕನಾಗಿದ್ದನು. ಆ ಧೂರ್ತನು ಅಲ್ಲ–ಈ ಧೂರ್ತ ರಾಯಮಂತ್ರಿಗಳು ಆ ಮಗುವಿಗೆ ವಿಷವನ್ನಿಕ್ಕಿ

ಕೊಂದು, ವಿರೂಪಾಕ್ಷನನ್ನು ಶೂಲಕ್ಕೇರಿಸಿವರು...."

"ಆಹಾ! ಪರಮ ಘಾತುಕರು!...." ಅಜ್ಞಾತೆಯ ಮುಖವು ಕೋಪದಿಂದ ಕೆಂಪು ಕೆಂಪಾಯಿತು. ಹಲ್ಲು ಕಡಿದಳು. "ಅಯ್ಯೋ! ನಾಥಾ!" ಎಂದು ಉದ್ಗರಿಸಿ ದೀರ್ಘಶ್ವಾಸವನ್ನು ಬಿಟ್ಟಳು.

"ಏನೆ? ಏನೆ? ನಿನಗೇನಾಯಿತೆ?"–ತಿಪ್ಪಾಂಬೆಯು ಕೌತುಕದಿಂದ ಕೇಳಿದಳು.

"ನಿಮ್ಮ ಆ ಸಹೋದರರು ನನಗೇನಾಗಬೇಕು ಬಲ್ಲಿರಾ?"

"ನನಗೇನು ಗೊತ್ತು?"

"ನನ್ನ ಪತಿ!"

"ಯಾರು?"

"ಅವರೇ! ನಿಮ್ಮ ಆ ಸಹೋದರರೇ. ಸಂಶಯವಿಲ್ಲ."

ತಿಪ್ಪಾಂಬೆ ಆಶ್ಚರ್ಯದಿಂದ ಅಜ್ಞಾತೆಯನ್ನು ಸೂಕ್ಷ್ಮವಾಗಿ ನೋಡುತ್ತ "ಸಂಶಯವಿಲ್ಲವೆ? ಅಂದರೆ ಇದುವರೆಗೆ ಸಂಶಯವಿತ್ತೆ?"

"ಹೌದು. ಅವರು ಇಂತಹರೆಂಬ ಗುಟ್ಟನ್ನು ನನ್ನ ಮುಂದೆ ಹೇಳಲೇ ಇಲ್ಲ. ಅವರು ತಮ್ಮ ಜೀವನದ ಬಹುಭಾಗವನ್ನು ರಹಸ್ಯವಾಗಿ ಕಳೆದದ್ದುಂಟಷ್ಟೆ?"

ತಿಪ್ಪಾಂಬೆ ತನ್ನೊಳಗೆ 'ಇದೇನೋ ವಿಚಿತ್ರವಾಗಿದೆ. ಇವಳ ಹಾಡಿಗೆ ತಕ್ಕ ತಾಳಹಾಕಿದರೆ ನನಗೆ ಅನುಕೂಲವಾಗುವ ಹಾಗಿದೆ' ಎಂದುಕೊಂಡು "ಹೌದು. ಘಾತುಕರಿಗೆ ಅಂಜಿಕೊಂಡು ಅವನು ಅಡಗಡಗಿಯೇ ಬಾಳಬೇಕಾಗಿತ್ತು."

"ಅವರು ಮದುವೆ ಮಾಡಿಕೊಂಡಿರುವುದು ನಿಮಗೆ ಗೊತ್ತಿದೆಯೆ"

"ಗೊತ್ತಿರಲಿಲ್ಲ."

"ಹೌದು. ನಿಮ್ಮೊಡನೆ ಹೇಳದಿದಲಿಕ್ಕೆ ಕಾರಣವುಂಟು. ಅದನ್ನೀಗ ಹೇಳಲಾರೆ. ಅಜ್ಜೀರಾಣಿ, ನಿಮಗೂ ಅವರಿಗೂ ಎಷ್ಟು ವಯಸ್ಸಿಗೆ ವ್ಯತ್ಯಾಸ?"

"ಅದು ನಿನಗೆ ಗೊತ್ತಿಲ್ಲವೆ? ಅರುಳು ಮರುಳು ಮುದುಕಿ ನನಗೆ ಸರಿಯಾದ ನೆನಪಿದೆಯೆ? ಸಾಯುವಾಗ ಸ್ವಲ್ಪ ಹಿಂದೆ ಮುಂದೆ ನಡು

ವಯಸ್ಸು."

"ಅಂದರೆ ನಿಮ್ಮ ತಂದೆಗೆ ವೃದ್ಧಾಪ್ಯದಲ್ಲಿ ಹುಟ್ಟಿದವರು?"

"ಹೌದು."

"ವಯಸ್ಸಿನಲ್ಲಿ ಇಷ್ಟು ಅಂತರವಿರುವುದರಿಂದಲೇ ಸ್ವಭಾವದಲ್ಲಿಯೂ ಇಷ್ಟು ಅಂತರವೇನೊ!" ಅಜ್ಞಾತಾದೇವಿ ತನಗೆ ತಾನೇ ಹೇಳಿಕೊಂಡಂತೆ ಹೇಳಿಕೊಂಡು "ಅಜ್ಜೀರಾಣಿ, ಈ ದುಷ್ಟ ರಾಜಮಂತ್ರಿಗಳು ಅವರನ್ನು ಯಾವ ರೀತಿಯಾಗಿ ಹಿಡಿದು ಶೂಲಕ್ಕೇರಿಸಿದರು? ಅವನ್ನು ವಿವರವಾಗಿ ಹೇಳಿರಿ."

"ನಿನ್ನ ಮಾತೇ ನನಗೆ ಆಶ್ಚರ್ಯವಾಗಿದೆ. ವಿರೂಪಾಕ್ಷನು ನಿನ್ನನ್ನು ಎಲ್ಲಿ ಯಾವಾಗ ವಿವಾಹವಾದನು? ನೀನು ಹೀಗಾಗಿರುವುದೇಕೆ? ಇದನ್ನು...."

"ಹಾಗಾದರೆ ನಾನೇ ಮೊದಲು ಹೇಳುವೆನು ಕೇಳಿರಿ. ಅಜ್ಜೀರಾಣಿ! ಹಿಂದೆ ಓಂಪಲ್ಲಿ ಎಂಬ ಗ್ರಾಮದಲ್ಲಿ ನಾನೊಬ್ಬಳು ಅನಾಥ ಬಾಲಿಕೆಯಾಗಿದ್ದೆ. ಅವರು ಅಂದರೆ ನಿಮ್ಮ ತಮ್ಮ ನನ್ನನ್ನು ಒಂದು ವೀರವಿದ್ಯಾ ಪ್ರದರ್ಶನದಲ್ಲಿ ಮೊದಲು ನೋಡಿದರು. ಮೆಚ್ಚಿದರು. ನಂತರ ವಿವಾಹ ಮಾಡಿಕೊಂಡರು. ಅವರ ಸಹಧರ್ಮಚಾರಿಣಿಯಾದ ಮೇಲೆ ನನ್ನ ಸುಖ ಸೌಭಾಗ್ಯ ಐಶ್ವರ್ಯಗಳಿಗೆ ಮೇರೆ ಇರಲಿಲ್ಲ. ಅವರು ನಡುನಡುವೆ ನನ್ನನ್ನಗಲಿ ಏನೋ ಕಾರ್ಯಗೌರವವೆಂದು ಕೊಂಡು ಎಲ್ಲಿಗೋ ಹೋಗುತ್ತಿದ್ದರು. ಹಿಂದಿರುಗುವಾಗ ಒಮ್ಮೊಮ್ಮೆ ಕೆಲವು ವಾರಗಳೂ, ಒಮ್ಮೊಮ್ಮೆ ಕೆಲವು ತಿಂಗಳುಗಳೂ ಆಗುತ್ತಿದ್ದವು. ಅವರು ಯಾಕೋ ಏನೋ ಆ ಹಳ್ಳಿಯಲ್ಲಿ ಬಹಳ ರಹಸ್ಯವಾಗಿ ವಾಸಿಸುತ್ತಿದ್ದರು. ನಾನು ಅನೇಕ ಬಾರಿ ಕೇಳಿದರೂ ಅವರ ನಿಜವೃತ್ತಾಂತವನ್ನು ನನಗೆ ಹೇಳಲಿಲ್ಲ. ಕಡೆಗೊಮ್ಮೆ ಇನ್ನು ಎಲ್ಲಿಗೂ ಹೋಗುವ ಕೆಲಸವಿಲ್ಲವೆಂದೂ, ಎಂದೆಂದಿಗೂ ಅಜ್ಞಾತವಾಸದಲ್ಲಿಯೇ ಇರಬೇಕಾಯಿತೆಂದೂ ಹೇಳಿದರು. ಏನೋ ರಾಜಭೀತಿಯಿಂದ ಅಡಗಿಕೊಂಡಿರುವಂತೆ ನನಗೆ ತೋರಿತ್ತು. ಮುಂದೆ ನಿಮ್ಮ ಕುಮಾರ ವೀರನರಸಿಂಹ ರಾಜರು ಸ್ವರ್ಗಸ್ಥರಾದರಲ್ಲಾ, ಅದಕ್ಕೊಂದು ತಿಂಗಳ ಮೊದಲು,

ಒಂದು ದಿನ ಸಂಜೆಯಲ್ಲಿ ತಿರುಗಾಡಲಿಕ್ಕಾಗಿ ಹೋದವರು ಹಿಂದಿರುಗಲೇ ಇಲ್ಲ. ರಾಜಾಧಿಕಾರಿಗಳು ಅವರನ್ನು ಹಿಡಿದುಕೊಂಡು ಹೋದರೆಂದು ಅವರು ತಮ್ಮ ಕುದುರೆಯ ಕೊರಳಿನಲ್ಲಿ ಸಿಕ್ಕಿಸಿ ಕಳುಹಿಸಿದ ಒಂದು ಪತ್ರದಿಂದ ನನಗೆ ತಿಳಿಯಿತು. ಮುಂದೆ ವಿಚಾರಿಸಲಾಗಿ, ಈ ಕೃಷ್ಣ ದೇವನೂ, ಮಂತ್ರಿ ತಿಮ್ಮರಸನೂ ಕೂಡಿ ಅವರನ್ನು ಶೂಲಕ್ಕೇರಿಸಿದ ರೆಂಬ ಘೋರವಾರ್ತೆ ನನಗೆ ತಿಳಿಯಿತು...." ಮುಂದೆ ಹೇಳಲಿಕ್ಕಾಗದೆ ಅಜ್ಞಾತಾದೇವಿಯ ಗಂಟಲು ಬಿಗಿದುಕೊಂಡಿತು.

"ಅಯ್ಯೋ! ನನ್ನ ಸಹೋದರ ವಿರೂಪಾಕ್ಷನ ವೃತ್ತಾಂತವನ್ನೇ ನೀನು ಹೇಳಿದೆ. ಅವನ ಮೇಲೆ ಕೃಷ್ಣದೇವ-ತಿಮ್ಮರಸರು ಯಾವಾಗಲೂ ಕತ್ತಿಯನ್ನು ಮಸೆದುಕೊಂಡಿದ್ದುದರಿಂದ ಅವನು ಅಡಗಿಕೊಂಡೇ ಕಾಲ ಕಳೆಯಬೇಕಾಯಿತು. ನನ್ನ ಮಗನು ಪಟ್ಟಕ್ಕೆ ಬಂದ ಮೇಲಾದರೂ ಸುಖವಾಗಿರಬಹುದೆಂದು ಭಾವಿಸಿದ್ದನು. ಅದಕ್ಕೂ ಬಿಡದೆ, ನನ್ನ ಮಗ ವೀರನರಸಿಂಹನಿಗೇ ವಿಷವಿಕ್ಕಿ ಕೊಂದರು. ಅಡಗಿದ್ದ ವಿರೂಪಾಕ್ಷನನ್ನು ಎಲ್ಲಿಂದಲೋ ಹಿಡಿಸಿ ತರಿಸಿ ನನ್ನ ಕಣ್ಣೆದಿರೇ ಶೂಲಕ್ಕೆ ಏರಿಸಿದರು."

"ಹೀಗಾಗುವುದೆಂದು ಅವರಿಗೆ ಸಿಕ್ಕಿಬೀಳುತ್ತಲೇ ಗೊತ್ತಾಯಿತೆಂದು ತೋರುತ್ತದೆ. 'ಇನ್ನು ನನ್ನ ದರ್ಶನವು ನಿನಗಾಗಲಿಕ್ಕಿಲ್ಲ' ಎಂದು ಆ ಕಟ್ಟಕಡೆಯ ಪತ್ರದಲ್ಲಿ ಬರೆದಿದ್ದರು. ಆಗ ಅವರು ನನ್ನನ್ನೂ ಮಗುವನ್ನೂ ನೆನೆದುಕೊಂಡು ಎಷ್ಟು ಪರಿತಪಿಸಿದರೋ ಏನೊ!"—ಗದ್ಗದ ಸ್ವರದಿಂದ ಅಜ್ಞಾತೆಯೆಂದಳು.

"ಅದನ್ನೆಲ್ಲಾ ಇನ್ನು ಹೇಳಿ ಫಲವೇನಮ್ಮ? ಆದರೆ ಅವನು ಸಾಯುವ ಮುಂಚೆ 'ಈ ಸೇಡು ತೀರಿದಾಗಲೇ ನನ್ನ ಆತ್ಮಕ್ಕೆ ಶಾಂತಿ!' ಎಂದು ಕೂಗಿದ್ದಾನೆ. ಅದಕ್ಕೇ ನಾನು ಆ ಘಾತುಕರ ಮೇಲೆ ಹಗೆಯಾಗಿದ್ದೇನೆ. ಸಿಂಹಾಸನವು ತನಗೇ ಗಟ್ಟಿಯಾಗಬೇಕೆಂದು ನನ್ನ ಮೊಮ್ಮಗನನ್ನೂ ಕೊಂದನು. ಅದಕ್ಕೇ ಆ ಸಿಂಹಾಸನವನ್ನು ಯವನರಿಗಾದರೂ ಒಪ್ಪಿಸಿ, ಅವರನ್ನು ದಾರಿಗೇಡು ಮಾಡಿ ಕೊಲ್ಲಬೇಕೆಂದು ಸಂಕಲ್ಪಿಸಿದ್ದೇನೆ. ನೋಡೇ, ಈ ಹಗೆಯ ಬೆಂಕಿ ಹಣ್ಣು

ಮುದುಕಿಯಾದ ನನ್ನನ್ನು ಘೋರ ರಾಕ್ಷಸಿಯಂತೆ ಮಾಡಿಬಿಟ್ಟಿತು. ಅಂತೆಯೇ ನಾಗಲೆಯನ್ನು ಕೊಂದುಹಾಕಿದೆ. ನನ್ನ ಹೃದಯವನ್ನೂ ನನ್ನ ಸಹೋದರನ ಆತ್ಮವನ್ನೂ ತಣಿಸಲಿಕ್ಕೆ ಇನ್ನು ಸಾವಿರ ಹತ್ಯ ವಾದರೂ ಮಾಡಿಯೇನು!" ಎನ್ನುವಾಗ ಆ ವೃದ್ಧ ಹಂತಕಿಯ ಸ್ವರವು ಕರ್ಕಶವಾಯಿತು.

"ಶಾಂತರಾಗಿರಿ ಅಜ್ಜೀರಾಣಿ! ನಿಮ್ಮ ಹಾಗೆ ನಾನೂ ವೈರ ಸಾಧಕಳಾಗಿದ್ದರೂ ನಿಮ್ಮಂತೆ ಘೋರ ಕಾರ್ಯಗಳನ್ನು ಮಾಡ ಲಾರೆನು. ಅಲ್ಲದೆ ನೀವು ಮಾಡಿದ್ದನ್ನು ನಾನು ಒಪ್ಪಲಿಕ್ಕೂ ಇಲ್ಲ."

"ಯಾಕೆ?"

"ಅಜ್ಜೀರಾಣಿ! ನೀವು ಹಿರಿಯರಾಗಿ, ಹಿರೇ ರಾಣಿಯಾಗಿ, ಹಿಂದೂ ಲಲನೆಯಾಗಿ, ಹಿಂದೂ ರಾಷ್ಟ್ರಕ್ಕೇ ಘಾತಮಾಡಲು ಬಗೆದಿರಲ್ಲ! ಕೃಷ್ಣದೇವ ತಿಮ್ಮರಸರು ಮಾತ್ರವೇ ನಿಮ್ಮ ವೈರಿಗಳಾಗಿರುವಾಗ 'ತುರುಶತ್ರುದುರವ ಸಂಹರಿಸಲಿಕೆ ಪೆರ್ಬುಲಿಯ ಕರೆದಂತೆ' ನೀವು ಮೂರ್ತಿಭಂಜಕರೊಂದಿಗೆ ಸೇರಬಹುದೆ? ವೈಯಕ್ತಿಕವಾದ ದ್ವೇಷ ವನ್ನು ಸಾರ್ವತ್ರಿಕರ ಮೇಲೆ ತೋರಿಸುವುದೆ?"

"ಮತ್ತೆ ಸರಿಯಾಗಿ ಸೇಡು ತೀರಿಸುವುದೆಂದರೆ ಹೇಗೊ?"

"ಕಿರಿಯಳಾದ ನಾನು ನಿಮಗೆ ಹೇಳಲು ಶಕ್ತಳೆ? ಆದರೂ ನನ್ನ ಸಿದ್ಧಾಂತವನ್ನು ಕೇಳಿ ತಪ್ಪಿದ್ದರೆ ತಿಳಿಸಿರಿ. ಆ ರಾಯಮಂತ್ರಿಗಳು ತಮ್ಮ ಹಿಂದಣ ಅಪರಾಧಗಳನ್ನು ಮುಚ್ಚಿಟ್ಟುಕೊಳ್ಳಲಿಕ್ಕಾಗಿ ಸತ್ಕಾರ್ಯ ಗಳನ್ನು ಮಾಡುತ್ತ, ಉತ್ತಮ ರಾಜಮಂತ್ರಿಗಳೆಂಬ ಹೆಸರನ್ನು ಗಳಿಸು ತ್ತಿದ್ದಾರೆ. ಅವರ ಅಪರಾಧಗಳನ್ನು ಪ್ರಜೆಗಳೆಲ್ಲಾ ತಿಳಿಯುವಂತೆ ಮಾಡಿ, ಪ್ರಜೆಗಳಿಂದಲೇ ಅವರಿಗೆ ತಕ್ಕ ದಂಡನೆಯನ್ನು ಕೊಡಿಸಬೇಕು. ಆಗ ಅವರು ಬದುಕಿದ್ದರೂ ಸತ್ತಹಾಗೆ! ನೂರು ಬಾರಿ ಕೊಲೆಯಾದವರ ಹಾಗೆ!"

"ಆಯಿತಾಯಿತು. ಬಾಯಿಯಿಂದ ನೀನು ಬೇಕಾದ್ದು ಮಾಡುವಿ!"

"ನೀವೇ ನೋಡುವಿರಂತೆ. ಈಗ ಮೂರು ಭಾಗದಷ್ಟು ಕೆಲಸ

ಮುಗಿದಿದೆ. ನನ್ನ ಈ ಯೌವತ್ತೂ ದುರ್ಗತಿಗೆ ಮೂಲನಾಗಿ ಇನ್ನೊಬ್ಬ ಶತ್ರು ನನಗಿದ್ದಾನೆ. ಈಗ ಅವನೂ ನನ್ನ ಬಲೆಗೆ ಬಿದ್ದಾಯಿತು. ನನ್ನ ಪತಿಯ ಪ್ರಕರಣದಲ್ಲಿ ನೀವೊಬ್ಬರು ಬಲವಾದ ಸಾಕ್ಷಿಯಾಗಿದ್ದೀರಿ!"

"ಸರಿ. ಇನ್ನೂ ಉಳಿದ ನನ್ನ ಕಾರ್ಯವನ್ನು ನೀನೇ ಮಾಡುವಿಹಾಗಾದರೆ. ಬಹಳ ಒಳ್ಳೇದಮ್ಮ. ಇನ್ನು ನಾನು ನನ್ನ ಪಾಡಿಗೆ ಹೋಗುವೆನು ಬಿಡು."

"ಅದೆಲ್ಲಿಗವ್ವಾ ಹೋಗುವಿರಿ? ವಿಜಯನಗರಕ್ಕೆ ಹೋದರೆ ನಾಗಲಾದೇವಿಯ ಹತ್ಯಾಕಾಂಡವು ನಿಮ್ಮನ್ನು ಸುತ್ತುತ್ತದೆ. ಅಲ್ಲದೆ ನೀವು ಅದಿಲ್‌ಷಹರೊಡನೆ ಮಾಡಿದ ಒಳಸಂಚೂ, ನಿಮ್ಮ ಆ ಸುರಂಗ ಮಾರ್ಗವೂ ಈಗ ಬಟ್ಟಬಯಲಾಗಿದೆ."

"ಅದು ಹೇಗಾದರೂ ಸಾಯಲಿ. ನಾನು ಕೃಷ್ಣಾ, ರಾಮಾ ಎಂದು ಕಾಶಿಗೆ ಹೋಗೇನು!"

"ಕಾಶೀ ಪ್ರಯಾಣಕ್ಕೂ ಕಾಲವು ಪಕ್ವವಾಗಿಲ್ಲ ಹಿರೇರಾಣಿಯವರೆ. ಎಲ್ಲಾ ವಿವರ ನ್ಯಾಯದೇವತೆಯ ಮುಂದೆ ನಿವೇದಿಸಲ್ಪಡುವವರೆಗೆ ನೀವು ಈ ಶೈಲಭವನದಲ್ಲಿಯೇ ಸುರಕ್ಷಿತವಾಗಿರಬೇಕು. ಆ ನ್ಯಾಯದೇವತೆಯ ಕಿಂಕರಿಯೇ ನಾನು?"

೧೪

ದಿನಗಳ ಮೇಲೆ ದಿನಗಳುರುಳಿದಂತೆ ಅಜ್ಞಾತಾದೇವಿಯ ಚಿಂತೆ ಹೆಚ್ಚುತ್ತಾಹೋಯಿತು. ಹೊರಗಿನಿಂದ ಉತ್ಸಾಹಿಣಿಯಂತೆ ತೋರುತ್ತಿದ್ದರೂ, ಒಳಗಿನಿಂದ ನಿರುತ್ಸಾಹವೂ, ದುಗುಡವೂ ಅವಳನ್ನು ನೋಯಿಸುತ್ತಿದ್ದುವು. ಇನ್ನು ಸುಮ್ಮನಿರಲಾಗದೆ, ಒಮ್ಮೆ ಆನೆಗೊಂದಿಗೆ ಹೋಗಿ ತನ್ನ ಹೃದಯಬಂಧುವಾದ ಆ ರಾಮಣ್ಣನನ್ನು ಕಾಣಬೇಕೆಂದು ಭಾವಿಸಿದಳು. ಆಗ ದುರುಗಮ್ಮನ ದಿನ್ನೆಯ ಮುಖಾಂತರವಾಗಿ ರಾಮಣ್ಣನು ಕಳುಹಿಸಿದ ಪತ್ರವೊಂದು ಅವಳಿಗೆ ಸಿಕ್ಕಿತು. ಅದರಲ್ಲಿ "ಪ್ರಿಯ ಭಗಿನಿ ಅಜ್ಞಾತಾ, ನಿನ್ನ ಮಗಳು ಕ್ಷೇಮವಾಗಿ ರಾಯಚೂರು ದುರ್ಗದಲ್ಲಿದ್ದಾಳೆ. ಹೊಸದುರ್ಗಾಧೀಶನಾದ ಮಾಲೂಖಾನನು ಒಳ್ಳೆಯವನಾದುದರಿಂದ ಏನೂ ಭಯವಿಲ್ಲ. ಅವಳನ್ನು ಬಿಡಿಸಿಕೊಂಡು ಬರಲಿಕ್ಕಾಗಿ ನಾನು ಈ ದಿನವೇ ರಾಯಚೂರಿಗೆ ಹೊರಟಿದ್ದೇನೆ. ಬೇಗದಲ್ಲಿಯೇ ನಿನಗೆ ನಿನ್ನ ಮಗಳ ದರ್ಶನವಾಗುವುದೆಂದು ನಂಬು. ಇತಿ ನಿನ್ನ ಹೃದಯ ಬಂಧು........ರಾಮಣ್ಣ." ಎಂದಿತ್ತು.

ಇದನ್ನು ಓದಿ ಅವಳಿಗೆ ಸಂತೋಷವೂ ಸಮಾಧಾನವೂ ಉಂಟಾಯಿತು. ಹೀಗಿರುವಾಗ ಕಟಕನಗರಿಯಿಂದ ರುಚೀದೇವಿಯನ್ನು ಸಾಗಿಸಿಕೊಂಡು ಬಂದ ಅಜ್ಞಾತ ಬಂಧು ನಾಯಕರಾದ, ಮಾದರಸಮಾರಾಪ್ಪಾದಿಗಳು, ಅಜ್ಞಾತಾದೇವಿಯ ಕಾಲಿಗೆ ಬಿದ್ದರು. ಅಜ್ಞಾತಾ

ದೇವಿ ಅವರೆಲ್ಲರ ಕ್ಷೇಮ ಲಾಭಗಳನ್ನು ವಿಚಾರಿಸುತ್ತ, ರುಚೀದೇವಿಗೆ ಗಾಢಾಲಿಂಗನವನ್ನಿತ್ತು, ಆ ಸಂನ್ಯಾಸೀ ಶಿಷ್ಯರನ್ನು ಗೌರವಿಸಿದಳು. ರುಚೀದೇವಿಯ ಸೋದರಮಾವ ವೀರರುದ್ರ ಗಜಪತಿಯೇ ಅವಳನ್ನು ಆದರಿಸಿ ಕ್ಷೇಮವನ್ನು ಕೇಳಿದನು. ರುಚೀದೇವಿ ಆಶ್ಚರ್ಯದಿಂದ "ಮಾವಾ, ನೀವು ಇಲ್ಲಿರುವುದೇನು? ನನ್ನನ್ನು ಈ ರೀತಿಯಾಗಿ ತರಿಸಿ ಕೊಂಡಿರುವುದರ ಮರ್ಮವೇನು?–" ಎಂದು ಮುಂತಾಗಿ ಕೇಳಿದುದಕ್ಕೆ "ಎಲ್ಲವೂ ಒಳ್ಳೆಯದಕ್ಕೆಂದೇ ನಂಬು. ಈ ಯುದ್ಧದಂತಹ ಬಹಳ ಆಪತ್ತಿನ ಸಮಯದಲ್ಲಿ ನಿನಗೆ ಘಾತವಾದೀತೆಂತಲೇ ಇಲ್ಲಿಗೆ ಕರೆಯಿಸಿ ದ್ದಾಗಿದೆ. ನಾಳೆಯ ಸಭೆಯಲ್ಲಿ ನಿನಗೆಲ್ಲವೂ ವಿಶದವಾಗುತ್ತದೆ. ಸಂದೇ ಹಿಸಬೇಡ" ಎಂದು ವೀರರುದ್ರನು ತಾತ್ಕಾಲಿಕವಾಗಿ ಅವಳನ್ನು ಸಮುಜಾಯಿಸಿದನು.

ಮರುದಿನ ಆ ಬೆಟ್ಟಗಳ ನಡುವಿನ ಸುವಿಶಾಲವಾದ ಪ್ರದೇಶದಲ್ಲಿ, ಅಜ್ಞಾತಾದೇವಿಯ ಆಜ್ಞೆಯಿಂದ ಬಂಧುವೃಂದದ ಮಹಾಸಭೆ ಸೇರಿತು. ಮಧ್ಯ ಪ್ರದೇಶವನ್ನು ಕೋಟೆಯಂತೆ ಬಳಸಿಕೊಂಡು ಸುಮಾರು ಮೂರು ಸಾವಿರ ಮಂದಿ ಅಜ್ಞಾತವೀರರು ನಿಂತರು. ಪ್ರತಿ ಯೊಬ್ಬರಿಗೂ ಕೈಯಲ್ಲಿ ದೊಣ್ಣೆ, ಕಟಿಯಲ್ಲಿ ಕತ್ತಿ. ಅವರ ಮುಂದೆ ಅನೇಕ ಕಲ್ಲುಮಣೆಗಳ ಮೇಲೆ ಅಜ್ಞಾತ ದಳಪತಿಗಳು ಮಂಡಿಸಿದರು. ಕೇಂದ್ರಭಾಗದಲ್ಲಿ ಬಣ್ಣ ಬಣ್ಣದ ತುಪ್ಪಳಗಳ ಲೋಡುಗಳ ಆಸನಗಳಲ್ಲಿ ಒಂದರಲ್ಲಿ ತಿಪ್ಪಾಂಬೆ ಕುಳಿತಿದ್ದಳು. ಇನ್ನೊಂದರಲ್ಲಿ ರುಚೀದೇವಿ ಚಿಂತೆ ಯಿಂದಲೂ ಕುತೂಹಲದಿಂದಲೂ ಅಲಂಕೃತೆಯಾಗಿದ್ದಳು. ಅವಳ ಬಳಿಯಲ್ಲಿ ಗೌರಿಯೂ, ಸಂನ್ಯಾಸೀ ಶಿಷ್ಯರೂ ಕುಳಿತಿದ್ದರು. ಇವರೆ ಲ್ಲರಿಗೂ ಇದಿರಾಗಿ ಏಳು ಮೆಟ್ಟಿಲುಗಳ ಮೇಲಣ ಉನ್ನತ ಭಾಗದಲ್ಲಿ ರನ್ನಗಂಬಳಿಯಿಂದಲಂಕರಿಸಲ್ಪಟ್ಟ ಮೂದರು ಸುಂದರವಾದ ಆಸನ ಗಳಲ್ಲಿ, ನಡುವಣದು ಬಣ್ಣಬಣ್ಣದ ಚಿತ್ರವಿಚಿತ್ರಗಳಿಂದಲೂ, ಚಿನ್ನ ಬೆಳ್ಳಿಗಳ ಹೊದಿಕೆಗಳಿಂದಲೂ, ವಿಶೇಷೋಜ್ವಲವಾಗಿ ಕಂಗೊಳಿಸುವ ಸಿಂಹಾಸನವಾಗಿತ್ತು. ಅದು "ಅಜ್ಞಾತ ರಾಣಿಯೆಂದು" ಮುಡಿ ಸೂಡ ಲ್ಪಟ್ಟ ಆ ಬಾಲರಾಣಿ ಅಧಿಷ್ಠೀಕರಿಸುವಂತಹುದು. ಅದರಲ್ಲೀಗ ಸುವರ್ಣ

ಪುಷ್ಪಗಳಿಂದ ಅಲಂಕೃತವಾದ ಅವಳ ದಿವ್ಯ ಕಿರೀಟವು ಒಪ್ಪುತ್ತಿತ್ತು. ಇದರ ಎಡ-ಬಲಗಳ ಗದ್ದುಗೆಗಳಲ್ಲಿ ವೈರಾಗ್ಯ ಭಾವರಾದ ಅಜ್ಞಾತಾ ದೇವಿಯೂ, ವೀರರುದ್ರ ಗಜಪತಿಯೂ ಮಂಡಿಸಿದ್ದರು.

"ಮಹಾಕಾಳೀ ಮಾತೆಗೆ ಜಯವಾಗಲಿ!", "ರಾಣೀ ಅಜ್ಞಾತಾ ದೇವಿಗೆ ಜಯವಾಗಲಿ!" ಎಂಬ ಜಯೋದ್ಗಾರಗಳು, ಆ ಪ್ರಚಂಡ ಬಂಧುಸಮೂಹದಿಂದ ಮೇಲೆದ್ದು, ಬೆಟ್ಟದ ತಪ್ಪಲುಗಳನ್ನು ಕೊರೆದು ಕೊಂಡು ಹೋದುವು. ಬಳಿಕ ಅಜ್ಞಾತಾದೇವಿ ಎದ್ದುನಿಂತು, ಶಾಂತ-ಮಧುರ-ಉಚ್ಚ ಕಂಠದಿಂದ ಹೇಳಲಾರಂಭಿಸಿದಳು:

"ಪ್ರಿಯಬಂಧುಗಳೆ! ನನ್ನ ಪ್ರೀತಿವಿಶ್ವಾಸಗಳಿಗೆ ಪಾತ್ರರಾಗಿ ನನ್ನ ಮೇಲೆ ಅಚಲವಾದ ವಿಶ್ವಾಸವನ್ನಿಟ್ಟಿರುವ ವೀರಬಂಧುಗಳೆ! ಶೂರಸಾಹಸಿಗಳೆ! ಧೀರನಾಯಕರೆ! ರುಚೀದೇವಿಯೇ ಮೊದಲಾದ ಪ್ರಿಯ ಸಹೋದರಿಯರೆ, ಪೂಜ್ಯರಾದ ಬ್ರಾಹ್ಮಣರೆ, ಗುರುಹಿರಿಯರೆ, ನಿಮಗೆಲ್ಲರಿಗೂ ನನ್ನ ಸುಸ್ವಾಗತವು! ಪ್ರಿಯಬಾಂಧವರೆ, ಇಂದು ಈ ಮಹಾಸಭೆಯನ್ನು ಕೂಡಿಸಿರುವುದೇಕೆಂದು ಬಲ್ಲಿರಾ? ಅನೇಕ ವರ್ಷ ಗಳಿಂದ ನಾನು ನಿಮ್ಮೊಡನೆ ಸೇರಿಕೊಂಡು, ನನ್ನ ಸಂಕಲ್ಪಕಾರ್ಯ ವನ್ನು ನಿಮ್ಮೆಲ್ಲರ ದೃಢಸಹಾಯದಿಂದ ನೆರವೇರಿಸಬೇಕೆಂದು ಮಾಡು ತ್ತಿರುವ ಪ್ರಯತ್ನವನ್ನು ನೀವೆಲ್ಲರೂ ಬಲ್ಲಿರಿ. ಮನಸ್ಸಿಗೆ ಮನಸ್ಸು, ಕೈಗೆ ಕೈ ಕೊಡುತ್ತಾ ಸಹಾಯವನ್ನು ಮಾಡುತ್ತಿದ್ದೀರಿ. ನಾವು ಗುರಿಯನ್ನು ಮುಟ್ಟಬೇಕಾಗಿರುವ ಕಾಲವು ಬಳಿಬಳಿಗೆ ಬರುತ್ತಾ ಇದೆ. ಪ್ರಕೃತ ಕಟಕಪುರಿಯಿಂದ ಗಜಪತಿನಂದಿನಿ ರುಚೀದೇವಿಯನ್ನು ಅಪಹರಿಸಿಕೊಂಡು ಬಂದುದು ಬಹು ಮುಖ್ಯವೂ ಬಹು ಕಷ್ಟವೂ ಆದ ಕಾರ್ಯವಾಗಿದೆ. ಈ ಮಹಾಕಾರ್ಯವನ್ನು ನೆರವೇರಿಸಿದ ವೀರ ಬಂಧುಗಳನ್ನು ಯಥೋಚಿತವಾಗಿ ಗೌರವಿಸುವುದೇ ಇಂದಿನ ಕೂಟದ ಮುಖ್ಯ ಉದ್ದೇಶ. ಈ ಮಧ್ಯೆ ನಮ್ಮ ಸ್ಥಿತಿಗತಿಗಳನ್ನು ಕುರಿತು ನಾಲ್ಕು ಮಾತುಗಳನ್ನು ಹೇಳಬೇಕೆಂದಿರುವೆನು. ವೀರಬಾಂಧವರೆ, ನಮಗಿರುವ ಜನಬಲ-ಧನಬಲಗಳು ಈಗ ಶತ್ರುಗಳಿಗೆ ದುರ್ನಿ ವಾರ್ಯವಾಗುವಂತೆ ಸಾಕಷ್ಟಿವೆ. ಈಗ ಇಲ್ಲಿ ಸೇರಿರುವ ವೀರ

ವೃಂದವು ಮಾತ್ರವಲ್ಲದೆ ಅಖಿಲ ದಾಕ್ಷಿಣಾತ್ಯದ ದೊಡ್ಡ ದೊಡ್ಡ ಅಧಿಕಾರಿಗಳೂ, ಜಮೀನುದಾರ, ಪಾಳೆಯಗಾರರೂ ಮೊದಲಾದ ಮಹನೀಯರನೇಕರು, ಜನನಾಯಕತೆಯ ಪರಿಪಾಲನೆಯನ್ನು ನೆಲೆನಾಟುವ ನಮ್ಮ ಸತ್ಕಾರ್ಯಕ್ಕೆ ಸಹಾಯ ಮಾಡುವುದಾಗಿ ಮನಃಪೂರ್ವಕವಾಗಿ ಒಪ್ಪಿರುತ್ತಾರೆ. ನಮಗೆಲ್ಲರಿಗೂ ಪಿತೃ ಸಮಾನರಾಗಿ ನಮ್ಮೊಂದಿಗೆ ಮುಂಡಿಸಿರುವ ಉದಯಗಿರಿಯ ರಾಜಾ ವೀರರುದ್ರ ಗಜಪತಿಯವರೇ ನಮ್ಮ ಉದ್ದೇಶಕ್ಕೆ ಒಪ್ಪಿಕೊಂಡಿರುವುದೊಂದು ಮಹದ್ಭಾಗ್ಯವಾಗಿದೆ. ಉತ್ತರಾಪಥದ ಅನೇಕ ಪ್ರಬಲಾಧಿಕಾರಿಗಳು ಇವರ ಮನೋನುವರ್ತಿಗಳಾಗಿರುವರು. ಒಟ್ಟಾರೆ ನಾವೀಗ ನೆನೆಸಿದರೆ ಒಂದು ಲಕ್ಷ ಸೇನೆಯನ್ನು ಕೂಡಿಸಲು ಶಕ್ತರಾಗಿದ್ದೇವೆ. ವಿಜಯ ನಗರದಂತಹ ಬಲಿಷ್ಠ ರಾಜ್ಯದೊಂದಿಗೆ ಹೋರಾಡಲು ನಮ್ಮ ಬಲವು ಸಾಲದೇ ಹೋದರೂ ನಮ್ಮ ದಾರಿ ಯುದ್ಧ ಪ್ರಸಂಗವೇ ಬಾರದಂತಹ ಹೊಸ ದಾರಿಯಾಗಿದೆ. ವಿಜಯನಗರದ ರಾಯನನ್ನು ನಮ್ಮ ಋಣಾನುಬಂಧನದಲ್ಲಿ ಸಿಕ್ಕಿಸಿ ಹಾಕಿ, ಗೆಲ್ಲಬಹುದು. ಇದಕ್ಕೆ ಇನ್ನು ಕೆಲವು ತಿಂಗಳು ತಡವುಂಟು. ನಾವು ಹಿಡಿದು ವಿಚಾರಿಸಬೇಕಾಗಿದ್ದ ಮುಖ್ಯ ಮುಖ್ಯ ವ್ಯಕ್ತಿಗಳಿದ್ದಾರೆ. ಮುಖ್ಯವಾದೊಂದು ವಸ್ತುವೂ ಶೋಧಿಸಲಿಕ್ಕಿದೆ. ಈ ಮಧ್ಯದಲ್ಲಿ ಉತ್ಕಲರಾಷ್ಟ್ರವು ವಿಜಯನಗರ ಸಾಮ್ರಾಜ್ಯದೊಂದಿಗೆ ಸೇರಿಬಿಡಬೇಕು-ಸೇರೀತು. ಹಾಗೆಯೇ ಯವನ ರಾಜ್ಯವೂ ಮಹಾ ಸಾಮ್ರಾಜ್ಯದೊಂದಿಗೆ ಸಂಗಮಿಸದೇ ಹೋಗದು. ಆಗ ವಿಜಯನಗರದ ರಾಜಾಕೃಷ್ಣದೇವನು ತನ್ನ ಸರಿಯಾರೂ ಇಲ್ಲವೆಂದು ಆನಂದದಿಂದ ಉಬ್ಬುತ್ತಿರಲು, ಅವನ ಎಲ್ಲ ವಿಜಯಕ್ಕೂ ನಮ್ಮ ಸಹಾಯವೇ ಮೂಲವಾಗುವುದರಿಂದ, ಈ ಋಣಾನುಬಂಧದಿಂದ ಅವನನ್ನು ಬಿಗಿದು ಪ್ರಜಾ ಸಮೂಹದ ಮುಂದೆ ನ್ಯಾಯ ವಿಚಾರಣೆಗೆ ನಿಲ್ಲಿಸಬೇಕು. ಆ ಕೃಷ್ಣದೇವ ತಿಮ್ಮರಸರು ಘೋರವಾದೊಂದು ಅನ್ಯಾಯವನ್ನಾಚರಿಸಿ ಮುಚ್ಚಿಟ್ಟುಕೊಂಡಿರುತ್ತಾರೆ. ನಿಮ್ಮೆಲ್ಲರ ಮುಂದೆ ಅವರ ವಿಚಾರಣೆಯಾಗಬೇಕು. ಆ ವಿಷಯದಲ್ಲಿ ತಿಪ್ಪಾಂಬೆ ದೇವಿಯವರು ಬಲವಾದ ಸಾಕ್ಷ್ಯವಾಗಿರುತ್ತಾರೆ. ಆದರೆ ಈಗ

ವಿಜಯನಗರದಲ್ಲಿ ನಾಗಲಾದೇವಿಯ ಹತ್ಯದಿಂದಾಗಿ, ಕಳಿಂಗಯುದ್ಧದಿಂದ ರಾಯನು ಪರಾಙ್ಮುಖನಾದುದರಿಂದ ನಮ್ಮ ಕಾರ್ಯಕ್ಕೊಸ್ವಲ್ಪ ತಡೆಯುಂಟಾಗಿದೆ...."

ಕೇಳುತ್ತಾ ಆಶ್ಚರ್ಯಪಡುತ್ತಿದ್ದ ಸಂನ್ಯಾಸಿಯೂ, ಅವನ ಶಿಷ್ಯನೂ ಚಕಿತರಾಗಿ—"ಅಯ್ಯೋ! ನಾಗಲಾದೇವಿಯ ಹತ್ಯವೆ?" ಎಂದು ಗಟ್ಟಿಯಾಗಿ ಕೂಗಿದರು.

"ಹೌದು ಬ್ರಾಹ್ಮಣರೆ, ಇದಕ್ಕಾಗಿ ಇನ್ನು ವ್ಯಸನಪಟ್ಟೊ ಪ್ರಯೋಜನವಿಲ್ಲ. ಆ ವಿಷಯದಲ್ಲಿ ಹೆಚ್ಚಿಗೆ ತಿಳಿಯಬೇಕಾಗಿದ್ದರೆ ಆಮೇಲೆ ನಿಮಗೆ ತಿಳಿಸುವೆನು. ಈಗ ನನ್ನ ಭಾಷಣವನ್ನು ಮುಗಿಸಿಬಿಡುತ್ತೇನೆ."

ಸನ್ಯಾಸೀ ಶಿಷ್ಯರು ಸುಮ್ಮನಾದರು. ಅಜ್ಞಾತಾ ಹೇಳಲಾರಂಭಿಸಿದಳು :

"ಬಂಧುಗಳೆ, ಆದರೂ ಬೇಗದಲ್ಲಿಯೇ ಪುನಃ ಗಜಪತಿ-ನರಪತಿಗಳಿಗೆ ಘರ್ಷಣೆ ಆಗಿಯೇ ಆಗುತ್ತದೆ. ಆಮೇಲೆ ವಿಜಯನಗರಕ್ಕೆ ಭಾಮಿನೀ ಸುಲ್ತಾನರೊಡನೆ ಕಾದಾಡುವ ಪ್ರಸಂಗವೂ ಬರುತ್ತದೆ. ಆ ಯುದ್ಧಾಗ್ನಿಗೆ ಹೊಗೆಯೂ ಆಡಲಾರಂಭವಾಗಿದೆ. ಈ ಯುದ್ಧಗಳಲ್ಲಿ ನಮ್ಮ ಅಂತಃಸಹಕಾರವು ವಿಜಯನಗರಕ್ಕೇ ಆದುದರಿಂದ, ಶ್ರೀ ವಿದ್ಯಾರಣ್ಯ ಸಂಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯವು ದಕ್ಷಿಣಾಪಥಕ್ಕೆಲ್ಲಾ ಏಕಾಧಿಪತ್ಯವಾದೀತು. ಆ ಸಮಯದಲ್ಲಿಯೇ ಕೃಷ್ಣದೇವನ ತೆರೆಯಮರೆಯ ಅತ್ಯಾಚಾರಗಳನ್ನು ಬಯಲಿಗೆಳೆದು ಅವನ ಮುಖಭಂಗ ಮಾಡಿಸಬೇಕು. ಆಗಲೇ ಪ್ರಜಾಪ್ರತಿನಿಧಿ ಪ್ರಭುತ್ವಕ್ಕೊ ಎಡೆಯುಂಟಾಗುತ್ತದೆ. ಆ ಕಾಲದಲ್ಲಿ ನನ್ನ ತಂಗಿಯಾದ ರುಚೀಕುಮಾರಿಗೆ ಸ್ವಯಂವರವನ್ನೂ ಏರ್ಪಡಿಸಬೇಕೆಂದಿರುವೆನು. ಈಗ ರುಚೀದೇವಿಗೆ ನಮ್ಮ ಮೇಲೆ ಕೆಟ್ಟ ಕಲ್ಪನೆಯುಂಟಾಗಿರಬಹುದು. ಹಾಗೇನೂ ಇಲ್ಲವೆಂದು ನಿಮ್ಮೆಲ್ಲರ ಇದಿರಾಗಿ ಅವಳಿಗೆ ನಾನು ಸಮಾಧಾನ ಹೇಳುತ್ತೇನೆ. ಪ್ರಕೃತ ಘಾತಕನಾದ ಕೃಷ್ಣದೇವನು ರುಚೀದೇವಿಯನ್ನು • ಬಲಾತ್ಕಾರದಿಂದ ಮದುವೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನೂ ಇವಳ ತಂದೆ, ಇಕ್ಕಟ್ಟಿಗೆ ಸಿಕ್ಕಿಬಿದ್ದು,

ಇವಳ ಇಚ್ಛೆಗೆ ವಿರುದ್ಧವಾಗಿ ವಿವಾಹ ಮಾಡಲು ಎಲ್ಲೆಲ್ಲೋ ಅವಸರ ದಿಂದ ವರಾನ್ವೇಷಣೆ ಮಾಡುವುದನ್ನೂ ಕೇಳಿ ನಾನು ವ್ಯಸನಪಟ್ಟೆನು. ಈ ದ್ವಂದ್ವ ಸಂಕಟದಿಂದ ರುಚೀದೇವಿಯನ್ನು ಪಾರುಮಾಡಿ, ನಿಧಾನ ವಾಗಿ ಅವಳ ಮನಸ್ಸಿಗೊಪ್ಪುವ ವರನನ್ನು ಆರಿಸಿ ವಿವಾಹವನ್ನು ನೆರವೇರಿಸಬೇಕೆಂಬ ಸದುದ್ದೇಶದಿಂದಲೇ ಅವಳಿಗೆ ಸ್ವಲ್ಪ ಕಷ್ಟವನ್ನು ಕೊಡಬೇಕಾಯಿತು. ಇನ್ನು ಮೇಲೆ ಅವಳು ವ್ಯಸನಪಡಲಾರಳೆಂದು ನಂಬುತ್ತೇನೆ."

ಇದನ್ನು ಕೇಳುವಾಗ ರುಚೀದೇವಿಯ ಮುಖವು ಕಳೆಗುಂದುತ್ತಾ ಹೋಗುತ್ತಿತ್ತು. ಅವಳ ಮನಸ್ಸಿಗೊಪ್ಪಿದವನನ್ನು ಅವಳು ಆರಿಸಿ ಕೊಂಡಾಗಿದೆ. ಆ ವರನು ಈ 'ಅಜ್ಞಾತಾ'ನಾಮಕಳಿಗೆ ಹಗೆಗಾರ ನಾಗಿದ್ದಾನೆ. ಇದಕ್ಕೆ ವೀರರುದ್ರನಾದರೂ ಒಪ್ಪಲಿಕ್ಕಿಲ್ಲವಲ್ಲವೆ? ಎಂದು ಚಿಂತಿಸುತ್ತಿದ್ದಳು. ಆಗ ಸಂನ್ಯಾಸಿ ಅವಳನ್ನು ನೋಡಿ "ಎಲ್ಲಾ ಸರಿಹೋಗುತ್ತೆ. ಚಿಂತಿಸಬೇಡ" ಎಂಬ ಅರ್ಥದ ಸನ್ನೆಯನ್ನು ತೋರಿಸಿದನು.

ಇನ್ನೊಂದೆಡೆ ಮಾವರಸನು, ನನಗೆ ತಿಳಿದ ರುಚೀದೇವಿಯ ಪ್ರೇಮ ರಹಸ್ಯವನ್ನು ಅಜ್ಞಾತಾದೇವಿಗೆ ಹೇಳಬೇಕೋ ಬೇಡವೋ ಎಂದು ಯೋಚಿಸಿಕೊಳ್ಳುತ್ತಿದ್ದನು. ಹೇಗಾದರೂ ಜಗನ್ಮೋಹಿನೀ ದೇವಿ, ಘಾತಕನಾದ ಕೃಷ್ಣದೇವನನ್ನು ವರಿಸಬಾರದೆಂದೇ ಅವನ ಅಂತರ ಇಚ್ಛೆಯಾಗಿತ್ತು.

ಅಜ್ಞಾತಾದೇವಿ ಮತ್ತೂ ಹೀಗೆಂದಳು :—

"ಪ್ರಿಯ ಬಂಧುಗಳೆ, ನಮಗೆ ಇದೊಂದು ಮಂದಕಾಲ ಸಂಧಿ. ನನ್ನ ಪ್ರಿಯ ಕುಮಾರಿ, ನಿಮ್ಮೆಲ್ಲರ ಭಕ್ತಿಪ್ರೀತಿಗಳಿಗೆ ಪಾತ್ರಳಾದ ಬಾಲರಾಣಿ ಕಣ್ಮರೆಯಾಗಿರುವ ಕಾರಣ ನಾವೆಲ್ಲಾ ವ್ಯಸನಾಕ್ರಾಂತ ರಾಗಿದ್ದೇವೆ. ಇಂದಿನ ಸಭೆಯೇ ಕಳಾಹೀನವಾಗಿದೆ. ಆದರೆ ಅದಕ್ಕೆ ಯಾರೂ ಏನೂ ಚಿಂತಿಸಬೇಕಾಗಿಲ್ಲ. ಅವಳು ವೀರ ಪುತ್ರಿ, ಚತುರಮತಿ. ಮಹಾದೇವಿಯ ದಿವ್ಯಾನುಗ್ರಹಕ್ಕೆ ಪಾತ್ರ ಳಾದವಳು. ನಿಮ್ಮೆಲ್ಲರ ಹೃತ್ಪೂರ್ವಕ ಆಶೀರ್ವಾದದ ಬಲವನ್ನು

ಪಡೆದವಳು. ಅವಳು ಕ್ಷೇಮವಾಗಿರುವಳೆಂಬ ಶುಭ ಸಮಾಚಾರವೂ ನನಗೆ ಬಂದಿದೆ. ಅವಳ ಹಿಂದೆಯೇ ಅವಳ ರಕ್ಷಕನೂ ಇದ್ದಾನೆ. ಬೇಗನೇ ನಮಗೆಲ್ಲರಿಗೂ ಅವಳ ಸಂದರ್ಶನವಾಗುತ್ತದೆ. ನನ್ನ ಹಾಗೆಯೇ ನೀವೆಲ್ಲರೂ ನಿಶ್ಚಿಂತರಾಗಿರಬೇಕು."

ಕೋಮಲ ತಾರೆಯಾದ ಆ ವೀರನಾರಿಯ ಈ ಬಗೆಯ ಮುಖೋದ್ಗೀತವನ್ನು ಕೇಳಿ ಎಲ್ಲರೂ ಬೆರಗಾದರು. ಆಮೇಲೆ ಮಾದರಸಾದಿಗಳು ಮಾಡಿದ ಸಾಹಸಕ್ಕೆ ತಕ್ಕಂತೆ ಬಹುಮಾನ ವಿತರಣೆ ಮಾಡಬೇಕೆಂದಿರುವಾಗ ಮಾದರಸನು–"ಬಾಲರಾಣಿಯ ಆಗಮನವಾದನಂತರವೇ ಬಹುಮಾನದ ಮಾತು." ಎಂದು ತಡೆದನು. ಕಡೆಗೆ ಜಯ ಘೋಷಣದಿಂದ ಆ ಸಭೆ ಚಲಿಸಿತು. ಆಗ ಸಂನ್ಯಾಸೀ ಶಿಷ್ಯರು ಅಜ್ಞಾತಾದೇವಿಯನ್ನು ಏಕಾಂತದಲ್ಲಿ ದರ್ಶನ ಮಾಡಬೇಕೆಂದು ಕೋರಿದರು.

* * *

ಪ್ರಾತಃಕಾಲದಲ್ಲೆದ್ದು ಗೋನಾಳದ ಶುದ್ಧ ಜಲದಲ್ಲಿ ಸ್ನಾನವನ್ನು ತೀರಿಸಿ, ಅಲ್ಲಿಯೇ ಒಂದು ಅಗಲವಾದ ಬಂಡೆಯಮೇಲೆ ಕುಳಿತುಕೊಂಡು, ಸಂನ್ಯಾಸಿಯೂ, ರಾಮಕೃಷ್ಣ ಶಿಷ್ಯನೂ ಜಪಮಾಡುತ್ತಿದ್ದರು. ಅಲ್ಲಲ್ಲಿ ಅಜ್ಞಾತ ಬಂಧುಗಳು ಬೇರೆಬೇರೆ ಕಾರ್ಯಗಳಲ್ಲಿ ನಿಮಗ್ನರಾಗಿದ್ದರು. ಬೆಟ್ಟಗಳ ಮೇಲಿನಿಂದ ಬಾಲಸೂರ್ಯನ ಕಿರಣಗಳು ಹರಿದುಕೊಂಡು ಬರುತ್ತಿದ್ದವು, ಶಿಷ್ಯ ರಾಮಕೃಷ್ಣನು ಮೂಗು ಹಿಡಿದುಕೊಂಡು, ಅಡ್ಡಗಣ್ಣಿನಿಂದ ತಿಮ್ಮಣ್ಣನನ್ನು ನೋಡುತ್ತ, ಬೇರೆಯವರಿಗೆ ತಾವು ಮಾತಾಡಿಕೊಳ್ಳುವುದು ತಿಳಿಯದ ಹಾಗೆ, ಮಂತ್ರದೊಂದಿಗೆ ಮಾತನ್ನೂ ಆಡಲಾರಂಭಿಸಿ–"ತಿಮ್ಮಗುರೋ, ಈ ರಹಸ್ಯಗಳನ್ನೆಲ್ಲಾ ನಮ್ಮ ರಾಯನಿಗೆ ತಿಳಿಯಪಡಿಸಲು ಉಪಾಯವಿಲ್ಲವೆ? ಕಳ್ಳತನದಿಂದ ಇಲ್ಲಿಂದ ಜಾರಲಿಕ್ಕು ಮಾರ್ಗವಿಲ್ಲವಲ್ಲಾ! ಬಹಿರಂಗವಾಗಿ ಹೋಗಬೇಕಾದರೆ ತಕ್ಕ ಪ್ರಮಾಣ ಮಾಡಬೇಕಂತೆ. ಪ್ರಮಾಣ ಮಾಡಿ ಭಂಗವಡಿಸುವುದು ದೋಷ, ಈ ಉಭಯ ಸಂಕಟಕ್ಕೆ ಏನು ಮಾಡೋಣ?" ಎಂದನು.

"ಆ ಉಭಯ ಸಂಕಟವಂತೂ ಹಾಗಿರಲಿ. ಸದ್ಯ ರುಚೀ ಸಮಸ್ಯೆ ಬಗೆಹರಿಯಬೇಕಾಗಿದೆ. ಅಜ್ಞಾತಾ ಎಂಬ ಈ ತೇಜಸ್ವಿನಿಗೆ ನಮ್ಮ ರಾಯನು ಮಾಡಿದ ಅತ್ಯಾಚಾರವೇನೋ ತಿಳಿಯಬೇಕಾಗಿದೆ. ಇವಳೊಂದಿಗೆ ತಿಪ್ಪಾಂಬೆ ಬೇರೆ ಸೇರಿದ್ದಾಳೆ. ದುಡುಕದಿರು. ಆಗೋ, ಬರುತ್ತಿದ್ದಾಳೆ ರಾಣಿ! ಆಹಾ! ಎಂಥ ತೇಜಸ್ವಿನಿ!"

ಅಜ್ಞಾತಾದೇವಿ ಅವರ ಬಳಿಗೆ ಬರುತ್ತಲೇ ಇಬ್ಬರೂ ಎದ್ದು ನಿಂತರು. ಅಜ್ಞಾತೆ ಅವರಿಗೆ ಕೈಮುಗಿಯುತ್ತ, "ನಮಸ್ತೆ ಪಂಡಿತ ಶ್ರೇಷ್ಠರೆ, ಕುಳಿತುಕೊಳ್ಳಿರಿ. ಶ್ರೇಷ್ಠರಾದ ತಾವು ನನಗೆ ಇಷ್ಟು ಮರ್ಯಾದೆ ಮಾಡಬಾರದು." ಎಂದಳು.

"ದೇವೀ, ಉತ್ತಮವಾದ ನಿನ್ನ ಗುಣಸಮೂಹಕ್ಕೆ ಮರ್ಯಾದೆ ಕೊಟ್ಟೆವೇ ಹೊರತು ಜಾತಿಯನ್ನು ಗಣಿಸಲಿಲ್ಲ." ತಿಮ್ಮಣ್ಣನೆಂದನು.

"ಗುಣಾಂ, ಪೂಜಾಸ್ಥಾನಂ" ಎಂದನು ರಾಮಕೃಷ್ಣ.

"ಇರಲಿ ಕವಿವರೇಣ್ಯರೆ, ನಿಮ್ಮ ನಿತ್ಯಾನುಷ್ಠಾನವು ಮುಗಿದಿದ್ದರೆ ಇಲ್ಲಿಯೇ ಮಾತಾಡೋಣ. ಇಲ್ಲಿಗೆ ಯಾರೂ ಬರಬಾರದೆಂದು ಆಜ್ಞೆ ಮಾಡಿದ್ದೇನೆ. ನಿನ್ನೆ ನೀವು ಏನೋ ಸಂದೇಹವಿರುವುದಾಗಿ ಹೇಳಿದಿರಲ್ಲವೆ?" ಎನ್ನುತ್ತಾ ಅಜ್ಞಾತಾದೇವಿ ಅವರ ಇದಿರಿನಲ್ಲಿರುವ ಇನ್ನೊಂದು ಶಿಲೆಯ ಮೇಲೆ ಕುಳಿತಳು. ಗುರುಶಿಷ್ಯರೂ ಕುಳಿತರು.

"ಅಮ್ಮ, ಮಹಾರಾಣಿ! ಅಜ್ಞಾತಾದೇವಿ ಎಂಬ ನಿನ್ನ ಪ್ರಖ್ಯಾತವಾದ ಹೆಸರನ್ನು ಕೇಳಿ, ಕ್ರೂರಳಾದ ದಸ್ಯುನಾಯಕಿಗೆ ತಕ್ಕ ಹಾಗೆ ನಿನ್ನ ರೂಪಾಕಾರ ಗುಣಗಳಿರಬಹುದೆಂದು ಭಾವಿಸಿದ್ದೆವು. ಆದರೆ—" ಎಂದು ತಿಮ್ಮಣ್ಣ ಹೇಳುವಾಗ ಅಜ್ಞಾತೆ ಅವನನ್ನು ತಡೆದು "ಅದೆಲ್ಲಾ ಹಾಗಿರಲಿ. ಮುಖ್ಯ ವಿಷಯವಿದ್ದರೆ ಹೇಳಿರಿ" ಎಂದಳು.

ತಿಮ್ಮ : "ತಾಯೆ, ನೀನು ಸಿಟ್ಟಾಗುವುದಿಲ್ಲವೆಂದು ವಚನ ಕೊಡು."

ಅಜ್ಞಾತಾ : "ನಿಮ್ಮ ಮೇಲೆ ಸಿಟ್ಟೇಕೆ? ಇಲ್ಲ. ನಂಬಿರಿ."

ತಿಮ್ಮ : "ತಾಯೆ, ನಿನ್ನ ಉದ್ದೇಶಗಳೆಲ್ಲಾ ಉತ್ತಮವೇನೋ

ನಿಜ. ಆದರೆ ನೀನು ಎರಡು ಕಡೆಗಳಲ್ಲಿ ತಪ್ಪಿ ಬಿದ್ದಿರುವಿ."

ಅಜ್ಞಾತಾ: "ತಪ್ಪುಗಳನ್ನು ನಿಶ್ಯಂಕೆಯಿಂದ ಹೇಳಿರಿ. ತಿದ್ದಿ ಕೊಳ್ಳುವೆನು."

ತಿಮ್ಮ: "ಅಮ್ಮ, ನೀನು ನಮ್ಮ ಕೃಷ್ಣದೇವರಾಯನನ್ನು 'ಅಪರಾಧಿ' ಎಂದು ಸಂಬೋಧಿಸಿರುತ್ತೀ. ಸದ್ಗುಣಸಂಪನ್ನನಾದ ನಮ್ಮ ರಾಯನು ನಿನಗೆ ಯಾವ ಅಪರಾಧವನ್ನು ಮಾಡಿದ್ದಾನಮ್ಮ?"

ಅಜ್ಞಾತಾ: "ಅದನ್ನು ತಿಳಿದು ನೀವೇನು ಮಾಡುವಿರಿ?"

ತಿಮ್ಮ: "ರಾಯನ ಬಗ್ಗೆ ನಾವೇ ಜವಾಬುದಾರಿಗಳೆಂದು ತಿಳಿ."

ಅಜ್ಞಾತಾ: "ಓಹೋ! ನೀವು ಅವನಿಗೆ ಅಷ್ಟು ನಿಕಟ ಸಂಬಂಧಿಗಳಾಗಿರುವುದರಿಂದಲೇ ರುಚೀದೇವಿಯನ್ನು ರಾಯನ ಕೈಗೆ ಸಿಕ್ಕಿಸುವ ಪ್ರಯತ್ನ ಮಾಡಿದಿರಿ."

ತಿಮ್ಮ: "ಅದಕ್ಕಾಗಿಯೇ ದುಡುಕಿ ಕೋಪ ಮಾಡಬೇಡವೆಂದು ಮೊದಲೇ ಕೇಳಿಕೊಂಡೆನು. ಸ್ವಲ್ಪ ಸೈರಿಸಿಕೊಂಡಿರು. ಅಮ್ಮ, ನೀನು ನಮ್ಮ ರಾಯನ ಚರಿತ್ರೆಯನ್ನು ಚೆನ್ನಾಗಿ ತಿಳಿದಿರುವೆಯಾ? ಅವನನ್ನು ನಾವು ಚೆನ್ನಾಗಿ ಬಲ್ಲೆವು. ಅವನು ಇಂದಿಗೂ ಯಾರಿಗೂ ಅನ್ಯಾಯ ಮಾಡಿಲ್ಲ. ಅದೂ ನಿನ್ನಂಥ ಸಜ್ಜನಳಿಗೆ...."

ಅಜ್ಞಾತಾ: "ಇರಬಹುದಿರಬಹುದು. ಈಗ ಆತನು ಸದ್ಗುಣ ಪುಂಜನೇ ಆಗಿರಬಹುದು."

ತಿಮ್ಮ: "ಇಲ್ಲಮ್ಮಾ, ಅವನನ್ನು ಬಾಲ್ಯದಿಂದಲೂ ಚೆನ್ನಾಗಿ ಬಲ್ಲೆನು."

ಅಜ್ಞಾತಾ: "ಅಯ್ಯಾ, ನಿಮ್ಮ ರಾಯನು ಸಿಂಹಾಸನವನ್ನು ಹರಣ ಮಾಡಲಿಕ್ಕಾಗಿ ನನ್ನ ಪತಿಯನ್ನು ಶೂಲಕ್ಕೇರಿಸಿ...."

"ಏನೇನು!" ಅವಳ ಕಠೋರವಾಣಿಯನ್ನು ಕೇಳಿ ಗುರು ಶಿಷ್ಯರಿಬ್ಬರೂ ಆಶ್ಚರ್ಯದಿಂದ ಬಾಯಿ ತೆರೆದರು. ರಾಮಕೃಷ್ಣನೆಂದ: "ನಿನ್ನ ಪತಿಯನ್ನು ನಮ್ಮ ರಾಯನು ಶೂಲಕ್ಕೇರಿಸಿದನೆ? ಏನು ಆಶ್ಚರ್ಯ! ನಮ್ಮ ರಾಯನಿಗೆ ಸಿಂಹಾಸನದ ಮೇಲೆ ಆಶೆಯೇ ಇರಲಿಲ್ಲವಲ್ಲ! ದೊಡ್ಡ ದೊಡ್ಡ ಪ್ರಾಣಘಾತುಕವಾದ ಕುತ್ತುಗಳಿಂದ

ಪಾರಾಗಿ, ನಿವೃತ್ತಿಯಿಲ್ಲದೆ, ತಿಮ್ಮರಸರ ಒತ್ತಾಯದಿಂದ, ಪಿತೃವಾಕ್ಯ ಪರಿಪಾಲನೆಗಾಗಿ ಸಿಂಹಾಸನವೇರಿದ್ದಾನೆ—"

ಅಜ್ಞಾತಾ : "ಆಹಾ! ಪಿತೃವಾಕ್ಯಪರಿಪಾಲಕನಾದ ಸಾಕ್ಷಾತ್ ರಾಮಚಂದ್ರನೇ ನಿಮ್ಮ ರಾಯ !"

ರಾಮ : "ಏಕೆ? ಇದು ಎಲ್ಲರಿಗೂ ಗೊತ್ತಿದ್ದ ವಿಷಯ. ಕೃಷ್ಣದೇವರಾಯನು ಅನ್ಯಾಯದಿಂದ ಸಿಂಹಾಸನಾರೋಹಣ ಮಾಡಿದ್ದರೆ, ಪಂಪಾಪತಿಯಾಣೆ! ನನ್ನ ತಲೆಯನ್ನೆ ನಿನ್ನಿದಿರು ತುಂಡಿಸಿಡುತ್ತೇನೆ."

"ತಾಳು ರಾಮಕೃಷ್ಣ," ಎಂದು ತಿಮ್ಮಣ್ಣನು—"ಅಮ್ಮ, ನಾವಿಬ್ಬರೂ ವಿಜಯನಗರದಲ್ಲೆ ಇರುವ ಆಸ್ಥಾನ ಕವಿಗಳು. ಆದರೆ ನಿನ್ನನ್ನು ನಾವು ಈವರೆಗೂ ನೋಡಿಲ್ಲವಲ್ಲ? ನಿನ್ನ ಪತಿ ಯಾರೊ ? ಅವರಿಗೂ ಸಿಂಹಾಸನಕ್ಕೂ ಏನು ಸಂಬಂಧವೊ ?"

ಅಜ್ಞಾತಾ : "ಅವರು ರಾಜಕುಟುಂಬಕ್ಕೆ ಸೇರಿದವರು."

ತಿಮ್ಮ: "ಹಾಗೊ ? ರಾಜಕುಟುಂಬದ ಎಲ್ಲರ ಪರಿಚಯವೂ ನನಗುಂಟು. ಅವರ ಹೆಸರು ?"

ಅಜ್ಞಾತಾ : "ನಿಮ್ಮ ಪಂಪಾಪತಿಯ ಹೆಸರೇ."

"ಶ್ರೀ ವಿರೂಪಾಕ್ಷ !"–ಗುರು ಶಿಷ್ಯರಿಬ್ಬರೂ ಉಚ್ಚರಿಸಿದರು.

ತಿಮ್ಮ : "ಅವರ ತಂದೆಯ ಹೆಸರು ?"

ಅಜ್ಞಾತಾ: "ಯೋಚಿಸಿರಿ ನೀವೆ ; ನಿಮ್ಮ ರಾಯಮಂತ್ರಿಗಳು ಅವರನ್ನು ಶೂಲಕ್ಕೇರಿಸಿದ್ದುಂಟೊ ?"

ರಾಮ : "ಆ ಹೆಸರಿನವರನ್ನು ಶೂಲಕ್ಕೇರಿಸಿದ್ದುಂಟು. ಅವನು ನಮ್ಮ ರಾಯನ ಹತ್ಯವನ್ನೆ ಮಾಡಲಿಕ್ಕಿದ್ದನು."

ಅಜ್ಞಾತಾ : "ಸಾಕಿನ್ನು, ಮುಚ್ಚಿರಿ ಬಾಯಿ !"

ತಿಮ್ಮ: "ತಾಳಮ್ಮ. ವಿರೂಪಾಕ್ಷ ಎಂದರೆ ಎಷ್ಟೋ ವಿರೂಪಾಕ್ಷರಿದ್ದಾರೆ. ರಾಯನು ಶೂಲಕ್ಕೇರಿಸಿದ್ದು ತಿಪ್ಪಾಂಬೆಯ ಸಹೋದರರಾದ ವಿರೂಪಾಕ್ಷನನ್ನು. ನ್ಯಾಯಾಸನದ ಮುಂದೆ ವಿಚಾರಣೆ ನಡೆಸಿ, ನ್ಯಾಯದೇವಿಯು ತೀರ್ಪಿನಿಂದಲೇ ಶೂಲಕ್ಕೇರಿಸಿದ್ದಾಗಿದೆ.

ಆದರೆ ತಿಪ್ಪಾಂಬೆಯ ಸಹೋದರನಾದ ವಿರೂಪಾಕ್ಷನು ವಿವಾಹವನ್ನೇ ಮಾಡಿಕೊಳ್ಳಲಿಲ್ಲ."

ಅಜ್ಞಾತಾ: ನಿಮಗೆ ಗೊತ್ತಿಲ್ಲದಂತೆ ವಿವಾಹ ಮಾಡಿಕೊಂಡಿದ್ದರೆ?"

ತಿಮ್ಮಣ್ಣ: "ಅದು ಹೇಗೆ? ಅವರು ಕಡೆ ತನಕವೂ ರಾಜಧಾನಿಯಲ್ಲಿಯೇ, ತಿಪ್ಪಾಂಬೆಯ ಮನೆಯಲ್ಲಿಯೇ ಇದ್ದರು. ಮಹಾ ವ್ಯಭಿಚಾರಿಗಳೆಂದು ಬಿರುದಾಂತವರು!"

ಅಜ್ಞಾತಾ: "ಎಚ್ಚರ! ನನ್ನಿದಿರು ಸುಳ್ಳಾಡಬೇಡಿ."

ತಿಮ್ಮ: "ನಾಲಗೆ ಕೊಯ್ದರೂ ಸುಳ್ಳಾಡೆವು ತಾಯೇ."

ರಾಮು: "ಅದೂ ನಿಷ್ಕಳಂಕಿನಿಯಾದ ನಿನ್ನ ಮುಂದೆ ಸುಳ್ಳಾಡುವೆವೆ?"

ಅಜ್ಞಾತಾ: "ಹಾಗಾದರೆ ಅವರು ಕಡೆತನಕವೂ ರಾಜಧಾನಿಯಲ್ಲಿದ್ದರೆಂದು ಹೇಳುವಿರಲ್ಲ? ನನ್ನನ್ನು ವಿವಾಹ ಮಾಡಿಕೊಂಡು ವರ್ಷಗಟ್ಟಲೆ ಗೃಹಸ್ಥಾಶ್ರಮಿಗಳಾಗಿದ್ದರು."

ತಿಮ್ಮ: "ಓಹೋ! ಖಂಡಿತವಾಗಿಯೂ ನಿನ್ನ ಪತಿ ಬೇರೆ ವಿರೂಪಾಕ್ಷರೇ ಸರಿ."

ಇದನ್ನು ಕೇಳಿ ಅಜ್ಞಾತಾದೇವಿಯ ತಲೆಯೊಳಗೇನೋ ಮಿಂಚು ಕೋರೈಸಿದಂತಾಯಿತು.

ರಾಮು: "ಅಮ್ಮ, ನಿನ್ನ ಪತಿಯ ಪೂರ್ವಾಪರಗಳು ನಿನಗೆ ಸರಿಯಾಗಿ ಗೊತ್ತಿಲ್ಲವೆಂದು ನಮಗೆ ಕಾಣುತ್ತದೆ?"

ಅಜ್ಞಾತಾ: "ಅದೇನೋ ನಿಜ. ತಿಪ್ಪಾಂಬೆಯ ಸಹೋದರರು ತಮ್ಮ ಜೀವನದ ಬಹುಭಾಗವನ್ನು ತಲೆಮರೆಸಿಕೊಂಡು ಕಳೆದದ್ದುಂಟೊ? ಚೆನ್ನಾಗಿಯೇ ಯೋಚಿಸಿ ಹೇಳಿರಿ. ಗೊತ್ತಿಲ್ಲದಿದ್ದರೆ ಗೊತ್ತಿಲ್ಲವೆನ್ನಿರಿ."

ತಿಮ್ಮ: "ಚೆನ್ನಾಗಿ ಗೊತ್ತಿದೆಯಮ್ಮ, ಆ ವಿರೂಪಾಕ್ಷನಿಗೆ ತಲೆಮರೆಸಿಕೊಳ್ಳುವ ಪ್ರಸಂಗವೇನು ಬಂತು? ಅವನು ಸುಖವಾಗಿ ರಾಜಭೋಗವನ್ನು ಅನುಭವಿಸುತ್ತ ತಿಪ್ಪಾಂಬೆಯೊಂದಿಗೆ ಮುಸಲತ್ತು

ಮಾಡಿಕೊಂಡಿದ್ದ."

ಅಜ್ಞಾತಾ: "ಮಸಲತ್ತೆ?"

ರಾಮು: "ಹೌದು. ಕೃಷ್ಣದೇವರಾಯನನ್ನು ಕೊಲ್ಲುವ ಮಸಲತ್ತು. ತಿಪ್ಪಾಂಬೆ, ಮತ್ತು ವಿರೂಪಾಕ್ಷರ ಭಯದಿಂದ ನಮ್ಮ ಕೃಷ್ಣದೇವರಾಯನಲ್ಲವೇ ಪಟ್ಟಕ್ಕೆ ಬರುವವರೆಗೂ ಅಜ್ಞಾತವಾಸದಲ್ಲಿ ಕಾಲಕಳೆದವನು?"

ಥಳಕ್ಕೆಂದು ಅಜ್ಞಾತಾದೇವಿಯ ಮಾನಸದಲ್ಲಿ ಇನ್ನೊಂದು ಮಿಂಚು ಮಿಂಚಿತು!

"ಏನೇನು ಕವಿಗಳೆ! ವಿಪರೀತವಾಗಿ ಕಲ್ಪಿಸಿ ಹೇಳುವಿರಾ?"

ತಿಮ್ಮ: "ನಿನ್ನ ಮಾತುಗಳೇ ವಿಪರೀತವಾಗಿವೆಯಮ್ಮ! ಆಹಾ! ನಿನ್ನ ಈ ದೇವತಾ ಗುಣವೆಲ್ಲಿ? ಆ ವಿರೂಪಾಕ್ಷನ ರಾಕ್ಷಸ ಗುಣವೆಲ್ಲಿ? ಅವನಿಗೂ ನಿನಗೂ ಪತಿಪತ್ನಿಯರ ಸಂಬಂಧವೆನ್ನುವಿಯಲ್ಲ! ಅಮ್ಮ, ನಿನ್ನ ಪತಿಯ ಗುಣ ನಡತೆಗಳನ್ನು ನೀನು ಚೆನ್ನಾಗಿ ಬಲ್ಲೆಯಾ?"

ಅಜ್ಞಾತಾ: "ಆಹಾ! ಸಂದೇಹವೇನಿದೆ? ಅವರು ನನ್ನನ್ನು ಧರ್ಮಾನುಸಾರವಾಗಿ ವಿವಾಹವಾದರು. ಪವಿತ್ರವಾದ ಪ್ರೇಮವುಳ್ಳವರು. ಮಹಾ ಉತ್ತಮರು. ಸಾಧುಗಳು, ಶಾಂತರು, ವೀರವರೇಣ್ಯರು ನಾನು ಅವರ ಸೇವೆಯಲ್ಲಿ ಬಹುಕಾಲವನ್ನು ಕಳೆದಿರುತ್ತೇನೆ. ಗುಣ ನಡತೆಗಳ ವಿಷಯದಲ್ಲಿ ಮಾತ್ರ ಈ ಮಹಾಘಾತಕಿಯಾದ, ಕೊಲೆಪಾತಕಿಯಾದ ತಿಪ್ಪಾಂಬೆಗೂ ಅವರಿಗೂ ಅಜಗಜಾಂತರ. ಒಂದೇ ಹೊಟ್ಟೆಯಲ್ಲಿ ಇಂತಹ ಗುಣ ವ್ಯತ್ಯಾಸವು ಹೇಗೆ ಹುಟ್ಟಿತೆಂದು ನನಗೆ ಆಶ್ಚರ್ಯವಾಗುತ್ತದೆ."

ತಿಮ್ಮ: "ಹಾಗಿದ್ದರೆ, ತಾಯೇ, ನಾರೀರತ್ನಳಾದ ನೀನು ಉತ್ತಮರೆಂದು ತಿಳಿಯುವ ನಿನ್ನ ಪತಿಯಾದ ವಿರೂಪಾಕ್ಷರು ಬೇರೆಯೇ ಸರಿ!"

ಅಜ್ಞಾತಾದೇವಿಯ ಮನಸ್ಸಿನಲ್ಲಿ ಮತ್ತೊಂದು ಮಿಂಚು! ಏನೋ ಯೋಚನೆ ಹಿಡಿಯಿತು ಅವಳಿಗೆ!

ತಿಮ್ಮ: "ತಾಯಿ, ತಿಪ್ಪಾಂಬೆಯನ್ನು ಕೊಲೆಪಾತಕಿ ಎಂದೆ

ಯಲ್ಲಾ ? ಹಾಗೆಯೇ ನಿನ್ನೆ ಸಭೆಯಲ್ಲಿ ನಾಗಲಾದೇವಿಯ ಹತ್ಯೆ ವಾಯಿತೆಂದೂ ಹೇಳಿದಿ ! ಆ ಹತ್ಯೆಗೂ, ಈ ಕೊಲೆಪಾತಕಿ ಬಿರುದಿನ ವಳಿಗೂ ಏನಾದರೂ ಸಂಬಂಧವಿರಬಹುದೆ ?"

ಅಜ್ಞಾತಾ: "ಇದೆ ಕವಿಗಳೆ. ನನ್ನ ಪತಿಗೆ ತಿಪ್ಪಾಂಬೆ ಅಕ್ಕ ನಾಗಬೇಕೆಂಬ ಹೊಸ ಸಂಗತಿ ಇತ್ತೀಚೆಗೆ ತಾನೇ ನನಗೆ ತಿಳಿಯಿತು. ಅದನ್ನು ಸರಿಯಾಗಿ ಊರ್ಜಿತ ಪಡಿಸಿಕೊಳ್ಳೋಣವೆಂದು ನಾನು ರಹಸ್ಯವಾಗಿ ತಿಪ್ಪಾಬೆಯ ಮಂದಿರಕ್ಕೆ ಹೋಗಿದ್ದೆ. ಆಗಲೇ ಭಯಂಕರ ಸ್ವರೂಪಿಣಿಯಾದ ತಿಪ್ಪಾಂಬೆ ನಾಗಲಾದೇವಿಯನ್ನೂ ಅವಳ ದಾಸಿಯನ್ನೂ ಹತ್ಯಮಾಡಿ, ನನ್ನನ್ನೆ ಕೊಲೆಗಾರಿಣಿಯೆಂದು ಹಿಡಿಸಿ ಹಾಕಿದಳು. ನಾನು ಸೆರೆಮನೆಯಿಂದ ತಪ್ಪಿಸಿಕೊಂಡು, ತಿಪ್ಪಾಂಬೆಯನ್ನೂ ಹಿಡಿದು ತರಿಸಿ ಇಲ್ಲಿ ಸೆರೆಹಾಕಿದ್ದೇನೆ. ಇದನ್ನೆಲ್ಲಾ ವಿವರವಾಗಿ ಆಮೇಲೆ ತಿಳಿಸುವೆನು. ನನ್ನ ಪತಿಯ ವಿಷಯವಾಗಿ ತಿಪ್ಪಾಂಬೆ ಒಂದು ರೀತಿ ಹೇಳಿದರೆ, ನೀವು ಅದಕ್ಕೆ ವಿರುದ್ಧವಾಗಿ ಹೇಳುತ್ತೀರಿ !"

ರಾಜಮಾತಾ ನಾಗಿಲಾದೇವಿಯ ಹತ್ಯನನ್ನು ಕೇಳಿ ಗುರು ಶಿಷ್ಯರು ತುಂಬಾ ವ್ಯಸನಪಟ್ಟರು.

ತಿಮ್ಮಣ್ಣನೆಂದ: "ಅಮ್ಮಾ, ಆ ಘೋರ ರಾಕ್ಷಸಿಯಾದ ತಿಪ್ಪಾಂಬೆ ನಿನ್ನೊಂದಿಗಿರುವುದೇ ಒಂದು ವಿಕಾರವಾಗಿದೆ. ಕಡೆಗೂ ಅವಳು ಸವತಿಯನ್ನು ಕೊಂದೇ ಬಿಟ್ಟಳೆ! ಆಹಾ ! ತಿಪ್ಪಾಂಬೆಗೆ ಕೃಷ್ಣದೇವರಾಯನ ಮೇಲೆ ಜನ್ಮದ್ವೇಷ. ಇದರ ಮೇಲೆ ಅವನು ತನ್ನ ಉದಾತ್ತ ಗುಣಗಳಿಂದ ಜನಪ್ರಿಯನಾಗುತ್ತಾ ಬರುವುದನ್ನು ನೋಡಿ, ಅವಳು ಬಿಡುವ ಗಾಳಿಯೇ ವಿಷವಾಗುತ್ತಿತ್ತು. ಅವಳು ನಮ್ಮ ರಾಯನನ್ನು ಹತ್ಯಮಾಡಬೇಕೆಂದು ಬಹಳ ಬಹಳ ಹಂಚಿಕೆ ಮಾಡುತ್ತಿದ್ದಳು. ಆಗ ತಿಪ್ಪಾಂಬೆಯೇ ರಾಣೀ ಸಮಾನೆಯಾಗಿದ್ದ ಳಲ್ಲವೆ ? ಇದನ್ನರಿತ ಮಂತ್ರಿವರ್ಯ ತಿಮ್ಮರಸರು ಕೃಷ್ಣರಾಯನನ್ನು ಗುತ್ತಿ, ಚಂದ್ರಗಿರಿ ಮೊದಲಾದ ದೂರ ಪ್ರಾಂತಕ್ಕೆ ಕಳುಹಿಸಿ ಅಡಗಿರು ವಂತೆ ಮಾಡಿದ್ದರು. ತಂದೆಯ ಕಾಲದಲ್ಲಿ ಕೃಷ್ಣರಾಯನು ಆಗಾಗ

ರಾಜಧಾನಿಗೆ ಬಂದು, ಯುದ್ಧವೇ ಮೊದಲಾದ ಕಾರ್ಯಗಳಲ್ಲಿ, ತಂದೆಗೆ ಸಹಾಯಮಾಡಿ, ಕೂಡಲೇ ಅಡಗಿ ಹೋಗುತ್ತಿದ್ದನು. ತಂದೆ ನರಸರಾಜರ ಮರಣದ ನಂತರ ತಿಪ್ಪಾಂಬೆಯ ಮಗ ವೀರ ನರಸಿಂಹರು ಪಟ್ಟಕ್ಕೆ ಬಂದರಷ್ಟೆ? ಆಗ ತಿಪ್ಪಾಂಬೆ ರಾಜಮಾತೆಯಾಗಿ ಅವಳ ಸರ್ವಾಧಿಕಾರತ್ವದಿಂದ ಕೃಷ್ಣದೇವರಾಯನಿಗೆ ಉಳಿಗಾಲವಿಲ್ಲದ ಸ್ಥಿತಿಯುಂಟಾಯಿತು. ಇದನ್ನರಿತು ತಿಮ್ಮರಸರು ಇನ್ನು ಮೇಲೆ ರಾಜಧಾನಿಗೆ ಬರಲೇ ಬೇಡವೆಂದು ಕಟ್ಟು ಮಾಡಿ ಕೃಷ್ಣದೇವನನ್ನು ಕಳುಹಿಸಿ ಬಿಟ್ಟರು. ತಿಮ್ಮರಸರು ಕೃಷ್ಣದೇವನ ಸಂರಕ್ಷಕರಾಗಿರುವ ರೆಂಬ ಗುಟ್ಟು ಯಾರಿಗೂ ಗೊತ್ತಿರಲಿಲ್ಲ. ರಾಜಾ ವೀರನರಸಿಂಹನು ಸಾಯುವ ಮೊದಲು ಕಾಯಿಲೆಯಲ್ಲಿದ್ದಾಗ ತಿಪ್ಪಾಂಬೆಯ ಗೂಢ ಚಾರರು ಎಲ್ಲಿಂದಲೋ ಕೃಷ್ಣದೇವರಾಯನನ್ನು ಹಿಡಿದುಕೊಂಡು ಬಂದರು. ರಾಜಕಾರ್ಯದಲ್ಲಿ ಅಣ್ಣನಿಗೆ ಸಹಾಯಮಾಡದೆ ಅಡಗಿದ ದ್ರೋಹಿ ಎಂದು ಅವನ ಮೇಲೆ ಅಪವಾದವನ್ನು ಹೇರಿ ಅವನನ್ನು ಕಾರಾಗೃಹದಲ್ಲಿ ಹಾಕಿಸಿದಳು ಈ ತಿಪ್ಪಾಂಬೆ. ಹಾಗು ಅಲ್ಲಿಯೇ ಅವನನ್ನು ಕೊಂದು ಹಾಕುವಂತೆ ತನ್ನ ಸಹೋದರ ವಿರೂಪಾಕ್ಷನನ್ನೆ ನಿಯಮಿಸಿದಳು. ತಿಮ್ಮರಸರು ಇದನ್ನು ಕಂಡು ಹಿಡಿದು, ಕಳವೂ ಕೈಯೂ ಆಗಿ ಆ ವಿರೂಪಾಕ್ಷನನ್ನು ಹಿಡಿದು ವಿಚಾರಣೆಗೆ ಗುರಿಪಡಿಸಿ ಶೂಲಕ್ಕೇರಿಸಿ ಬಿಟ್ಟರು. ಆಗ ತಿಪ್ಪಾಂಬೆ ವಿಚಿತ್ರವಾದ ಸುದ್ದಿಯನ್ನು ಹುಟ್ಟಿಸಿದಳು. ಕೃಷ್ಣದೇವರಾಯನು ಅವಳ ಮೊಮ್ಮಗನನ್ನು ಹತ್ಯ ಮಾಡಲು ನೋಡಿದನೆಂದೂ, ಅದನ್ನು ವಿರೂಪಾಕ್ಷನು ಕಂಡು ಹಿಡಿದುದಕ್ಕಾಗಿ, ಅವನ ಮೇಲೆ ಇಲ್ಲದ ಅಪವಾದವನ್ನು ಹೇರಿ ಅನ್ಯಾಯದಿಂದ ಶೂಲಕ್ಕೇರಿಸಿದರೆಂದೂ ವಾರ್ತೆ ಹುಟ್ಟಿಸಿದಳು. ಇದನ್ನು ಕೇಳಿಯೇ ನೀನು ದುಃಖಭ್ರಾಂತಳಾಗಿರಬೇಕು."

ರಾಮಕೃಷ್ಣ: "ಹೌದು, ಇರಬೇಕು. ಅಮ್ಮ, ನೀನು ಕಟ್ಟ ಕಡೆಗೆ ಪತಿಯನ್ನು ಅಗಲಿದ್ದು ಹೇಗೆ? ಎಲ್ಲಿ?"

ಅಜ್ಞಾತಾ: "ಕೇಳಿರಿ. ಚಂದ್ರಗಿರಿ ಮಂಡಲದ ಓಂಪಲ್ಲಿ ಎಂಬ ಗ್ರಾಮದಲ್ಲಿ ನಾವು ವಾಸವಾಗಿದ್ದೆವು. ವೀರ ನರಸಿಂಹರಾಯರು

ಸಾಯುವುದಕ್ಕೆ ಒಂದು ತಿಂಗಳ ಮೊದಲು, ನನ್ನವರು ಎಂದಿನಂತೆ ಅಶ್ವಾರೋಹಿಗಳಾಗಿ ತಿರುಗಾಡಲು ಹೋದರು. ರಾತ್ರಿ ಬಹಳ ಹೊತ್ತಾದರೂ ಅವರು ತಿರುಗಿ ಬರಲಿಲ್ಲ. ಕಡೆಗೆ ಅವರ ಕುದುರೆ ಮಾತ್ರ ಕುಂಟುತ್ತಾ ತಿರುಗಿ ಬಂದಿತು. ಅವರು ಅದರ ಕೊರಳಿನ ಪಟ್ಟೆಯಲ್ಲಿ ಒಂದು ಪತ್ರವನ್ನು ಸಿಕ್ಕಿಸಿದ್ದರು. ಅದರಲ್ಲಿ ತಾನು ದೊಡ್ಡ ಗಂಡಾಂತರಕ್ಕೆ ಸಿಕ್ಕಿರುವೆನೆಂದೂ, ಇನ್ನು ತನ್ನ ದರ್ಶನವು ನನಗಾಗೆ ಲಾರದೆಂದೂ, ಮಗಳನ್ನು ಕಾಪಾಡಿಕೊಂಡು ನಾನು ಆಯುಷ್ಯವನ್ನು ಕಳೆಯಬೇಕೆಂದೂ ಬರೆದಿದ್ದರು. ಆಹಾ! ಪತಿಯ ಆ ಕಟ್ಟಕಡೆಯ ಪತ್ರವನ್ನು ನೋಡಿ, ನನ್ನ ಸ್ಥಿತಿ ಹೇಗಾಗಿರಬಹುದೋ ಯೋಚಿಸಿ ನೋಡಿ. ಬಳಿಕ ನನ್ನ ಪತಿಯ ವಿಚಾರವನ್ನು ಕೂಲಂಕಷವಾಗಿ ಅರಿತುಕೊಂಡು ಬರುವಂತೆ ವಿಜಯನಗರಕ್ಕೆ ಜನರನ್ನು ಕಳುಹಿಸಿದೆನು. ಅವರು ಬಂದು, ಕೃಷ್ಣದೇವರಾಯನೂ ತಿಮ್ಮರಸನೂ ಸೇರಿಕೊಂಡು ಅವರನ್ನು ಶೂಲಕ್ಕೇರಿಸಿದರೆಂಬ ಘೋರ ವಾರ್ತೆಯನ್ನು ತಿಳಿಸಿದರು. ಆಮೇಲೆ ಕೃಷ್ಣದೇವರಾಯನು ಪಟ್ಟಾಭಿಷೇಕ ಮಾಡಿಸಿಕೊಂಡ ವಾರ್ತೆಯೂ ಕೇಳಿಸಿತು. ಈ ದುಃಖದಿಂದಲೇ ವೃದ್ಧೆಯಾದ ನನ್ನ ತಾಯಿಯೂ ತೀರಿಹೋಗಿ ನಾನು ನಿರ್ಗತಿಕಳಾದೆನು. ಪರಮ ವೈರಾಗ್ಯ ವನ್ನು ತಾಳಿದೆನು. ಮಗಳೊಂದಿಗೆ ದೇಶಪರ್ಯಟನೆಗೆ ಹೊರಟೆನು. ಆಗ ದೈವಯೋಗದಿಂದ ನನಗೆ ಚೋರರ ಸಹಾಯವು ದೊರೆಯಿತು. ಹೀಗಾಗಿದ್ದೇನೆ."

ತಿಮ್ಮ: "ಆಹಾ! ನಿನ್ನ ವೃತ್ತಾಂತವು ಅತ್ಯದ್ಭುತವಾಗಿದೆ. ಈಗ ಈ ತಿಪ್ಪಾಂಬೆ ತಲೆ ಬುಡವಿಲ್ಲದ ನಿನ್ನ ಭಾವನೆಗೆ ತಕ್ಕಹಾಗೆ ಹೇಳಿ, ನಿನ್ನ ವೈರಾಗ್ನಿಯನ್ನು ಇನ್ನಷ್ಟು ಪ್ರಜ್ವಲಿಸುವಂತೆ ಮಾಡಿರಬೇಕು. ತಿಪ್ಪಾಂಬೆ ಸಾಮಾನ್ಯಳಲ್ಲಮ್ಮ. ತನ್ನ ಮಗನು ಸಾಯುವಾಗ ದೇವರನ್ನು ಧ್ಯಾನಿಸಲಿಕ್ಕಾದರೂ ಇವಳು ಬಿಡಲಿಲ್ಲ. ಕೃಷ್ಣದೇವನ ಸಂಹಾರದ ಮಂತ್ರವನ್ನು ಅವನ ಕಿವಿಗೆ ಊದಿಕೊಂಡೇ ಇದ್ದಳು. ಅವಳ ದುರ್ಬೋಧನೆಯಿಂದ ವೀರನರಸಿಂಹನು ಸಾಯುವ ಮೊದಲು ಕೃಷ್ಣದೇವನ ಕಣ್ಣುಗುಡ್ಡೆಗಳನ್ನು ಕಿತ್ತುತರುವಂತೆ ಹಟ

ಮಾಡಿದನು. ಆಗ ಕಾರಾಗೃಹದಲ್ಲಿದ್ದ ಭ್ರಾತೃಭಕ್ತನಾದ ಕೃಷ್ಣದೇವ ರಾಯನು ತನ್ನ ಕಣ್ಣುಗಳನ್ನು ಕಿತ್ತು ಕೊಡಲಿಕ್ಕೂ ಸಿದ್ಧನಾದನು. ಆದರೆ ತಿಮ್ಮರಸರು ಬಿಡಲಿಲ್ಲ. ಕೃಷ್ಣದೇವನನ್ನು ಒತ್ತಾಯದಿಂದ ಅಡಗಿಸಿಟ್ಟರು. ಸತ್ತ ಮೇಕೆಯ ಕಣ್ಣುಗಳನ್ನು ಒಯ್ದು ತೋರಿಸಿ, ವೀರನರಸಿಂಹನ ಪ್ರಾಣವನ್ನು ನೆಮ್ಮದಿಯಿಂದ ಬಿಡಿಸಿದರು."

ಅಜ್ಞಾತಾ : "ತಿಪ್ಪಾಂಬೆಯ ಮೊಮ್ಮಗನನ್ನು ಕೃಷ್ಣದೇವ ರಾಯನು ವಿಷವನ್ನಿಕ್ಕಿ ಕೊಂದದ್ದು ಸುಳ್ಳೆ? ವೀರ ನರಸಿಂಹನಿಗೂ ವಿಷವನ್ನು ಹಾಕಿದರಂತಲ್ಲಾ?"

ರಾಮಕೃಷ್ಣ : "ಅದೆಲ್ಲಾ ತಿಪ್ಪಾಂಬೆಯ ವಿಷಮ ಪ್ರಚಾರ."

ತಿಮ್ಮ : "ಅಮ್ಮ, ವೀರನರಸಿಂಹನು ರಾಯಚೂರಿನ ಒಂದು ಯುದ್ಧದಲ್ಲಿ ಪಡುಗಾಯವನ್ನು ಪಡೆದು ಅದರಿಂದಲೇ ವ್ಯಾಧಿಗ್ರಸ್ತ ನಾಗಿ ಮೃತನಾದನು. ಅವನ ಮಗನು ಶಿಶುತನದಲ್ಲಿಯೇ ಕ್ಷಯ ರೋಗಕ್ಕೆ ತುತ್ತಾಗಿ ತೀರಿಹೋದನು. ಸಿಂಹಾಸನವು ನ್ಯಾಯರೀತಿ ಯಾಗಿಯೇ ಕೃಷ್ಣದೇವನ ಪಾಲಿಗೆ ಬಂದಿದೆ. ಆಗಾದರೂ ಕೃಷ್ಣದೇವ ರಾಯನ ವಿರಕ್ತಿಯನ್ನು ಹೋಗಲಾಡಿಸಿ ಪಟ್ಟಾಭಿಷೇಕಕ್ಕೆ ಒಪ್ಪಿಸ ಬೇಕಾದರೆ ತಿಮ್ಮರಸರಿಗೆ ಸಾಕುಸಾಕಾಗಿತ್ತು."

ಅಜ್ಞಾತಾದೇವಿಯ ಮಾನಸದಲ್ಲಿ ದೊಡ್ಡದೊಂದು ಚಂಡಾ ವಾತವು ಪ್ರಾರಂಭವಾಗಿತ್ತು. ತನ್ನೊಳಗೆ ತಾನೇ ಹೇಳಿಕೊಂಡಂತೆ, "ಅದೇನೊ? ವಿರಕ್ತಿಗೇನಾಯಿತೋ? ಅವನ ಹೆಂಡಿರು ಮಕ್ಕಳೆಲ್ಲರೂ ತೀರಿಹೋದರೇನೋ?" ಎಂದಳು.

ತಿಮ್ಮ : "ಅದನ್ನೂ ಹೇಳಿಬಿಡುವೆವು ಕೇಳು ತಾಯಿ. ಅದೆಲ್ಲವೂ ರಮಣೀ ಪ್ರೇಮಯೋಗದ ಪರಿಣಾಮವೇ. ಮೊದಮೊದಲು ಅವನು ರಾಜಧಾನಿಗೆ ಬಂದಾಗ, ವಿವಾಹದ ಪ್ರಸ್ತಾಪವನ್ನೆತ್ತಿದರೆ ತನಗೆ ವಿವಾಹವೇ ಬೇಡವೆಂದು ಹಟ ಹಿಡಿಯುತ್ತಿದ್ದನು. ಕಡೆಗೆ ಅವನ ಪಟ್ಟಾಭಿಷೇಕದ ಕಾಲಕ್ಕೆ ನಿಜವಾದ ಗುಟ್ಟು ಹೊರಗೆ ಬಂತು."

ಅಜ್ಞಾತಾ : "ಅದೇನು ಗುಟ್ಟು?"

ತಿಮ್ಮ : "ಅವನು ಅಜ್ಞಾತವಾಸದಲ್ಲಿದ್ದಾಗ ಅಜ್ಞಾತ ಕುಲ

ಗೋತ್ರಿಣಿಯಾದ ಒಬ್ಬಳನ್ನು ಪ್ರೇಮಿಸಿ ವಿವಾಹ ಮಾಡಿ ಕೊಂಡು...."

ಮತ್ತೊಂದು ಮಿಂಚು ಮಿಂಚಿದಂತಾಗಿ ಅಜ್ಞಾತಾ ನಡುವೇ ಬಾಯಿ ಹಾಕಿದಳು. "ಹಾ! ಏನಂದಿರಿ? ಅಜ್ಞಾತ ಕುಲಗೋತ್ರಿಣಿಯೆ?"

ತಿಮ್ಮ: "ಹೌದಮ್ಮ ಹೌದು. ಆ ಪತ್ನೀಮಣಿಯನ್ನು ಪಟ್ಟದ ರಾಣಿಯಾಗಿ ಮಾಡಿಕೊಳ್ಳಬಹುದಾದರೆ ಮಾತ್ರವೇ ಸಿಂಹಾಸನಾರೋಹಣ ಮಾಡುವೆನೆಂದೂ ಇಲ್ಲದಿದ್ದರೆ ಅಪವಿತ್ರನಾದ ತಾನು ಸಿಂಹಾಸನವೇರಲು ಅನರ್ಹನೆಂದೂ, ತಮ್ಮನಾದ ಅಚ್ಯುತರಾಯನಿಗೇ ಪಟ್ಟಗಟ್ಟಿರೆಂದೂ ಕೃಷ್ಣದೇವರಾಯನು ಹಟ ಹಿಡಿದನು. ಕಡೆಗೆ ತಿಮ್ಮರಸರ ಬೋಧನಾಶಕ್ತಿಯೂ, ತಂದೆಯ ಮರಣಶಾಸನವೂ ಅವನನ್ನು ಕರ್ತವ್ಯಕ್ಕೆ ತಿರುಗಿಸಿದುವು. 'ಬೇಕಾದರೆ ಆ ಪ್ರೇಮ ಕಾಮಿನಿಯನ್ನು ಭೋಗಕಾಂತೆಯನ್ನಾಗಿ ಇರಿಸಿಕೊಳ್ಳಬಹುದಲ್ಲಾ' ಎಂದು ತಿಮ್ಮರಸನಂದುದಕ್ಕೆ ನಮ್ಮ ರಾಯನು ಕಲ್ಮನನಾಗಿ ಆ ಪ್ರೇಮಪತ್ನಿಯನ್ನು ತ್ಯಾಗಮಾಡಿ ಸಿಂಹಾಸನಾರೋಹಣ ಮಾಡಿದನು. ತನ್ನ ಪ್ರಿಯಪತ್ನಿಯನ್ನು ಪಟ್ಟದರಾಣಿಯನ್ನಾಗಿ ಮಾಡಲಾರದೆ ಹೋಯಿತಲ್ಲಾ ಎಂದು ಬೇಗುದಿಗೊಂಡ ಅವನ ಮನಸ್ಸನ್ನು, ತಿಮ್ಮರಸರು ಭಗೀರಥಪ್ರಯತ್ನಪಟ್ಟು, ಗಜಪತಿ ನಂದಿನಿಯಾದ ರುಚೀದೇವಿಯನ್ನು ಪರಿಸಲೊಪ್ಪುವಂತೆ ಮಾಡಿದರು."

ಅಜ್ಞಾತಾದೇವಿಯ ಕಣ್ಣಿನಲ್ಲಿ ದಳದಳನೆ ನೀರಿಳಿಯಿತು.

ರಾಮು: "ಸೈರಿಸಮ್ಮ, ಸೈರಿಸು. ನಿನ್ನ ಇನ್ನೊಂದು ತಪ್ಪನ್ನು ವಿಶದಪಡಿಸಬಹುದೆ?"

ಅಜ್ಞಾತಾ: "ಹೇಳಿರಿ. ಎಲ್ಲವನ್ನೂ ಹೇಳಿರಿ!"

ತಿಮ್ಮ: "ನೀನು ರುಚೀದೇವಿಗೆ ಸ್ವಯಂವರವನ್ನು ಏರ್ಪಡಿಸಬೇಕೆಂದು ಅಪ್ಪಣೆ ಕೊಡಿಸಿದಿಯಷ್ಟೆ? ಅವಳು ಆಗಲೇ ತನ್ನ ವರನನ್ನು ಆರಿಸಿಕೊಂಡು, ಅವನ ಭಾವಚಿತ್ರವನ್ನು ತನ್ನೊಂದಿಗೇ ಇಟ್ಟುಕೊಂಡಿರುತ್ತಾಳೆ. ಅದನ್ನು ನೀನು ಅಗತ್ಯವಾಗಿ ಒಮ್ಮೆ ನೋಡಲೇ

ಬೇಕು."

ಅಜ್ಞಾತಾ: "ನನ್ನ ಕಿವಿಗೆ ಕೇಳುತ್ತಿರುವುದೆಲ್ಲಾ ಕನಸಿನ ಮಾತುಗಳಲ್ಲವಷ್ಟೆ ?"

ತಿಮ್ಮ: "ಅಲ್ಲ ತಾಯಿ. ಭ್ರಾಂತಿಯ ಪರದೆ ಹರಿಯುತ್ತಾ ನಿಜವಾದ ಮಾತುಗಳೇ ನಿನ್ನ ಕಿವಿಗಳಿಗೆ ಕೇಳುತ್ತಿವೆ. ಅದಿರಲಿ. ನಿನ್ನ ಪತಿಯ ಪೂರ್ವಾಪರ ವೃತ್ತಾಂತಗಳು ನಿನಗೆ ಗೊತ್ತಿಲ್ಲದೆ ಹೋಗಲು ಕಾರಣವೇನೆಂದು ಹೇಳುವಿಯಾ ?"

ಅಜ್ಞಾತಾ: "ಅದೇನೊ! ತಮ್ಮ ವೃತ್ತಾಂತವನ್ನು ಬಹು ಜಾಗರೂಕತೆಯಿಂದ ಮುಚ್ಚಿಟ್ಟುಕೊಂಡಿದ್ದರು. ನರಸರಾಜರ ಕಾಲ ದಲ್ಲಿ ಅವರು ಆಗಾಗ ವಿಜಯನಗರಕ್ಕೆ ಹೋಗಿ ಹೋಗಿ ಬರುತ್ತಿದ್ದರು. ಬಳಿಕ ವೀರನರಸಿಂಹರು ಪಟ್ಟಕ್ಕೆ ಬಂದ ಮೇಲೆ, ಏನೋ ಏಕೋ, ಬಹಳ ರಹಸ್ಯವಾಗಿ ಅಡಗಿರತೊಡಗಿದರು. ತಾನು ರಾಜಕುಟುಂಬ ದಲ್ಲಿ ಹುಟ್ಟಬಾರದಿತ್ತು ಎಂದು ಅವರು ಒಂದೆರಡು ಬಾರಿ ಉದ್ಗಾರ ತೆಗೆದಿದ್ದರು. ಆದರೆ ನಾನೆಷ್ಟು ಕೇಳಿದರೂ ತನ್ನ ಕುಲಗೋತ್ರಾದಿ ಗಳನ್ನು ನನಗೆ ಹೇಳಲೇ ಇಲ್ಲ. ಹೌದು. ಅದಕ್ಕೆ ಕಾರಣಳೂ ನಾನೇ. ಕುಲಗೋತ್ರವಿಲ್ಲದ ಅನಾಥ ಸ್ತ್ರೀ ನಾನು. ನನ್ನ ಮನಸ್ಸಿಗೆ ಬೇಸರ ವಾಗಬಾರದೆಂದೇ ಅವರು ತಮ್ಮ ವೃತ್ತಾಂತವನ್ನು ನನಗೆ ಹೇಳಿರಲಿ ಕ್ಕಿಲ್ಲ. ನಿನ್ನಂತೆಯೇ ನಾನೂ ಕುಲಗೋತ್ರಹೀನನೇ ಎಂದೊಮ್ಮೆ ಹೇಳಿದ್ದಾರೆ."

ಗುರುಶಿಷ್ಯರಿಬ್ಬರೂ ಒಮ್ಮೆಲೆ: "ಅನಾಥಳೇ ನೀನು ?"

ಅಜ್ಞಾತಾ: "ಹೌದು. ಕವಿಗಳೇ, ಆಗ ನಾನು ಅನಾಥ ಭದ್ರಪ್ಪನ ಮಗಳು. ಆದರೆ ಇತ್ತೀಚೆಗೆ ನನ್ನ ತಂದೆ ಪ್ರಕಟರಾಗಿ ದ್ದಾರೆ. ಅವರಾರೆಂದು ಇನ್ನು ಸ್ವಲ್ಪ ದಿನಗಳಲ್ಲಿ ಬಹಿರಂಗವಾಗು ತ್ತದೆ."

ತಿಮ್ಮ: "ಅವರಾರೇ ಇರಲಿ. ನಿನ್ನ ಮುಖಲಕ್ಷಣವೇ ನೀನು ಉತ್ತಮ ಕ್ಷಾತ್ರವಂಶೀಯಳೆಂಬುದನ್ನು ಸಾರುತ್ತಿದೆ. ನೀನು ವೈರಾಗ್ಯ ವೇಷದಲ್ಲಿದ್ದರೂ ನಿನ್ನ ಮುಖಕಮಲದಲ್ಲಿ ಸೌಭಾಗ್ಯಶ್ರೀ ಶೋಭಿಸು

ತ್ತಿದೆಯಲ್ಲಾ ! ಅಮ್ಮಾ, ನನಗೆ ಸಾಮುದ್ರಿಕಾ ಶಾಸ್ತ್ರದಲ್ಲಿ ಪರಿಚಯ ವುಂಟು. ನಿನ್ನ ಪತಿ ನಿಶ್ಚಯವಾಗಿಯೂ ಮೃತನಾಗಿಲ್ಲ. ಎಲ್ಲಿ, ನಿನ್ನ ಎಡದ ಕೈಯನ್ನು ಮುಂದೆ ಚಾಚಮ್ಮ."

ಅಜ್ಞಾತಾದೇವಿ ಚೆಂದಾವರೆಯಂತಹ ತನ್ನ ಎಡದಂಗೈಯನ್ನು ಮುಂದೆ ಹಿಡಿದಳು. ಅದರಲ್ಲಿಯ ಶುಭ್ರ ಶೋಭಿತ ಸುವರ್ಣ ಸದೃಶ ರೇಖೆಗಳನ್ನು ಪರೀಕ್ಷಿಸಿದ ತಿಮ್ಮಣ್ಣನು, ಆನಂದಾಶ್ಚರ್ಯಗಳಿಂದ, "ಆಹಾ ! ಇದು ಸೌಭಾಗ್ಯವತಿಯ ಹಸ್ತ ! ಸಾಮ್ರಾಜ್ಞಿಯ ಹಸ್ತ ! ಅಮ್ಮ, ನೀನು ದೀರ್ಘ ಸುಮಂಗಲಿ !....ಆದರೆ ಕೊಂಚ ಕಾಲ ಪತಿಯ ಅಗಲುವಿಕೆಯೂ...." ಎನ್ನುತ್ತಿರಲು, ಅಜ್ಞಾತೆ, "ಆಹಾ ! ದೇವಾ ! ಇದು ಸತ್ಯವೆ ?" ಎಂದು ಉದ್ಗರಿಸುತ್ತಾ ಆನಂದಪರವಶತೆ ಯಲ್ಲಿ ಮೈಮರೆತುಹೋದಳು.

"ಅಮ್ಮಾ, ಸೈರಿಸಿಕೋ ! ಧೀರೆಯಾದ ನೀನು ಆನಂದಾತಿರೇಕ ವನ್ನು ಸೈರಿಸಿಕೊಳ್ಳಲಾರೆಯಾ ?" ಎಂದನು ತಿಮ್ಮಣ್ಣ.

ಅಜ್ಞಾತೆ ಅರಿವಿಗೆ ಬಂದು, "ಎಂಥ ಸಂಗತಿಯನ್ನು ಕೇಳಿದೆನು ! ನಾನೀಗ ಏನೆಂದು ನಿರ್ಣಯಿಸಲಿ ?" ಎಂದಳು.

ತಿಮ್ಮ : "ನಾವಂತೂ ನಿರ್ಣಯಿಸಿಕೊಂಡಾಯಿತು. ನಿನಗೆ ಇನ್ನೇನಾದರೂ ಸಂದೇಹವಿದೆಯೇ ?"

ಅಜ್ಞಾತಾ : "ಆದರೂ ಕಣ್ಣಾರೆ ಕಂಡದ್ದೂ, ಕಿವಿಯಾರೆ ಕೇಳಿದ್ದೂ ಸುಳ್ಳು; ವಿಚಾರಮಾಡಿ ತಿಳಿದದ್ದೇ ಸತ್ಯವೆಂದು ಬಲ್ಲವ ರೆನ್ನುವರಲ್ಲವೆ ?"

ರಾಮು : "ಹೌದು. ಈ ನೀತಿ ಹಿಂದೆ ಎಲ್ಲಿ ಹೋಗಿತ್ತೋ ?"

ತಿಮ್ಮ : "ವಿಚಾರ ಮಾಡಮ್ಮ. ವಿಧಿನಿಯಮಿತವಾದ ಯೋಗಾ ಯೋಗವೇ ಹೀಗಿದೆ !"

ರಾಮು : "ತಾಯೆ, ನೀನು ಮೊದಲು ರುಚೀದೇವಿಯ ಮನೋರಮಣನಾರೆಂದು ಆರಯ್ದು ನೋಡು. ಆಗ ನಿನ್ನ ಸಂದೇಹ ವೆಲ್ಲಾ ಹತ್ತಿಯಂತೆ ಹಾರದಿದ್ದರೆ ನಮ್ಮನ್ನು ಕೇಳು !"

* * *

"ಗೌರಿ, ರುಚೀದೇವಿ ಎಲ್ಲಿರುವಳು?" ಎಂದು ಕೇಳುತ್ತಾ ಅಜ್ಞಾತಾದೇವಿ ರುಚೀದೇವಿಯ ಕೋಣೆಯೊಳಗೆ ಹೊಕ್ಕಳು.

ಏನೋ ಯೋಚನೆ ಮಾಡುತ್ತಿದ್ದ ಗೌರಿ "ಅವಳು ಗಜ ರಾಜೇಂದ್ರರ ಕೋಣೆಗೆ ಹೋಗಿದ್ದಾಳೆ. ಏಕೆ?" ಎನ್ನುತ್ತಾ ಎದ್ದು ಇಲ್ಲದ ಮನಸ್ಸಿನಿಂದ ಗೌರವವನ್ನು ತೋರಿಸಿದಳು.

ಅಜ್ಞಾತಾದೇವಿ ಶಿಲಾಸನದ ಮೇಲೆ ಕುಳಿತುಕೊಳ್ಳುತ್ತ "ಗೌರಿ, ನಿನ್ನ ಒಡತಿಗೆ ಇನ್ನೂ ನನ್ನ ಮೇಲೆ ನಂಬುಗೆ ಇಲ್ಲವೆ?" ಎಂದಳು.

"ಹೇಗಿದ್ದೀತು? ನೀನು ಅವಳನ್ನು ಅಪಹರಿಸಿ ತಂದು ಈ ಬೆಟ್ಟಗಳ ನಡುವೆ ಬಂಧಿಸಿರುವಾಗ ಚೋರನಾಯಕಿಯಾದ ನಿನ್ನನ್ನು ಹೇಗೆ ನಂಬಬೇಕು?"

"ನಾವೇನೂ ನಿಮ್ಮ ಕೈಕಾಲುಗಳಿಗೆ ಸಂಕಲೆ ಹಾಕಿಲ್ಲವಲ್ಲ? ಅಲ್ಲದೆ ತಂದೆಯ ಇಚ್ಛೆಗೆ ವಿರೋಧವಾಗಿ, ಕಪಟ ಸಂನ್ಯಾಸಿಯೊಂದಿಗೆ ನೀವು ರಾತ್ರಾರಾತ್ರಿ ಪರಾರಿಯಾಗುವನ್ನು ನೋಡಿದರೆ, ತಂದೆಯ ಮೇಲಿನ ಅವಳ ವಿಶ್ವಾಸವು ಎಷ್ಟೆಂಬುದು ಗೊತ್ತಾಗುತ್ತದಲ್ಲ?"

"ಅವಳ ಇಷ್ಟ ಬಂದಲ್ಲಿಗೆ ಅವಳು ಹೋದರೆ ನಿನಗೇನು ಬಂತು?"

"ಒಳ್ಳೇದಮ್ಮ. ಆಗಿನ ಅವಳ ಇಷ್ಟವು ಹೀಗೇ ಎಂದು ನನಗೇನು ಗೊತ್ತು? ಆ ಸುದ್ದಿ ಕೇಳಿಯೇ ನಾನೀಗ ಬಂದದ್ದು. ರುಚೀದೇವಿ ಯಾರನ್ನೋ ಮನಸ್ಸಿನಲ್ಲಿ ವರಿಸಿಕೊಂಡು, ಅವನ ಭಾವ ಚಿತ್ರವನ್ನು ಕೂಡಾ ತನ್ನೊಂದಿಗಿಟ್ಟುಕೊಂಡಿರುತ್ತಾಳಂತೆ?"

"ನಿನಗಾರು ಹೇಳಿದರು?"

"ನಿಮ್ಮನ್ನು ಸಾಗಿಸಿಕೊಂಡು ಬಂದ ನಮ್ಮ ನಾಯಕನೇ ಹೇಳಿದನು. ಆ ವರನು ಯೋಗ್ಯನಾಗಿದ್ದರೆ ಅವನೊಂದಿಗೇ ಅವಳ ವಿವಾಹ ಮಾಡಿಸುತ್ತೇನೆ."

"ಗಜಪತಿ ನಂದಿನಿಗೆ ವಿವಾಹ ಮಾಡಿಸಲು ಇಷ್ಟು ಆಸ್ಥೆ ತೋರಿಸುವ ನೀನಾರಮ್ಮ?"

"ನಾನು ಯಾರಾದರೇನೀಗ? ಅವಳ ಸೋದರಮಾವನಾದ ವೀರರುದ್ರ ಗಜಪತಿಯವರೇ ಮಾಡಿಸುತ್ತಾರೆಂದು ತಿಳಿ."

"ಅವರೂ ನಿನ್ನೊಂದಿಗಿರುವುದೇ ಆಶ್ಚರ್ಯವಾಗಿದೆ. ನೀನೆಂತಹ ಮಂತ್ರವಾದಿನಿಯೋ ಏನೂ! ಆದರೆ ರುಚೀದೇವಿಯ ಮನೋ ನಾಯಕನು ನಿನಗೂ ವೀರರುದ್ರರಿಗೂ ಪರಮ ಶತ್ರುವಾಗಿದ್ದರೆ?"

"ಶತ್ರುವಾಗಿದ್ದರೆ ಅವನೊಡನೆ ಮಿತ್ರತ್ವ ಮಾಡಿಕೊಳ್ಳಲಿಕ್ಕೆ ಬಹಳ ಅನುಕೂಲವಾಯಿತಲ್ಲ? ಎಲ್ಲಿ ಆ ಚಿತ್ರಕ್ಕಾಗಿಯೇ ಬಂದಿರು ವೆನು. ತೋರಿಸು ಗೌರಿ. ನಿನ್ನ ಬಳಿಯಲ್ಲಿಯೇ ಉಂಟಂತೆ ಆ ಚಿತ್ರ?"

ಗೌರಿ ಯೋಚಿಸಿದಳು. ತಿಮ್ಮ ಸಂನ್ಯಾಸಿ 'ಅಜ್ಞಾತಾದೇವಿ ಆ ಭಾವಚಿತ್ರವನ್ನು ನೋಡಬೇಕೆಂದು ಹೇಳುವಳು. ಒಡನೆಯೆ ತೋರಿಸು. ಕಲ್ಯಾಣವಾದೀತು' ಎಂದು ಈ ಮೊದಲೇ ಅವಳಿಗೆ ಸೂಚಿಸಿದ್ದನು. ಆದರೂ 'ರುಚೀದೇವಿಯೊಡನೆ ಕೇಳದೆ ತೋರಿಸ ಲಾರೆ'ನೆಂದು ಹೇಳಿದಳು. ಅಜ್ಞಾತಾದೇವಿ ಆತುರದಿಂದ, ಅವಳ ಕೈಯನ್ನು ಹಿಡಿದು, "ನೀನೇ ತೋರಿಸು. ಅವಳಿಗೆ ನಾಚಿಗೆ ಯಾದೀತು. ಎಲ್ಲಿ? ತೆಗೆ ತೆಗೆ!" ಎಂದಳು.

ಗೌರಿ, ಮೂಲೆಯಲ್ಲಿದ್ದೊಂದು ರೇಷ್ಮೆಯ ಕಟ್ಟನ್ನು ತಂದು ಬಿಡಿಸಿದಳು. ಅದರೊಳಗಿನಿಂದ ಆ ಭಾವಚಿತ್ರದ ಕನ್ನಡಿಯನ್ನು ತೆಗೆಯುವಾಗ, ಅಜ್ಞಾತಾದೇವಿ ಅತ್ಯಾತುರದಿಂದ ಎಳೆದುಕೊಂಡು ನೋಡಿದಳು. ಒಡನೆಯೇ ಅವಳ ಹೃದಯವೇ ಉಕ್ಕಿ ಬಾಯಿಗೆ ಬಂದಂತಾಯಿತು. ಕಣ್ಣುಗಳು ಇಷ್ಟಗಲವಾದುವು.

"ಹಾ! ಇದು-ಇದು ಯಾರು? ಆಹಾ! ನಾಥ!" ಎಂದು ಅಪ್ರಯತ್ನವಾಗಿ ಹೇಳುತ್ತ ಒಮ್ಮೆಗೇ ಆ ಚಿತ್ರವನ್ನು ಆಲಿಂಗಿಸಿ ಕೊಂಡು ಮೈಮರೆತಳು.

"ಅಮ್ಮ, ನಿನಗೇನಾಯಿತು?" ಎಂದು ಕೇಳಿದ ಗೌರಿಯ ಪ್ರಶ್ನೆಗೆ ಉತ್ತರ ಬರಲಿಲ್ಲ. ಈ ವಿಚಿತ್ರವನ್ನು ತನ್ನ ಒಡತಿಗೆ ತಿಳಿಸ ಬೇಕೆಂದು ಗೌರಿ ಲಗುಬಗೆಯಿಂದ ಓಡಿಹೋದಳು.

ಅಜ್ಞಾತಾದೇವಿ ಆ ಚಿತ್ರಗತ ಪುರುಷನನ್ನು ನೋಡುತ್ತಾ, ಬಾಯಿಬಿಟ್ಟು ಹೇಳಿಕೊಳ್ಳುತ್ತಿದ್ದಾಳೆ: "ನಾಥ! ಹೀಗೂ ನನ್ನನ್ನು ಮೋಸಮಾಡಬಹುದೆ? ಹೀಗೆ ನೀನು ರಾಜವೇಷದಲ್ಲಿದ್ದರೆ ನಿನ್ನ

ಗುರುತು ಹಿಡಿಯಲಾರೆನೆಂದು ಭಾವಿಸಿದೆಯಾ? ಓಹೋಹೋ! ಈ ಕಿರೀಟವೇನು! ಕುಂಡಲವೇನು! ಮಣಿಮಾಲೆಗಳೇನು! ವಜ್ರಹಾರಗಳೇನು! ಪಟ್ಟಗತ್ತಿಯೇನು! ತಿಳಿಯಿತು! ಕಳ್ಳ! ದರಿದ್ರಳಾದ ನನ್ನನ್ನು ವಂಚಿಸಿ, ಜಗನ್ಮೋಹಿನಿಯ ಮಾನಸವನ್ನು ಸೆಳೆಯಲು ಈ ವೇಷಾಡಂಬರ! ಹುಂ, ಈಗ ಸಿಕ್ಕಿಬಿದ್ದಿಯಲ್ಲೋ ನನ್ನ ಕೈಯೊಳಗೆ!"

ಅವಳು ಆ ಚಿತ್ರದ ಕನ್ನಡಿಯನ್ನು ಮುದ್ದಿಸುತ್ತಲೂ, ಆಲಂಗಿಸುತ್ತಲೂ ಇರುವುದನ್ನು, ಒಳಗೆ ಬರುತ್ತಿದ್ದ ರುಚೀದೇವಿ ನೋಡಿದಳು. ಅವಳ ಆ ಭಾವೋನ್ಮಾದಕ್ಕೆ ಬೆರಗಾಗಿ, "ಇದೇನೇ ಚೋರನಾಯಕಿ" ಎಂದಳು.

ಅಜ್ಞಾತೆ ರುಚೀದೇವಿಯನ್ನು ನೋಡಿ "ಓ! ಬಂದೆಯಾ ಕಳ್ಳಿ! ಬಾರೆ, ನಾನಲ್ಲ ನೀನೇ ಚೋರನಾಯಕಿ! ನನ್ನ ಸೌಭಾಗ್ಯನಿಧಿಯನ್ನು ಅಪಹರಿಸಿದ ನೀನಲ್ಲವೇ ಚೋರನಾಯಕಿ! ಆಹಾ! ಪ್ರಿಯ ತಂಗೀ, ರುಚೀ, ಇತ್ತ ಬಾ ಬಾರೆ!" ಎನ್ನುತ್ತಾ ಪರವಶತೆಯಿಂದ ರುಚೀದೇವಿಯನ್ನು ಎಳೆದು ಗಾಢಾಲಿಂಗನೆ ಮಾಡಿಕೊಂಡಳು. ಹಿಂದೆಯೇ ವೀರರುದ್ರನೂ, ತಿಮ್ಮಣ್ಣ ರಾಮಕೃಷ್ಣರೂ ನೋಡುತ್ತಿದ್ದರು.

"ಇದೇನಮ್ಮ ಅಜ್ಞಾತಾ, ಏನಾಯಿತು?" ಎಂದು ವೀರರುದ್ರನು ಕೊಂಚ ತಡೆದು ಕೇಳಿದನು.

ಆಗಲೇ ಅಜ್ಞಾತಾದೇವಿ ಅರಿವಿಗೆ ಬಂದಳು. ಒಂದು ಕೈಯಿಂದ ರುಚೀದೇವಿಯ ಕೈಯನ್ನು ಹಿಡಿದುಕೊಂಡು, ಇನ್ನೊಂದು ಕೈಯಿಂದ ಚಿತ್ರವನ್ನು ಎದೆಗಾನಿಸಿಕೊಂಡು, "ಆರ್ಯರೆ, ನೀವೆಲ್ಲರೂ ಕೊಂಚ ಹೊರಗೆ ಹೋಗಿರಿ. ನಾನು ರುಚೀದೇವಿಯೊಡನೆ ಕೊಂಚ ರಹಸ್ಯ ಮಾತಾಡಬೇಕಾಗಿದೆ" ಎಂದಳು.

ಅವಳಾಜ್ಞೆಯಂತೆ ಎಲ್ಲರೂ ಹೊರಗೆ ಹೊರಟುಹೋದರು.

ಆಗ, ವೀರರುದ್ರನ ಕುತೂಹಲವನ್ನರಿತ ರಾಮಕೃಷ್ಣನು ತಿಮ್ಮಣ್ಣನ ಕಿವಿಯಲ್ಲಿ, "ಪಾಪ, ವೀರರುದ್ರನು ಕೃಷ್ಣದೇವರಾಯನನ್ನು ಶತ್ರುವಾಗಿ ತಿಳಿದಿದ್ದಾನೆ. ಇನ್ನು ಸಂಬಂಧವು ಗೊತ್ತಾದ ಮೇಲೆ ಅವನಿಗೆ ಹೇಗಾಗುವುದೋ!" ಎಂದನು.

"ಕಾಲಾಯ ತಸ್ಮೈನಮಃ" ಎನ್ನಲೇಬೇಕು ಎಂದನು ತಿಮ್ಮಣ್ಣ.

ಕೋಣೆಯೊಳಗೆ ಅಜ್ಞಾತಾದೇವಿಯೂ, ರುಚೀದೇವಿಯೂ ಇಬ್ಬರೇ ಉಳಿದರು. ಅಜ್ಞಾತಾ ರುಚೀದೇವಿಯನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು, "ತಂಗಿ, ಇದು ಯಾರ ಚಿತ್ರ ಹೇಳೆ" ಎಂದಳು.

"ಏಕೆ? ಇದನ್ನು ನೋಡಿ ನಿನಗೇನಾಯಿತು?"

"ಆನಂದವಾಯಿತು! ರುಚೀ ಸ್ವಯಂವರವನ್ನು ನೆರೆಯಿಸುವ ಮಹಾಭಾರವು ಕಳೆದುಹೋಯಿತಲ್ಲಾ ಎಂದು ಆನಂದವಾಯಿತು. ಈ ಭಾವಚಿತ್ರದ ನರವರೇಣ್ಯನು ಯಾರು ಬಲ್ಲೆಯಾ?"

"ಬಲ್ಲದೇನು?"

"ಯಾರು?"

"ವಿದ್ಯಾನಗರಾಧೀಶ ಶ್ರೀಕೃಷ್ಣದೇವರಾಯ ಸಾರ್ವಭೌಮ!"

"ಅಲ್ಲ! ಅಲ್ಲವೇ ಅಲ್ಲ!"

"ಅಲ್ಲ?"

"ಅಲ್ಲ! ನೀನು ಕೃಷ್ಣದೇವನನ್ನು ನೋಡಿರುವಿಯಾ!"

"ಇಲ್ಲ!"

"ಸರಿ! ನಿನಗೆ ಆ ಸಂನ್ಯಾಸಿ ಮೋಸ ಮಾಡಿದನಮ್ಮ. ಇವನನ್ನು ನಾನು ಚೆನ್ನಾಗಿ ಬಲ್ಲೆ. ಇವನೇ ನಿನಗೆ ತಕ್ಕ ಪತಿ! ಈ ಕ್ಷಾತ್ರ ಪ್ರವರನು ಬೇಗದಲ್ಲಿಯೇ ಇಲ್ಲಿಗೆ ಬರುತ್ತಾನೆ!"

"ಹಾಗಾದರೆ, ಇದು ಯಾರ ಭಾವಚಿತ್ರ?"

"ವಿರೂಪಾಕ್ಷನದು!"

"ವಿರೂಪಾಕ್ಷ!"

"ಹೌದು. ಕೃಷ್ಣದೇವರಾಯನಲ್ಲ! ಚಂದ್ರವಂಶದ ಕ್ಷತ್ರಿಯ ಕುಲಾವತಂಸನಾದ ವಿರೂಪಾಕ್ಷನಿವನು. ನನಗೆ ಚಿರಪರಿಚಿತ!"

ಮೂರ್ಛಿತಳೇ ಆದಳು ರುಚೀದೇವಿ! ಆ ಸಂದೇಹಾವಸ್ಥೆಯಲ್ಲಿಯೇ ಅವಳನ್ನು ಕೆಡವಿ, ಆ ಚಿತ್ರವನ್ನೂ ಅವಳ ಮಡಿಲಲ್ಲಿಟ್ಟು, ಅವಳ ಗಲ್ಲವನ್ನು ಮುದ್ದಿಸಿ ಅಜ್ಞಾತಾದೇವಿ ಅಲ್ಲಿಂದ ಹೊರಟಳು.

ರುಚೀದೇವಿ ತನ್ನ ಸಂದೇಹವನ್ನು ಗೌರಿಯೊಡನೆ ಹೇಳಿ

ಕೊಂಡಳು. ಬಳಿಕ ಆ ಸಂನ್ಯಾಸೀ ಶಿಷ್ಯರನ್ನು ಬರಮಾಡಿಕೊಂಡು ಅವರನ್ನೂ ವಿಚಾರಿಸಿದರು. ಅದಕ್ಕೆ ತಿಮ್ಮ ಸಂನ್ಯಾಸಿ "ಹೌದಮ್ಮ, ಹೌದು. ಈ ಭಾವಚಿತ್ರದಂತೆಯೇ ವಿರೂಪಾಕ್ಷನೆಂಬ ಇನ್ನೊಬ್ಬ ಕ್ಷತ್ರಿಯ ಪ್ರವರನಿದ್ದಾನೆ. ನೀನು ಅವನನ್ನೇ ವರಿಸುವುದಾದರೆ ನಿನ್ನ ತಂದೆ ಮುಂತಾದವರು ಒಪ್ಪುವರು. ಈ ವಿರೂಪಾಕ್ಷನು ಬೇಗದಲ್ಲಿಯೇ ಇಲ್ಲಿಗೆ ಬರುತ್ತಾನಂತೆ. ನಾನೂ ಜ್ಞಾನದೃಷ್ಟಿಯಿಂದ ನೋಡಿದೆನು. ನಿನ್ನ ಪತಿ ಕೃಷ್ಣದೇವನಲ್ಲ. ಈ ವಿರೂಪಾಕ್ಷನೇ. ಹೌದು ಹೌದು!" ಎಂದರು. ಪಾಪ! ರುಚೀದೇವಿಯ ಮನೋಭಾವವು ಹೇಗಾಗಿರ ಬಹುದು ?

ಅತ್ತ ಅಜ್ಞಾತಾದೇವಿ ತನ್ನ ಆರಾಧ್ಯ ವಸ್ತುಗಳಿರುವ ಕೋಣೆಗೆ ಹೋಗಿ ಸ್ವಲ್ಪ ಹೊತ್ತು ಧ್ಯಾನ್ಯದಲ್ಲಿ ತಲ್ಲೀನಳಾಗಿದ್ದು ಮನಸ್ಸನ್ನು ಹಗುರ ಮಾಡಿಕೊಂಡ ಮೇಲೆ, ವೀರರುದ್ರ ಗಜಪತಿಯ ಬಳಿಗೆ ಹೋಗಿ, ಆ ಭಾವಚಿತ್ರವನ್ನು ಕುರಿತು ಹೇಳುತ್ತ, ತಿಮ್ಮ ಸಂನ್ಯಾಸಿ ಯಿಂದ ಬಹಿರಂಗಿಸಲ್ಪಟ್ಟ ರಹಸ್ಯವನ್ನೂ ತಿಳಿಯ ಪಡಿಸಿದಳು. ಆಗ ವೀರರುದ್ರನು ದೊಡ್ಡ ಚಿಂತೆಯಲ್ಲಿ ಮುಳುಗಲಿಕ್ಕಿರಲು, ಅಜ್ಞಾತಾ ದೇವಿ ತಕ್ಕಂತೆ ಸಮಾಧಾನ ಪಡಿಸಿ ಅವನನ್ನು ಎತ್ತಿ ಹಿಡಿದಳು. ಯೋಚಿಸಿದ ಮೇಲೆ ವೀರರುದ್ರನು ತಿಳಿಮನಸ್ಕನಾದನು.

ಅಜ್ಞಾತಾದೇವಿ ಮುಂದಿನ ವಿಧಾನವನ್ನು ಕುರಿತು ಯೋಚಿ ಸುತ್ತ, ಆ ದಿನವನ್ನು ಕಳೆದಳು. ಮರುದಿನ ಅಜ್ಞಾತ ಬಂಧುಗಳು ಯಾರೋ ಇಬ್ಬರು ಸಂನ್ಯಾಸಿಗಳನ್ನು ಕಣ್ಣಿಗೆ ಬಟ್ಟೆ ಕಟ್ಟಿ, ಕೈಗಳನ್ನು ಹಿಂಗಟ್ಟಿ, ಅವಳ ಇದಿರಿಗೆ ತಂದು ನಿಲ್ಲಿಸಿ "ಇವರಿಬ್ಬರೂ ಹೊಸಬರು. ಗೂಢಚಾರರೆಂಬ ಸಂದೇಹದಿಂದ ಹಿಡಿದು ತಂದಿದ್ದೇವೆ" ಎಂದರು.

ಅಜ್ಞಾತೆ ಆ ಸಂನ್ಯಾಸಿಗಳನ್ನು ದಿಟ್ಟಿಸಿ ನೋಡಿ ಬಂಧುವಿನ ಕಿವಿಯಲ್ಲಿ "ಬಂಧು, ಇವರಿಬ್ಬರನ್ನೂ ಬೇರೆ ಬೇರೆ ಕೋಣೆಗಳಲ್ಲಿ, ಕಟ್ಟುಗಳನ್ನು ಬಿಚ್ಚಿ, ಭದ್ರಪಡಿಸು. ಎಲ್ಲಾ ಅನುಕೂಲಗಳೂ ಜರುಗಲಿ. ಪರಾರಿಯಾದಾರು. ಎಚ್ಚರ!" ಎಂದಳು. ಒಡನೆಯೇ ಅವಳ ಆಜ್ಞೆ ನೆರವೇರಿಬಿಟ್ಟಿತು.

೧೫

ಆ ಸಂನ್ಯಾಸಿಗಳಲ್ಲಿ ಒಬ್ಬನು ರಾಮಯಾಮಾತ್ಯ. ಅಂದು ಸಂಜೆ ದಂತೆ ಅವನು ಬಾಲರಾಣಿಯನ್ನು ಅಪಹರಿಸಿಕೊಂಡು, ನಿರ್ವಿಘ್ನ ವಾಗಿ ರಾಯಚೂರನ್ನು ಸೇರಿದನು. ಅವನು ತುಂಗಭದ್ರೆಯನ್ನು ದಾಟುವಷ್ಟರೊಳಗೆ, ಅವರು ಕಟ್ಟಿ ಕೆಡವಲ್ಪಟ್ಟಿದ್ದ ಬಾಲರಾಣಿಯ ಕುದುರೆ ಅವರ ಬೆನ್ನು ಹಿಡಿದಿತ್ತು. ತನ್ನ ಆಪತ್ಕಾಲದಲ್ಲಿ ತನ್ನನ್ನು ಬಿಡದೆ ಓಡಿಬಂದ ಆ ತನ್ನ ಕುದುರೆಯನ್ನು ನೋಡಿ, ಬಾಲರಾಣಿಯ ಹೃದಯವು ಪ್ರೀತಿಯಿಂದ ತುಂಬಿಬಂದಿತು. ಯುಕ್ತ ವಚನದಿಂದ ಅವಳು ಆ ಕುದುರೆಯ ಕೋಪವನ್ನು ಶಾಂತಪಡಿಸಿದಳು. ರಾಮಯಾ ಮಾತ್ಯನು ಅದನ್ನು ಕರೆದುಕೊಂಡೇ ರಾಯಚೂರನ್ನು ಮುಟ್ಟಿದ್ದನು.

ಆಗ ಇಸ್ಮಾಯಿಲ ಅದಿಲ್‌ಷಹನ ಮಗ ಮಾಲೂಖಾನನು ರಾಯಚೂರು ದುರ್ಗಾಧಿಪತಿಯಾಗಿ ಬಂದಿದ್ದನು. ಅಪಹೃತ ಕನ್ಯೆಯನ್ನು ಅವನ ವಶದ ದುರ್ಗಮಂದಿರದೊಳಗೆ ಭದ್ರಪಡಿಸಿದ ಮೇಲೆ ರಾಮಯಾಮಾತ್ಯನು ಮಾಲೂಖಾನನನ್ನು ಕುರಿತು-"ಖಾನ್ ಸಾಹೇಬ್, ಚಿಕ್ಕಹುಡುಗಿ. ಆದರೂ ಬಲು ಜಾಣೆ. ನನ್ನಿದಿರೇ, ನನ್ನೊಂದಿಗೇ ತಾನು ಮುಕ್ತಾಕುಮಾರಿಯಲ್ಲವೆಂದು ಸಾಧಿಸುತ್ತಾಳೆ. ಕೆಲವು ದಿನಗಳಲ್ಲಿ ಎಲ್ಲವೂ ಸರಿಹೋದೀತು. ನಿಧಾನವಾಗಿ ಅವಳ ಮನಸ್ಸನ್ನು ಸರಿಗೊಳಿಸಿರಿ. ಒಲಿಸಿರಿ. ನಾನು ಬೇಗದಲ್ಲಿಯೇ ಇವಳ

ತಂದೆಯನ್ನು ಒಪ್ಪಿಸಿಬಿಡುತ್ತೇನೆ” ಎಂದು ಉಪಾಯವಾಗಿ ಹೇಳಿದನು.

ಈ ಮೊದಲು ರಾಮಯಾಮಾತ್ಯನು ತೋಪಲ್‌ಖಾನನೊಡನೆ ಮಾತಾಡಿದಂತೆ, ತೋಪಲ್‌ಖಾನನು ಆದಿಲ್‌ಷಹನೊಡನೆ ಮಾತಾಡಿ, ಗಜಪತಿಗಳ ಸಹಾಯಾರ್ಥವಾಗಿ ರಾಮಯಾಮಾತ್ಯನೊಂದಿಗೆ ಐವತ್ತು ಸಾವಿರ ಅಶ್ವಿಕ ದಳವನ್ನು ಕಳುಹಿಸಿಕೊಡುವ ಸಿದ್ಧತೆಯನ್ನು ಮಾಡಿಟ್ಟಿದ್ದನು. ಮುಂದೆಯಾದರೂ ಗಜಪತಿಗಳಿಗೆ ಕಷ್ಟವು ಬಂದಾಗ ಅಶ್ವಪತಿಗಳು ಸಹಾಯ ಮಾಡಬೇಕೆಂದೂ, ಅಶ್ವಪತಿಗಳಿಗೆ ಆಪತ್ಕಾಲದಲ್ಲಿ ಗಜಪತಿಗಳು ಸಹಾಯ ಮಾಡಬೇಕೆಂದೂ ರಾಮಯಾಮಾತ್ಯನು ಒಂದು ಕರಾರನ್ನು ಸಿದ್ಧಪಡಿಸಿ ವಿಜಾಪುರಕ್ಕೆ ಕಳುಹಿಸಿದನು. ಅದಕ್ಕೆ ಅದಿಲ್‌ಷಹನು ಒಪ್ಪುವ ಭರವಸೆಯೂ ಇತ್ತು.

ಇಷ್ಟೆಲ್ಲ ಮಾಡಿಕೊಂಡು ಅವನು ಕಟಕನಗರಿಗೆ ಹೊರಡಬೇಕೆನ್ನುವಷ್ಟರಲ್ಲಿ, ಅಲ್ಲಿಂದ ಪ್ರತಾಪರುದ್ರನು ಕಳುಹಿಸಿದ ಇಬ್ಬರು ದೂತರು ಬಂದು ಕೃಷ್ಣದೇವರಾಯನು ಯುದ್ಧವನ್ನು ನಿಲ್ಲಿಸಿ ವಿಜಯನಗರಕ್ಕೆ ಹಿಂದಿರುಗಿದುದನ್ನೂ, ರುಚೀದೇವಿ ಅಪಹೃತಳಾದುದನ್ನೂ, ಅದೇ ಸಮಯಕ್ಕೆ ಸಂನ್ಯಾಸೀ ಶಿಷ್ಯರೂ, ಮಾದರಸ ಮಾರಪ್ಪಂದಿರೂ ಮಾಯವಾದುದನ್ನೂ ವಿವರವಾಗಿ ಶ್ರುತಪಡಿಸಿ ಅವನನ್ನು ಚಕಿತಗೊಳಿಸಿದರು. ಆ ದೂತರು ಅಲ್ಲಿಗೆ ಬರುವಾಗ ದಾರಿಯಲ್ಲಿ ಅವರಿಗೆ ಭೇಟಿಯಾದ ಗೂಢಚಾರರು, ರುಚೀದೇವಿಯನ್ನು ಮಾದರಸನೇ ಮೊದಲಾದವರು ದಕ್ಷಿಣದ ಕಡೆಗೆ ಸಾಗಿಸಿಕೊಂಡು ಹೋದಂತೆ ತೋರಿತೆಂದೂ ಹೇಳಿದ್ದರಂತೆ. ಇದರಿಂದ ರುಚೀಹರಣದ ಗಂಧವು ರಾಮಯಾಮಾತ್ಯನಿಗೆ ಹತ್ತಿದಂತಾಯಿತು. ಅಜ್ಞಾತಾದೇವಿಯ ನಿವಾಸದ ಕಡೆಗೇ ರುಚೀದೇವಿ ಒಯ್ಯಲ್ಪಟ್ಟಿರುವಳೆಂದು ಅವನು ಊಹಿಸಿಕೊಂಡನು. ಈಗ ಹೇಗೂ ಯುದ್ಧದ ಗಡಿಬಿಡಿ ನಿಂತು ಹೋಗಿದೆಯಲ್ಲವೆ? ಈಗ ರುಚೀದೇವಿಯ ಶೋಧವೇ ಪ್ರಾಮುಖ್ಯವಾಗಿದೆ. ಅಜ್ಞಾತಾದೇವಿ ಹತ್ಯಾರೋಪಿಣಿಯಾಗಿ ವಿಜಯನಗರದ ಬಂದೀಖಾನೆಯಲ್ಲಿ ಕೊಳೆಯುತ್ತಿರುವುದರಿಂದ, ರುಚೀದೇವಿಯನ್ನು ಉದ್ಧರಿಸಿಕೊಂಡು ಬರಲು ಸುಲಭವಾದೀತು ಎಂದು ಯೋಚಿಸಿ ರಾಮಯಾ

ಮಾತ್ಯನು, ತಾನು ರುಚೀದೇವಿಯನ್ನು ಶೋಧನಮಾಡಿಕೊಂಡೇ ಕಟಕ ಪುರಿಗೆ ಬರುವೆನೆಂದು ಆ ದೂತರನ್ನು ಹಿಂದಿರುಗಿಸಿ, ಸಹಾಯಕ ಸೇನೆಯನ್ನು ರಾಯಚೂರಲ್ಲಿಯೇ ಬಿಟ್ಟು, ರಂಗನನ್ನು ತನ್ನೊಂದಿಗೆ ಕರೆದುಕೊಂಡು ಸೊಂಡೂರಿನ ಶೈಲಭವನದ ಕಡೆಗೆ ಹೊರಟನು.

ತಪ್ಪಲಹಳ್ಳಿಯ ಬದಿಯಲ್ಲಿ ಬೆಟ್ಟಗಳ ನಡುವೆ ಎಲ್ಲಿಯೋ ಒಂದು ರಹಸ್ಯಸ್ಥಾನವಿರುವುದೆಂದು ಆ ಗುಪ್ತಾಚಾರ ರಂಗನು ಕಂಡು ಹಿಡಿದಿದ್ದನು. ಅವರಿಬ್ಬರೂ ಸಂನ್ಯಾಸಿಗಳ ಹಾಗೆ ವೇಷಹಾಕಿಕೊಂಡು ಬಗಲಲ್ಲಿ ಜೋಳಿಗೆಯನ್ನು ತೂಗಿಸಿಕೊಂಡು, ದಂಡ ಕಮಂಡಲುಧಾರಿ ಗಳಾಗಿ, ಸೊಂಡೂರು ಬೆಟ್ಟಗಳ ನಡುವೆ ದಾರಿ ತಪ್ಪಿದವರ ಹಾಗೆ ತಿರುಗಾಡುತ್ತಿದ್ದರು. ಯಾರಾದರೂ ಕೇಳಿದರೆ "ನಾವು ರಾಮನ ಮಲೆಗೆ ಹೋಗುವವರು. ದಾರಿಯಾವುದು ?" ಎಂದು ತಿರುಗಿ ಕೇಳು ವರು. ಎರಡು ದಿನ ಒಂದೂ ತಿಳಿಯದೆ ಹಾಗೆಯೇ ಸುತ್ತಾಡಿ, ಕಡೆಗೆ ನಾರೀತೊರೆಯ ದಾರಿಯನ್ನು ಹಿಡಿದು, ದೊಡ್ಡ ದೊಡ್ಡ 'ಗಂಡೀ' ಬಾಗಿಲುಗಳನ್ನು ದಾಟಿ, ಅದ್ಭುತವಾದ 'ನೃಸಿಂಹ ಗುಂಡಿ'ಯ ಬಳಿ ಯಲ್ಲಿರುವ ಕಾಳೀಗುಡಿಯನ್ನು ಹೊಕ್ಕು ದೇವಿಯ ಮೂರ್ತಿಗೆ ವಂದಿ ಸಿದರು. ಅಲ್ಲಿದ್ದ ಅಜ್ಞಾತ ಬಂಧುಗಳು "ಹೊಸಬರಾರು ಬಂದರೂ ನಮ್ಮ ಮಹಾರಾಣಿಯ ದರ್ಶನ ಪಡೆಯಲೇಬೇಕು" ಎಂದು ಬಲಾತ್ಕರಿಸಿ ಅವರ ಕಣ್ಣು ಕಟ್ಟಿ, ಕೈಕಟ್ಟಿ ಶೈಲಭವನದೊಳಗೆ ಕರೆದು ಕೊಂಡು ಹೋಗಿ, ಕಡೆಗೆ ಅಜ್ಞಾತಾದೇವಿಯ ಆಣತಿಯಂತೆ ಬೇರೆ ಬೇರೆ ಕೋಣೆಗಳಲ್ಲಿ ನಿರ್ಬಂಧಿಸಿಟ್ಟರು.

ಆ ಕೋಣೆಯಲ್ಲಿ ಆಹಾರ ಪದಾರ್ಥಗಳೇ ಮೊದಲಾದ ಎಲ್ಲಾ ಸೌಕರ್ಯಗಳೂ ಇದ್ದುವು. ರಾತ್ರಿಗೆ ದೀಪವೂ ಹಚ್ಚಿಡಲ್ಪಟ್ಟಿತು. ಸೇವಕ ಬಂಧುಗಳೊಡನೆ ಏನು ಕೇಳಿದರೂ 'ನಮಗೊಂದೂ ಗೊತ್ತಿಲ್ಲ' ಎಂದಷ್ಟೇ ಹೇಳುತ್ತಿದ್ದರು.

ಮರುದಿನ ಬೆಳಗಾದಮೇಲೆ ಒಮ್ಮಿಂದೊಮ್ಮೆ ತನ್ನೆದಿರು ಬಂದು ನಿಂತ ವಿರಕ್ತವೇಷದ ಅಜ್ಞಾತಾದೇವಿಯನ್ನು ಕಂಡು, ರಾಮಯಾ ಮಾತ್ಯನ ಆಶ್ಚರ್ಯವು ಬಾಯಿಯಿಂದ ಹೊರಸೂಸಿತು. "ಓ! ರಾಣೀ

ಅಜ್ಞಾತಾ! ನೀನು ಇಲ್ಲಿಯೇ ಇರುವಿಯೇನು?" ಎಂದನು.

"ಅಲ್ಲದೆ ಎಲ್ಲಿರುವನೆಂದುಕೊಂಡಿರಿ?" ಎನ್ನುತ್ತಾ ಅಜ್ಞಾತಾ ದೇವಿ ಅವನಿದಿರು ಒಂದು ಶಿಲಾಸನದ ಮೇಲೆ ಕುಳಿತಳು.

"ನೀನು ವಿಜಯನಗರದಲ್ಲಿ ಸಿಕ್ಕಿಬಿದ್ದಿರುವೆಯೆಂದು ಕೇಳಿದ್ದೆನು."

"ಓಹೋ! ಅಂತೆಯೇ ನಾನಿಲ್ಲದಿರುವಾಗ ಉಪಾಯದಿಂದ ನನ್ನ ರಹಸ್ಯವನ್ನು ಶೋಧಿಸಿ, ರುಚೀಕುಮಾರಿಯನ್ನು ಕಂಡುಹಿಡಿದು ಬಿಡಬಹುದೆಂದು ಭಾವಿಸಿದಿರಲ್ಲವೆ? ಆಹಾ! ಬಲು ರಹಸ್ಯವಾಗಿರುವ ನನ್ನ ಈ ಗುಪ್ತಸ್ಥಾನವನ್ನು ನೀವು ಇಷ್ಟು ಸುಲಭವಾಗಿ ಕಂಡು ಹಿಡಿದುದನ್ನು ನೋಡಿ ಬಹಳ ಆಶ್ಚರ್ಯ ಪಡುತ್ತೇನೆ."

"ಇದೆಲ್ಲಾ ಈ ರಾಮಯಾಮಾತ್ಯನಿಗೆ ರಹಸ್ಯವಾದ ಗುಪ್ತ ಸ್ಥಾನವೆ? ಮೊತ್ತಮೊದಲು ಯಾವಾಗ ನಾನು ನಿನ್ನನ್ನು ನೋಡಿ ದೆನೋ ಆಗಿನಿಂದಲೇ ನಿನ್ನ ಬೆನ್ನ ಬಿಡದ ಭೂತವಾಗಿದ್ದೇನೆ."

"ಆ ಮಹಾಭೂತವೀಗ ನನ್ನ ಬಂದಿಯಾಗಿ ಹೋಯಿತು."

ರಾಮಯಾಮಾತ್ಯನು ಲಜ್ಜಿತನಾಗಿ "ನನ್ನನ್ನು ಬಂದೀಮಾಡಿ ನಿನಗೇನು ಪ್ರಯೋಜನವೋ?"

"ರುಚೀದೇವಿಯ ಹಿತಚಿಂತಕರನ್ನೆಲ್ಲಾ ಒಂದುಗೂಡಿಸುವುದೇ ನನ್ನ ಪ್ರಯೋಜನ!"

"ನಾನು ಸಂದೇಹಿಸಿದಂತೆ ರುಚೀದೇವಿ ಇಲ್ಲಿಯೇ ಇರುವ ಳೆಂದಾಯಿತು!"

"ನಿಜ. ನಿಮಗೂ ಪ್ರತಾಪರುದ್ರ ಗಜಪತಿಗೂ ಹೇಳಿಕಳಿಸ ಬೇಕೆಂದಿದ್ದೆ. ನೀವೊಬ್ಬರೀಗ ಕರೆಸದೆಯೇ ಬಂದಿರಿ. ಬಹಳ ಲೇಸು. ಅಮಾತ್ಯರ, ಗಜಪತಿಗಳಿಗೆ ನಾನು ಸಹಾಯಮಾಡುವೆನೆಂದು ಹಿಂದೆ ನಿಮ್ಮೊಡನೆ ಹೇಳಿದ್ದು ನೆನಪಿದೆಯೆ?"

"ಇಲ್ಲದೇನು? ಆದರೆ ಈಗ ನೀನು ಮಾಡಿದ್ದು?"

"ನಿಮಗೆ ಸಹಾಯ! ಪ್ರಾಮುಖ್ಯವಾದ ಸಹಾಯ!"

"ನಮ್ಮ ಕುಮಾರಿಯನ್ನು ಅಪಹರಿಸಿದ್ದು ಸಹಾಯವೆ?"

"ಹೌದು. ಕೃಷ್ಣದೇವನು ನನ್ನ ವೈರಿ ಎಂದು ನಾನು ಸಾರಿ

ಹೇಳಿದ್ದೇನೆ. ಅಂತೆಯೇ ಮೊದಲು ರುಚೀಕುಮಾರಿಯನ್ನು ಸುರಕ್ಷಿತವಾದ ಸ್ಥಾನಕ್ಕೆ ಕರೆಸಿಕೊಂಡೆ."

"ಓಹೊ! ಇದೊಳ್ಳೇ ಕುತ್ತಿಗೆ ಕೊಯ್ಯ ಸಹಾಯ. ಇದನ್ನು ಮೊದಲೇ ನಮಗೇಕೆ ತಿಳಿಸಲಿಲ್ಲ?"

"ಮೊದಲೇ ತಿಳಿಸಿದ್ದರೆ ನೀವೆಲ್ಲಿ ನನ್ನ ಮಾತನ್ನು ನಂಬುತ್ತಿದ್ದಿರಿ?"

"ಈಗ ಮಾತ್ರ ನಿನ್ನನ್ನು ನಂಬುವ ಹಾಗೆ ಏನಾಯಿತೊ?"

"ಮುಖ್ಯವಾದವರು ನಂಬಿಯಾಯಿತು?"

"ಅಂದರೆ?"

"ನಾನು ಅಂದು ಪಾತಪಲ್ಲಿಯಿಂದ ನಿಮ್ಮನ್ನು ಅಗಲುವಾಗ, ವೀರರುದ್ರ ಗಜಪತಿಯವರನ್ನು ಶೋಧಿಸಿಕೊಂಡು, ಇನ್ನು ಅವರೊಂದಿಗೇ ನನ್ನ ದರ್ಶನವಾದೀತೆಂದು ನಿಮಗೆ ಹೇಳಿದ್ದೆ. ನೆನಪಿದೆಯೆ?"

"ಎಲ್ಲಿದ್ದಾರೆ?"

"ಇಲ್ಲಿಯೇ. ಈಗ ಅವರೊಂದಿಗೇ ದರ್ಶನವೀಯುತ್ತಿದ್ದೆ. ಒಮ್ಮೆಲೆ ನೀವು ಬೆಚ್ಚಿಬಿದ್ದೀರೆಂತಲೇ ಈಗ ಒಬ್ಬಳೇ ಬಂದೆ."

"ಹಾ! ಇಲ್ಲಿಯೇ ಇದ್ದಾರೆಯೊ?" ರಾಮಯ್ಯನು ಹಾರಿಬಿದ್ದನು.

ಅಜ್ಞಾತೆ ಮುಗುಳ್ನಗುತ್ತ "ಹೌದು ಸ್ವಾಮಿ. ಈ ಜೋರನಾಯಕಿ ಸುಳ್ಳು ಹೇಳುವವಳೆಂದು ನೀವು ತಿಳಿದಿದ್ದೀರಿ! ಅದೀಗಲೇ ಸುಳ್ಳಾಗುವುದು ನೋಡಿ."

"ಆಶ್ಚರ್ಯ! ಅವರು ರಾಣಿಯನ್ನೂ ಕುಮಾರಿಯನ್ನೂ ಶತ್ರುವಿನ ಕೈಗೆ ಸಿಕ್ಕಿಸಿ ಹೇಗೆ ತಪ್ಪಿಸಿಕೊಂಡರು?"

"ಕಾರ್ಯ ಕುಶಲರ ಲಕ್ಷಣವೇ ಹಾಗೆ! ಹೆಂಡತಿ ಮಕ್ಕಳ ಮೋಹದಿಂದ ಮಂದ ಮಾಡುತ್ತಿದ್ದರೆ ಅವರೇ ಸಿಕ್ಕಿಬಿದ್ದು ಸರ್ವನಾಶವಾಗುತ್ತಿತ್ತು. ಶತೃಗಳು ರಾಣಿಯನ್ನೂ ಕುಮಾರಿಯನ್ನೂ ತಿನ್ನುವುದಿಲ್ಲವಷ್ಟೆ? ಮನೆಯಲ್ಲಿರುವಂತೆಯೇ ಸೆರೆಮನೆಯಲ್ಲಿದ್ದಾರೆ ಅಷ್ಟೆ."

"ಓಹೊ!"

"ಇನ್ನೊಂದು ವಿಶೇಷವನ್ನೂ ಹೇಳಿ ನಿಮ್ಮನ್ನು ಸಂತೋಷಪಡಿಸುವೆನು. ಈಗ ಇಲ್ಲಿ ರುಚೀಕುಮಾರಿಗೆ ವಿವಾಹವೂ ನಿಶ್ಚಯವಾಗಿದೆ!"

"ಏನು! ವಿವಾಹ! ಯಾರು ವರ?" ಪುನಃ ರಾಮಯ್ಯನು ಅಚ್ಚರಿಬಿದ್ದನು.

"ವರ! ಸ್ವಯಂವರ. ಇಲ್ಲಿಯೇ ಜರುಗುತ್ತದೆ. ಅದಕ್ಕೇ ನಿಮಗೆಲ್ಲಾ ಹೇಳಿಕಳುಹಿಸಬೇಕೆಂದಿದ್ದೆವು. ಇನ್ನು ಪ್ರತಾಪರುದ್ರರು ಬಂದರೆ ತೀರಿಹೋಯಿತು."

"ಎಲ!"

"ರುಚೀಕುಮಾರಿಯೇ ಸ್ವಯಂ ನೋಡಿ ಆರಿಸಿಕೊಂಡ ವರ. ಚಂದ್ರವಂಶದ ಕ್ಷತ್ರಿಯೋತ್ತಮ. ಶ್ರೀ ವಿರೂಪಾಕ್ಷ ಮಹಾರಾಜನೆಂದು ಅವನ ಸಣ್ಣ ಹೆಸರು. ಈಗ ಅವನು ರಾಮೇಶ್ವರದತ್ತ ಯಾತ್ರೆ ಹೋಗಿರುತ್ತಾನೆ. ಯಾತ್ರೆಯೆಂಬುದು ನೆಪ ಮಾತ್ರ. ಅವನು ವಿಜಯನಗರಕ್ಕೆ ಕಟುಶತ್ರುವಾದುದರಿಂದ, ಅದಕ್ಕಾಗಿ ದೊಡ್ಡ ಸೇನೆಯನ್ನು ಮಗುಚಿಸಿಕೊಂಡು ಬೇಗನೇ ಇಲ್ಲಿಗೆ ಬರುತ್ತಾನೆ. ಅದುವರೆಗೂ ಅವನ ವಿಚಾರವನ್ನು ಬಹಿರಂಗಪಡಿಸಕೂಡದೆಂದು ನಮ್ಮಿಂದ ವಚನ ಪಡೆದಿದ್ದಾನೆ. ಅವನು ಬರುತ್ತಲೇ ಮೊದಲು ವಿವಾಹ; ಆ ನಂತರ ದಂಡಯಾತ್ರೆ."

"ಅಷ್ಟರವರೆಗೂ ನಡೆದಿರುವುದೆ?"

"ಹೌದು."

"ಒಂದುವೇಳೆ ಪ್ರತಾಪರುದ್ರರು ಒಪ್ಪದಿದ್ದರೊ?"

"ವಧೂವರರು ಪರಸ್ಪರ ಒಪ್ಪಿರುವಾಗ, ಅದರ ಮೇಲೆ ವೀರರುದ್ರರೂ ನಾವೂ ನೀವೂ ಒಪ್ಪಿರುವಾಗ, ಅವರೊಬ್ಬರು ಒಪ್ಪದೆ ಹೋದರೂ ವಿವಾಹವು ನಿಲ್ಲದು. ನಡೆಯಿರಿ; ರುಚೀಕುಮಾರಿಯನ್ನೂ, ವೀರರುದ್ರರನ್ನೂ ದರ್ಶನಮಾಡಿ ನೀವೇ ಮಾತಾಡಿಕೊಳ್ಳಿರಿ."

* * *

ರಾಮಯ್ಯಾಮಾತ್ಯನನ್ನು ಕರೆದೊಯ್ದು ವೀರರುದ್ರಗಜಪತಿಯ ಬಳಿಯಲ್ಲಿ ಬಿಟ್ಟು, ರುಚೀದೇವಿಯನ್ನು ಕರೆದುಕೊಂಡು ಬರುವೆನೆಂದು ಹೇಳಿ ಅಜ್ಞಾತಾದೇವಿ ಹೊರಟು ಹೋದಳು. ರಾಮಯ್ಯಾಮಾತ್ಯನೊಡನೆ ವೀರರುದ್ರನು ಯಾವ ರೀತಿಯಾಗಿ ಮಾತಾಡಬೇಕೆಂದು, ಅಜ್ಞಾತಾದೇವಿಯೂ ಅವನೂ ಸೇರಿ ಈ ಮೊದಲೇ ನಿಶ್ಚಯಿಸಿಕೊಳ್ಳಲ್ಪಟ್ಟಿತ್ತು. ಉದಯಗಿರಿ ವಿಜಯನಗರದ ವಶವಾದಂದಿನಿಂದ ಇಂದಿನ ತನಕ, ಅಂದರೆ ಸುಮಾರು ಒಂದು ವರ್ಷದ ತನಕ, ಆ ರಾಜಮಂತ್ರಿಗಳು ಒಬ್ಬರನೊಬ್ಬರು ಅಗಲಿದ್ದರು. ಇಂದು ಅಕಸ್ಮಾತ್ತಾಗಿ ಸಂಧಿಸಿದ್ದಾರೆ. ಇದು ರಾಮಯ್ಯನಿಗೆ ಆಶ್ಚರ್ಯವಾಗಿದ್ದರೂ ವೀರರುದ್ರನಿಗೇನೂ ಆಶ್ಚರ್ಯವಿಲ್ಲ. ಪರಸ್ಪರ ಕುಶಲ ವಚನಗಳಾದ ಮೇಲೆ ಅಜ್ಞಾತಾದೇವಿಯೊಂದಿಗೆ ತಾನೂ ಸೇರಿದ ವಿಧಾನವು ಹೇಗೆಂದು ವೀರರುದ್ರನು ಸಂಕ್ಷೇಪವಾಗಿ ರಾಮಯ್ಯಾಮಾತ್ಯನಿಗೆ ತಿಳಿಸಿದನು. ಅಂದು ಉದಯಗಿರಿದುರ್ಗವು ರಾಯನ ವಶವಾಗುವ ಲಕ್ಷಣವು ಕಾಣುತ್ತಲೇ, ಅವನು ರಾಣೀ ಕುಮಾರಿಯರಿಗೆ ಧೈರ್ಯವನ್ನು ಹೇಳಿ ಮಾರು ವೇಷದಿಂದ ತಪ್ಪಿಸಿಕೊಂಡು ಹೋದನಂತೆ. ಹಾಗೆ ಓಡಿ ಹೋದವನು ದಕ್ಷಿಣಕ್ಕೆ ಹೋಗಿ, ಅಲ್ಲಿ ಕೃಷ್ಣದೇವರಾಯನ ಶತ್ರುಗಳನ್ನು ಕಲೆಹಾಕುವ ಪ್ರಯತ್ನದಲ್ಲಿದ್ದಾಗ, ಅಜ್ಞಾತಾದೇವಿಯ ಪರಿಚಯವಾಯಿತಂತೆ. ಇವಳ ಮೂಲಕವಾಗಿ ವಿರೂಪಾಕ್ಷನೆಂಬೊಬ್ಬ ಕ್ಷತ್ರಿಯೋತ್ತಮನ ಯೋಗ ಉಂಟಾಯಿತಂತೆ. ರುಚೀಕುಮಾರಿಗೆ ಅವನೇ ತಕ್ಕ ವರನೆಂದೂ, ಅದಕ್ಕಾಗಿಯೇ ರುಚೀದೇವಿಯನ್ನು ಅಲ್ಲಿಗೆ ಕರೆಸಿದ್ದೆಂದೂ, ವಧೂವರರ ಪರಸ್ಪರ ಸಂದರ್ಶನ–ಒಪ್ಪಿಗೆಗಳು ಕೂಡಾ ಆಗಿಹೋಯಿತೆಂದೂ, ಈಗ ಆ ವಿರೂಪಾಕ್ಷನು ಮಹತ್ತಾದ ಸೇನಾಬಲವನ್ನು ಕೂಡಿಸಿಕೊಂಡು ಬೇಗದಲ್ಲೇ ಆ ಶೈಲಭವನಕ್ಕೆ ಬರುವನೆಂದೂ, ಅಷ್ಟರೊಳಗೆ ಪ್ರತಾಪರುದ್ರ ಗಜಪತಿಯನ್ನು ಕರೆಸಿಕೊಂಡು ವಿವಾಹದ ಸಿದ್ಧತೆ ನಡೆಯಿಸಬೇಕೆಂದೂ ಸುಳ್ಳುಸುಳ್ಳೇ ವೀರರುದ್ರನು ಕೊಚ್ಚಿದನು. ದಕ್ಷಿಣದ ಕಡೆಯ ಚೇರ ಚೋಳ–ಪಾಂಡ್ಯ ಮೊದಲಾದ ಕಡೆಗಳಲ್ಲಿ ಕೃಷ್ಣದೇವನಿಗೆ ಅಡಗಿದ ವೈರಿಗಳಿರುವರೆಂಬುದು

ನಿಜವೇ ಆದುದರಿಂದ, ವೀರರುದ್ರದು ಹೇಳುವುದೆಲ್ಲಾ ರಾಮಯಾ ಮಾತ್ಯನು ನಂಬುವ ಚೆಂದದಿಂದಲೇ ಒಪ್ಪಿತು. ಇದರಮೇಲೆ ವೀರ ರುದ್ರ ಗಜಪತಿಯೆಂದರೆ ಸಾಕ್ಷಾತ್ ರಾಯನ ಶತ್ರು!

ಬಳಿಕ ರಾಮರಾಯಾಮಾತ್ಯನು ಕಟಕಪುರಿಯ ಸಂಗತಿಗಳನ್ನೂ ಹೇಳಲಾರಂಭಿಸಿದನು. ಕೆಲವು ಶರತಗಳಮೇಲೆ ವಿಜಾಪುರದ ಅಶ್ವಪತಿ ಗಳು ಗಜಪತಿಗಳಿಗೆ ಸಹಾಯಕರಾದ ವಿವರಗಳನ್ನು ಹೇಳುವಾಗ, ಅಜ್ಞಾತಾದೇವಿಯೂ ವೀರರುದ್ರನೂ ಒಂದಾಗಿರುವುದನ್ನು ನೆನೆದು ಕೊಂಡು, ಆ ಕನ್ಯಾಪಹಾರದ ಸಂಗತಿಯನ್ನು ಮಾತ್ರ ಬಚ್ಚಿಟ್ಟು ಕೊಂಡನು. 'ಕಳ್ಳನ ಜೀವ ಹುಳ್ಳಹುಳ್ಳಗೆ' ಎಂಬಂತೆ ಅವನು ಅಜ್ಞಾತಾದೇವಿಯ ಮುಖವನ್ನು ಎಷ್ಟು ಪರೀಕ್ಷೆ ಮಾಡಿದರೂ, ಪುತ್ರೀ ವಿಯೋಗ ದುಃಖದ ಲಕ್ಷಣವು ಆ ಮುಖದಲ್ಲಿ ಕಾಣದಿರುವುದನ್ನು ನೋಡಿ ಅವನು ಒಳಗೊಳಗೇ ಆಶ್ಚರ್ಯ ಪಡುತ್ತಿದ್ದನು. 'ಒಂದು ವೇಳೆ ಆ ಹುಡುಗಿ ಇವಳ ಹೊಟ್ಟೆಯ ಮಗಳಲ್ಲವೇನೊ' ಎಂಬ ಸಂಶಯ ಕೂಡ ಬಂತು.

ಹೀಗೆ ಆ ರಾಜಮಂತ್ರಿಗಳು ಒಳಗೊಂದು ಬಗೆಯನ್ನಿಟ್ಟು ಕೊಂಡು, ಹೊರಗೊಂದು ಬಗೆಯಾಗಿ ಮಾತಾಡುತ್ತಿದ್ದಾಗ, ಅಜ್ಞಾತಾ ದೇವಿ ರುಚೀದೇವಿಯೊಂದಿಗೆ ಅಲ್ಲಿಗೆ ಬಂದಳು.

ರುಚೀದೇವಿಯ ಹೃದಯದಲ್ಲಿ, ಆ ಭಾವಚಿತ್ರಗತ ವ್ಯಕ್ತಿಯ ಮೇಲೆ ಹರಿಯುತ್ತಿದ್ದ ತಿಳಿಯಾದ ಪ್ರೇಮವನ್ನು, ಅಜ್ಞಾತಾದೇವಿ ವಿನೋದಕ್ಕಾಗಿ ಕೋಲು ಹಾಕಿ ಕಲಕಿದಳಷ್ಟೆ? ಅದಕ್ಕೆ ತಕ್ಕ ಹಾಗೆಯೇ ಹೇಳಿ ತಿಮ್ಮ ಸಂನ್ಯಾಸಿಯೂ ಒಂದಿಷ್ಟು ಕಲಕಿ ಹಾಕಿದ್ದನು. ಇಮಾರೆಗೆ ಅವಳ ಆ ಪ್ರೇಮಪಾತ್ರ ವ್ಯಕ್ತಿಗೆ ಕೃಷ್ಣದೇವರಾಯನೆಂಬ ಹೆಸರು ಗಟ್ಟಿಯಾಗಿತ್ತು. ಈಗ ವಿರೂಪಾಕ್ಷನೋ ಕೃಷ್ಣದೇವರಾಯನೋ ಎಂಬ ಸಂದೇಹವೆದ್ದಿತ್ತು. ಈ ತಳ್ಳಂಕವನ್ನು ಕುರಿತು ಅವಳು ತನ್ನ ಅಂತರಂಗದ ಸಖಿಯಾದ ಗೌರಿಯೊಡನೆ ಚರ್ಚಿಸಿದಳು. 'ಹೇಗಿದ್ದರೂ ಈ ಭಾವಚಿತ್ರದ ಪುರುಷನನ್ನೆ ವರಿಸುವುದು. ಹೆಸರು ಹೇಗಿದ್ದರೇನು? ತಿರುಗಿ ಕೇಳಿವರೆ ಗಜಪತಿಗಳ ವೈರಿಯಾದ ಕೃಷ್ಣದೇವನಿಗಿಂತಲೂ,

ಗಜಪತಿಗಳ ಮಿತ್ರನೂ ಹೆತ್ತವರ ಹಾಗು ಹಿರಿಯರ ಒಪ್ಪಿಗೆಗೆ ಪಾತ್ರನೂ ಆದ, ವಿರೂಪಾಕ್ಷನನ್ನು ವರಿಸುವುದೇ ಮೇಲು ಎಂದು ತೀರ್ಮಾನಿಸಿ ಕೊಂಡಳು.

ಆಗಲೇ ಅಜ್ಞಾತಾದೇವಿ ಅಲ್ಲಿಗೆ ಬಂದು "ಸಂದೇಹಪಡಬೇಡಮ್ಮ, ನಿನ್ನ ಮನೋರಮಣನೇ ನಿನಗೆ ಪತಿಯಾಗುವನು. ದೇವರಾಣೆಗೂ ಸತ್ಯ. ಬಾಬಾ. ರಾಮಯಾಮಾತ್ಯರು ಕೇಳಿದರೆ, ವರನನ್ನು ನೀನು ನೋಡಿ ಒಪ್ಪಿರುವುದಾಗಿ ಹೇಳಿಬಿಡು" ಎಂದು ಅವಳ ಕೈಹಿಡಿದು ಎಳೆದಳು.

"ಒಳ್ಳೇದು. ಇವರಲ್ಲೇನಾದರೂ ಮೋಸವಿದ್ದರೆ ಮಾತ್ರ ನಿನ್ನ ಆಣೆ. ನೆನಪಿರಲಿ" ಎಂದಳು ರುಚೀದೇವಿ.

"ಬರೀ ಆಣೆಯಿಂದ ಪ್ರಯೋಜನವೇನು? ನಿನಗೆ ಮೊದಲು ಆ ವಿರೂಪಾಕ್ಷನ ದರ್ಶನ ಮಾಡಿಸುವೆನು. ನಿನಗೆ ಒಪ್ಪಿಗೆಯಾಗದಿದ್ದರೆ ಏನೂ ಬಲಾತ್ಕಾರವಿಲ್ಲ. ನಿನ್ನ ಬದಲಿಗೆ ನಾನೇ ಅವನನ್ನು ಮದುವೆ ಮಾಡಿಕೊಂಡು ಬಿಡುತ್ತೇನೆ ಬಿಡು" ಎಂದು ಉತ್ತರವೀಯುತ್ತಾ ಅಲ್ಲಿಗೆ ಕರೆತಂದಿದ್ದಳು.

ಎಲ್ಲವೂ ಅಜ್ಞಾತಾದೇವಿಯ ಯೋಜನೆಯಂತೆಯೇ ನಡೆಯಿತು. ಪ್ರತಾಪರುದ್ರ ಗಜಪತಿಗೆ ವೀರರುದ್ರನು ಹೀಗೊಂದು ಪತ್ರವನ್ನು ಬರೆದನು.

"ಪ್ರಿಯಭಾವಯ್ಯ ಪ್ರತಾಪರುದ್ರ ಗಜಪತಿಯವರ ಸನ್ನಿಧಿಗೆ,

"ವೀರರುದ್ರ ಗಜಪತಿಯ ನಮಸ್ಕಾರಗಳು. ಉಭಯಕುಶಲೋಪರಿ, ಸಾಂಪ್ರತ. ನಾನೀಗ ಈ ಗುಪ್ತಸ್ಥಾನದಿಂದ ಹೊರಟು ಬರುವಂತಿಲ್ಲ. ಆಕಸ್ಮಿಕವಾಗಿ ಇಲ್ಲಿ ಶುಭಕಾರ್ಯ ಗೌರವಗಳುಂಟಾದುದರಿಂದ ಇಲ್ಲಿಯೇ ನಿಲ್ಲಬೇಕಾಯಿತು. ಈಗ ನಮ್ಮ ಸ್ಥಿತಿ ತುಂಬಾ ಬಲವಾಗಿದೆ. ನಿಮ್ಮ ಕುಮಾರಿ ಸೌ. ರುಚೀದೇವಿ ಇಲ್ಲಿ ಕ್ಷೇಮವಾಗಿದ್ದಾಳೆ. ಶ್ರೀ ರಾಮಯಾಮಾತ್ಯರೂ ಇಲ್ಲಿಗೇ ಬಂದು ಸೇರಿದ್ದಾರೆ. ಪ್ರಕೃತ ರುಚೀಕುಮಾರಿಗೆ ಯೋಗ್ಯನಾದ ವರನೊಬ್ಬನನ್ನು ನಾವು ಸಾಮಾನ್ಯವಾಗಿ ಗೊತ್ತು ಪಡಿಸಿದ್ದೇವೆ. ಇನ್ನು ನೀವು ಬಂದ ಮೇಲೆ

ನಿಶ್ಚಯ ಮಾಡಬೇಕು. ವಿವಾಹವನ್ನು ವಿಜಯನಗರಕ್ಕೆ ತಿಳಿಯದಂತೆ ಇಲ್ಲಿಯೇ ರಹಸ್ಯವಾಗಿ ಜರುಗಿಸಬೇಕಾಗಿದೆ. ಈ ವಿವಾಹದಿಂದ ವಿಜಯ ಸಂಪಾದನೆಗೂ ಪ್ರಾಮುಖ್ಯವಾದ ಸಹಾಯವುಂಟು. ಇಂತಹ ಸುವರ್ಣ ಸಂದರ್ಭವನ್ನು ಉಪೇಕ್ಷಿಸಲೇ ಕೂಡದು. ಆದುದರಿಂದ ನೀವು ,ರಾಣಿ ಹಾಗು ಪ್ರಾಮುಖ್ಯ ಪರಿವಾರಸಹಿತರಾಗಿ, ಈ ಪತ್ರ ವಾಹಕನೊಂದಿಗೆ ಕೂಡಲೇ ಹೊರಟು ರಹಸ್ಯವಾಗಿ ಇಲ್ಲಿಗೆ ಬಂದು ಸೇರಬೇಕು. ಹೀಗೆಂದು ನಾನೂ, ರಾಮಯಾಮಾತ್ಯರೂ, ರುಚೀ ಕುಮಾರಿಯೂ, ಕೂಡಿಯೇ ಪ್ರಾರ್ಥಿಸುತ್ತೇವೆ. ಹೆಚ್ಚಿನ ವಿವರ ಗಳನ್ನು ಮುಖತಃ ಮಾತಾಡಿಕೊಳ್ಳಬೇಕೇ ಹೊರತು ಈ ಪತ್ರದಲ್ಲಿ ಬರೆಯಲು ಸಾಧ್ಯವಿಲ್ಲ. ಇತಿ ವೀರರುದ್ರ ಗಜಪತಿ, ರಾಮಯಾಮಾತ್ಯ ರುಚೀಕುಮಾರಿ."

ರಾಮಯಾಮಾತ್ಯ, ರುಚೀಕುಮಾರಿಯರು ತಮ್ಮ ರುಜುವನ್ನು ಹಾಕಿದ ಮೇಲೆ, ಅಜ್ಞಾತಾದೇವಿ ಆ ಪತ್ರವನ್ನು ಥೈಲಿಯೊಳಗೆ ಭದ್ರಪಡಿಸಿ, ಒಬ್ಬ ಅಜ್ಞಾತ ಬಂಧುವಿನ ಕೈಯಲ್ಲಿ ಕೊಟ್ಟು, ಕಟಕ ಪುರಿಗೆ ಕಳುಹಿಸಿದಳು.

ರಾಮಯಾಮಾತ್ಯನಿಂದಾಗಬೇಕಾದ ಒಂದು ಕಾರ್ಯವು ಹೀಗೆ ಮುಗಿಯಿತು. ಬಳಿಕ ವೀರರುದ್ರನು ಅವನನ್ನು ಕರೆದುಕೊಂಡು ಮೊದಲು ಅವನಿದ್ದ ಕೋಣೆಯೊಳಗೇ ಹೋಗಿಸಿ, ಸ್ವಲ್ಪ ಹೊತ್ತು ಅವನೊಡನೆ ಮಾತಾಡಿ "ರಾಮಯಾಮಾತ್ಯರೆ, ನೀವಿಲ್ಲಿಯೇ ಇರಿ. ನಿಮಗೆ ಎಲ್ಲಾ ಅನುಕೂಲತೆಗಳೂ ಒದಗಿಸಲ್ಪಡುವವು" ಎಂದೆಂದು ಬಾಗಿಲು ಹಾಕಿ ಹೋಗಿಬಿಟ್ಟನು. ಹೋಗುತ್ತಾ ಹೊರಗಿನಿಂದ "ಸಂದೇಹಿಸಬೇಡಿ. ನಾನೂ ಈ ಶೈಲಭವನದಲ್ಲಿ ಒಬ್ಬ ಬಂದೀವಾನನೇ ಆಗಿರುವೆನು" ಎಂದು ಹೇಳುತ್ತಾ ಹೋದನು.

ರಾಮಯಾಮಾತ್ಯನಿಗೆ ದಿಗ್ಭ್ರಮೆ ಹಿಡಿಯಿತು. ಇದರ ಮರ್ಮ ವೇನಿರಬಹುದು? ಅಜ್ಞಾತಾದೇವಿ ಎಂತಹ ವಿಚಿತ್ರವ್ಯಕ್ತಿ! ಅವ ಳೇನೋ ಮಂತ್ರ ಮಾಡಿ ವೀರರುದ್ರರನ್ನು ವಶಪಡಿಸಿಕೊಂಡ ಹಾಗಿದೆ. ಅರರೆ! ಎಂತಹ ಮೋಸವಾಯಿತು! ಇನ್ನು ಆ ಪ್ರತಾಪರುದ್ರರೂ

ಬಂದು ಇವಳ ಬಲೆಯಲ್ಲಿ ಬೀಳುವರಲ್ಲ.

ರಾಮಯಾಮಾತ್ಯನು ಹೀಗೆ ತೊಳಲಾಡಿಕೊಂಡಿರಲು, ಅತ್ತ ಅಜ್ಞಾತಾದೇವಿ ಕೃಷ್ಣದೇವರಾಯನನ್ನು ಅಲ್ಲಿಗೆ ಬರಮಾಡಿಕೊಳ್ಳುವ ಉಪಾಯವನ್ನು ಕುರಿತು ಯೋಚಿಸುತ್ತಿದ್ದಳು. ಅದಕ್ಕಿಂತ ಮೊದಲು ರಾಯಚೂರಿನಲ್ಲಿರುವ ತೋಪಲ್‌ಖಾನನ ಮುಖಾಂತರವಾಗಿ ತಿಳಿದು ಬಂದ ಒಂದು ರಾಮಾಯಣ ಗ್ರಂಥವು ಅವಳಿಗೆ ಸಿಕ್ಕಬೇಕಾಗಿತ್ತು. ಅದನ್ನೂ ಮಗಳ ವಿಚಾರವನ್ನೂ ತಿಳಿದುಕೊಂಡು ಬರುವಂತೆ ಕೆಲವು ಚತುರರಾದ ಬಂಧುಗಳನ್ನು ಅವಳು ಈ ಮೊದಲೇ ಕಳುಹಿಸಿದ್ದಳು. ಅವರನ್ನೇ ನಿರೀಕ್ಷಿಸಿಕೊಂಡಿದ್ದಳು. ಬಹಳ ದಿನ ನಿರೀಕ್ಷಿಸಬೇಕಾಗಿರಲಿಲ್ಲ. ಅಜ್ಞಾತ ಬಂಧುವೊಬ್ಬನು ಅವಳ ಬಳಿಗೆ ಬಂದು ಶುಭವಾರ್ತೆಯನ್ನು ತಿಳಿಸಿದನು. "ತಾಯಿ, ಬಾಲರಾಣಿ ಸುರಕ್ಷಿತೆಯಾಗಿ ಬಿಡುಗಡೆ ಹೊಂದಿ, ಜಯರಾಮನೆಂಬ ಜಟ್ಟಿಯೊಂದಿಗೆ ವಿಜಯನಗರಕ್ಕೆ ಹೋಗಿ ರುವಳು. ದಾರಿಯಲ್ಲಿ ನಾನು ಅವರನ್ನು ಸಂಧಿಸಿದೆನು. ಇದು ಬಾಲರಾಣಿ ನಿಮಗೆ ಕೊಡುವಂತೆ ಹೇಳಿ ಕೊಟ್ಟಿರುವ ಗ್ರಂಥ. ವಿಜಯ ನಗರವನ್ನು ನೋಡಿಕೊಂಡು ಇಲ್ಲಿಗೆ ಬರುವುದಾಗಿ ಹೇಳಿದಳು."

ಇದನ್ನು ಕೇಳಿ ಅಜ್ಞಾತಾದೇವಿ ಆನಂದತುಂದಿಲಮಾನಸೆ ಯಾದಳು. "ಆಹಾ! ದೇವರು ದೊಡ್ಡವನು. ನಾನು ಹುಡುಕುವ ಗ್ರಂಥವೂ ಸಿಕ್ಕಿತು. ಪ್ರಿಯಬಂಧುಗಳೇ! ವಿಜಯನಗರಕ್ಕೆ ಹೋಗಿ ಅವಳನ್ನು ಇದಿರುಗೊಂಡು ಕರೆತನ್ನಿರಿ!"

ಅಜ್ಞಾತಾದೇವಿ ಸಂಭ್ರಮದಿಂದ ಏನೇನೋ ಆಜ್ಞೆ ಮಾಡಿದಳು.

## ೧೬

ರಾಮಯಾಮಾತ್ಯನು ಅಜ್ಞಾತಾದೇವಿಯ ಕುಮಾರಿಯನ್ನು ಅಪಹರಿಸಿಕೊಂಡು ಹೋದಮೇಲೆ, ರಾಮಣ್ಣನ ಸೇವಕನಾದ ಸಿದ್ದನು ಸ್ವಾಮಿಭಕ್ತ 'ಚತುರ' ಕುದುರೆಯನ್ನು ಮುಂದಿಟ್ಟು ಕೊಂಡು ಅವರನ್ನು ಅನುಸರಿಸಿದನಲ್ಲವೇ? ಆ ಕನ್ಯಾಪಹಾರಿಗಳು 'ಚಿತ್ರವಾಡಿಗಿ' ಎಂಬಲ್ಲಿ ತುಂಗಭದ್ರೆಯನ್ನು ದಾಟುತ್ತಿರಲು ಸಿದ್ದನು ಅವರನ್ನು ಕಂಡು ಹಿಡಿದನು. ಚತುರವು ಮಾತ್ರ ರಾಮಯಾಮಾತ್ಯನ ಗುಂಪನ್ನು ಸೇರಿಕೊಂಡಿತು. ಸಿದ್ದನು, ಅವರಿಗೆ ಗೊತ್ತಾಗದಂತೆ ಅವರ ಹಿಂದೆಯೇ ರಾಯಚೂರನ್ನು ಮುಟ್ಟಿ ಫಕೀರನ ಸೋಗುಹಾಕಿಕೊಂಡು ದುರ್ಗವನ್ನು ಸೇರಿ, ಲಕ್ಷ್ಯಗೊಟ್ಟನು. ದುರ್ಗಮಂದಿರದ ಎರಡನೆಯ ಉಪ್ಪರಿಗೆಯಲ್ಲಿ ಕೆಲವು ಹಿಂದೂ ದಾಸಿಯರನ್ನು ಹೊಸದಾಗಿ ನಿಯಮಿಸಿದುದನ್ನೂ, ಮಾಲೂಖಾನನು ವಿಶೇಷ ಶೃಂಗಾರದಿಂದ ಅಲ್ಲಿ ಸುಳಿದಾಡುತ್ತಿರುವುದನ್ನೂ ಕಂಡನು. ಆ ಮೂರನೆಯ ಕೋಣೆಯಲ್ಲಿಯೇ ಆ ಕನ್ಯೆಯನ್ನೂ ಸೆರೆಹಾಕಿರುವರೆಂದು ಅವನಿಗೆ ಗೊತ್ತಾಯಿತು. ಹಾಗೆಯೇ ಒಬ್ಬ ಕಾವಲುಗಾರನೊಡನೆ ಗುಡುಗುಡಿಯ ಸ್ನೇಹಮಾಡಿಕೊಂಡು ಉಪಾಯದಿಂದ ವಿಚಾರ ಮಾಡಲು, ಅವನೂ ಸ್ವಲ್ಪ ಹುರುಳನ್ನು ಬಯಲು ಮಾಡಿದನು. ಹೀಗೆ ಅಲ್ಪ ಸ್ವಲ್ಪವಾದರೂ ಮುಖ್ಯವಾದ ವಿಷಯವನ್ನು ತಿಳಿದುಕೊಂಡು ಆನೆಗೊಂದಿಗೆ ಹಿಂದಿರುಗಿ, ರಾಮರಾಜನಿಗೆ ಎಲ್ಲಾ

ವಿಷಯಗಳನ್ನು ನಿವೇದಿಸಿದನು.

ಒಡನೆಯೇ ರಾಮರಾಜನು ಅಜ್ಞಾತಾದೇವಿಗೆ ಅವಳ ಮಗಳ ಕ್ಷೇಮ ವಿಷಯವಾಗಿ ಒಂದು ಪತ್ರವನ್ನು ಬರೆದು ಅತ್ತ ಕಳುಹಿಸಿದನು. ಅನಂತರ ತಾನು ಆರ್ವೀಡಿಗೆ ಹೋಗಿ ಬರುವೆನೆಂದು ಸುಳ್ಳುನೆವವನ್ನು ಹೇಳಿ, ಕೆಲವು ದಿನ ರಜೆ ಪಡೆದುಕೊಂಡು ಸಿದ್ದನೊಂದಿಗೆ ರಾಯಚೂರಿಗೆ ಮುಟ್ಟಿದನು.

ಅವರಿಬ್ಬರೂ ಕೂಲಿಯಾಳುಗಳ ವೇಷವನ್ನು ಧರಿಸಿಕೊಂಡರು. ದುರ್ಗದ ಕುದುರೆಗಳಿಗೆ ಬೇಕಾಗುವಷ್ಟು ಹುರುಳೀ ಮೂಟೆಗಳನ್ನು ಒಬ್ಬ ಸಾವುಕಾರನು ಸರಬರಾಯಿ ಮಾಡುತ್ತಿದ್ದನು. ಆ ಕೂಲಿಯಾಳುಗಳ ಜತೆಯಲ್ಲಿ ಈ ವೇಷಧಾರಿಗಳೂ ಸೇರಿ, ಹುರುಳೀ ಮೂಟೆಯನ್ನು ಹೊತ್ತುಕೊಂಡು ದುರ್ಗವನ್ನು ತಲಪಿದರು. ಹುರುಳೀ ಮೂಟೆಗಳನ್ನು ಕೆಡವುವಲ್ಲಿ ಕೆಡವಿ, ಎಲ್ಲಾ ಕೂಲಿಯಾಳುಗಳೂ ಅವರವರ ಪಾಡಿಗೆ ಹೊರಟು ಹೋದಮೇಲೆ, ಸೋಗಿನವರು ಹಾಗೂ ಹೀಗೂ ತಿರುಗಾಡುತ್ತಾ, ಕುದುರೇಲಾಯದ ಹಿಂಬದಿಯಲ್ಲಿರುವ ದೊಡ್ಡದೊಂದು ಮಾವಿನ ಮರದ ಬುಡದಲ್ಲಿ ಕುಳಿತರು. ಸಿದ್ದನು ಅಂಗಡಿಗೆ ಹೋಗಿ ಮಂಡರಳು, ಬೆಲ್ಲ, ತೆಂಗಿನಕಾಯಿಗಳನ್ನು ಕೊಂಡುಕೊಂಡು ಬಂದ ಮೇಲೆ ಇಬ್ಬರೂ ಸೇರಿ ಅದನ್ನು ಧ್ವಂಸಮಾಡಿ, ಸಮೀಪದ ಬಂಡೆಯ ದೋಣಿಗಿಳಿದು ನೀರು ಕುಡಿದು, ಮತ್ತೆ ಅದೇ ಮರದ ಬುಡವನ್ನು ಸೇರಿ ಸಾವಕಾಶವಾಗಿ ತಾಂಬೂಲ ಸೇವನೆಗೆ ಪ್ರಾರಂಭ ಮಾಡಿದರು. ಸಿದ್ದನು ಕುದುರೇಲಾಯದ ಆಚೆಯ ಬದಿಯಲ್ಲಿ ಕಾಣುವ, ದೊಡ್ಡ ಸೌಧದ ಕಡೆಗೆ ಮುಖವನ್ನು ತಿರುಗಿಸಿ, ಕಣ್ಣಿನಿಂದ ತೋರಿಸುತ್ತ "ಅದೇ ಅಲ್ಲಿ ಆ ಎರಡನೆಯ ಉಪ್ಪರಿಗೆಯ ಮೇಲೆ, ಆ ಮೂರನೆಯ ಕಿಟಕಿಯ ಕೋಣೆ" ಎಂದನು.

ರಾಮರಾಜನ ಕಣ್ಣು ಅದನ್ನು ಚೆನ್ನಾಗಿ ಗುರುತಿಸಿಕೊಂಡು, ಹಾಗೆಯೇ ಕುದುರೇಲಾಯದ ಮೇಲಿಳಿದು ಮಾವಿನ ಮರದ ಮೇಲೇರಿಕೊಂಡು ಕೆಳಗಿಳಿಯಿತು. ಸ್ವಲ್ಪ ಹೊತ್ತಿಗೆಲ್ಲಾ ಅವರಿಬ್ಬರೂ ಬಂಡೆಯ ಮೇಲೆ ಹರಕು ಪಂಚೆಯನ್ನು ಹಾಸಿಕೊಂಡು ನಿದ್ದೆ ಮಾಡುತ್ತಿದ್ದರು.

ಹೊತ್ತು ಕಂತುವವರೆಗೆ ಗೊರಕೆ ಹೊಡೆಯುತ್ತಿದ್ದರು.

ರಾತ್ರಿ ಎರಡನೆಯ ಯಾಮ. ದುರ್ಗನಗರವು ಆಗಲೇ ನಿಶ್ಶಬ್ದವಾಗಿತ್ತು. ಶುಕ್ಲ ಷಷ್ಠಿಯ ಚಂದ್ರನು ಪಡುವಾಗಸದ ಬದಿಯಲ್ಲಿದ್ದನು. ಬೆಳುದಿಂಗಳು ಕ್ಷುದ್ರವಾಗಿತ್ತು. ರಾಮರಾಜನು ಎದ್ದು ಮೆಲ್ಲನೆ ಆ ಮಾವಿನ ಮರದ ಕೊಂಬೆಯ ಮೇಲೇರಿಕೊಂಡನು. ಆ ಮಾವಿನ ಮರದ ಕೊಂಬೆಯೊಂದು ಕುದುರೇಲಾಯದ ಮಾಡಿನ ಮೇಲೆ ಚಾಚಿತ್ತು. ಅವನು ಆ ಕೊಂಬೆಗೊಂದು ಬಟ್ಟೆ ಕಟ್ಟಿ ನೇತಾಡಿ, ಕುದುರೇ ಲಾಯದ ಮಾಡನ್ನು ಸೇರಿದನು. ಆ ಮಾಡಿನ ಬದಿಯಲ್ಲಿ ಆ ಸೌಧದ ಗೋಡೆ ಎದ್ದು ನಿಂತಿತ್ತು. ಆ ಗೋಡೆಯಲ್ಲಿರುವ ಗಾರೆಯ ಅಂಚಿನ ಮೇಲೆ ಕಾಲು ಹಾರಿಸಿಟ್ಟು, ದೇಹವನ್ನು ಸರಕ್ಕನೆ ಆಚೆಗೆ ವಾಲಿಸಿ, ಸೌಧದ ಒಂದನೆಯ ಉಪ್ಪರಿಗೆಯ ದಳಿಗಳನ್ನು ಹಿಡಿದುಕೊಂಡು ಆ ಮಾಡನ್ನು ಸೇರಿದನು.

ಆ ಉಪ್ಪರಿಗೆಯ ಜಗುಲಿಯಲ್ಲಿ ಸದ್ದಾಗದಂತೆ ಜಾಗರೂಕತೆಯಿಂದ ಕಾಲು ಹಾಕುತ್ತ, ಮುಂದೆ ಕಾಣಿಸುವ ಕಿಟಕಿಯ ಬಳಿಗೆ ಹೋದನು. ಒಂದು ಮಾರು ಎತ್ತರದಲ್ಲಿ ಒಂದು ಮಾರು ಉದ್ದವಾಗಿ ಒಂದು ಮೊಳ ಅಗಲವಾಗಿ ಆ ಕಿಟಕಿ ಇತ್ತು. ಬಾಗಿಲು ಒಳಗಿನಿಂದ ಅರ್ಧಂಬರ್ಧ ಸರಿದಿತ್ತು. ಶಬ್ದವಿದೆಯೋ ಎಂದು ಸ್ವಲ್ಪ ಹೊತ್ತು ಲಕ್ಷ್ಯಗೊಟ್ಟು, ಏನೂ ಇಲ್ಲದಿರಲು, ಆ ಕಿಟಕಿಯ ಮೇಲೇರಿದನು. ಆ ಉದ್ದವಾದ ಕಿಟಕಿಗೆ ಎರಡು ಅಡ್ಡಗೋಲುಗಳಿದ್ದುವು. ಎರಡನೆಯ ಅಡ್ಡಗೋಲಿನ ಮೇಲೆ ಏರುತ್ತಲೇ, ಆ ಗೋಡೆಯ ಮೇಲಣ ಅಂಚಿನ ಜಗುಲಿಯೂ ಕೈಗೆಟಕಿತು. ಅದರ ಆಧಾರದಿಂದ ದಮ್ಮು ಬಿಗಿದು ಕೊಂಡು, ದೇಹವನ್ನು ಎಕ್ಕಳಿಸಿಕೊಂಡು ಮೇಲುಪ್ಪರಿಗೆಯ ದಳಿಗಳನ್ನು ಎಟಕಿಸಿ, ಅಂಚಿನ ಮೇಲೆ ಕಾಲಿಟ್ಟು, ಆ ಎರಡನೆಯ ಮಾಡನ್ನು ಸೇರಿದನು. ಅಲ್ಲಿ ನಿಂತು ಒಮ್ಮೆ ಸುತ್ತುಮುತ್ತ ನೋಡಲು, ಆಕಾಶದ ಬುಡದಲ್ಲಿ ನಿದ್ರಿಸಿಕೊಂಡಿದ್ದ ದುರ್ಗವೂ, ದುರ್ಗದಡಿಯ, ನಗರ, ಊರು, ಕೇರಿ ನಾಡುಗಳೂ ಆಕಾಶದೊಂದಿಗೆ ಸೇರಿದಂತೆ ತೋರಿದುವು. ಅವನು ಮುನ್ನಡೆದು ಮೂರನೆಯ ಕಿಟಕಿಯ ಬಳಿಯಲ್ಲಿ ನಿಂತು ಒಳಕ್ಕೆ ಲಕ್ಷ್ಯ

ಗೊಟ್ಟನು. ಬಾಗಿಲು ತೆರೆದುಕೊಂಡಿತ್ತು. ಒಳಗಿರುವ ದೀಪದ ಪ್ರಕಾಶವೂ ಹಾಯುತ್ತಿತ್ತು. ಶಬ್ದವೇನೂ ಕೇಳಿಬಾರದಿರಲು ಕಿಟಕಿಯ ಮೇಲೆ ಏರಿನಿಂತು ಒಳಕ್ಕೆ ದೃಷ್ಟಿಯನ್ನು ಹಾಯಿಸಿದನು.

ವಿಶಾಲವೂ ಸುಂದರವೂ ಸುಸಜ್ಜಿತವೂ ಆದ ಕೋಣೆ. ಒಂದು ಬದಿಯಲ್ಲಿ ಬೆಳ್ಳಿಯ ಪೀಠದ ಮೇಲೆ, ಬಂಗಾರದ ಕಾಲುದೀಪವು ಮಂದಜ್ಯೋತಿಯಿಂದ ಉರಿಯುತ್ತಿತ್ತು. ಸುಂದರವಾದ ಬಣ್ಣದ ಕೆಲಸಗಳಿಂದಲೂ, ಬಂಗಾರದ ಹೊದಿಕೆಗಳಿಂದಲೂ ಒಪ್ಪುವ ಮೇಜು, ನಾಗಾಲಿ, ಗದ್ದುಗೆ, ಮಣೆ ಮೊದಲಾದ ಆಸನಗಳ ಮೇಲೆ ಆ ಪ್ರಕಾಶವು ಬಿದ್ದು ಪ್ರತಿಫಲಿಸಿಕೊಂಡಿತ್ತು. ರನ್ನಗಂಬಳಿಯಿಂದ ತೊಳಗುತ್ತಿದ್ದ ನೆಲ, ಹೂ ಬಳ್ಳಿಗಳ ಚಿತ್ರಗಳಿಂದ ಮನೋರಮ್ಯವಾಗಿ ಕಾಣುವ ಗೋಡೆಗಳು, ಮಲ್ಲಿಗೆ, ಜಾಜಿ, ಸಂಪಿಗೆ, ಗುಲಾಬಿ ಮೊದಲಾದ ಕಂಪಲರ ಬಂತಿಗಳಿಂದಲೂ, ಮಾಲೆಗಳಿಂದಲೂ, ದಂಡೆಗಳಿಂದಲೂ, ಗೊಂಚಲುಗಳಿಂದಲೂ ಇನ್ನಷ್ಟು ಶೃಂಗಾರವಾಗಿ ಅಲಂಕರಿಸಲ್ಪಟ್ಟಿದ್ದುವು. ಹಾಗೆಯೇ ಕೋಣೆಯ ಮೇಲುಮುಚ್ಚಿಗೆಯೂ ಬೆಳ್ಳಿ ಬಂಗಾರದ ಹೊದಿಕೆಗಳಿಂದಲೂ, ಮಧ್ಯೆ ಮಧ್ಯೆ ನೇತಾಡುವ ಹಂಡೆ-ಗೊಂಡೆ ಜಾಲರಿಗಳಿಂದಲೂ, ಸರಗಳಿಂದಲೂ ಕೃತ್ರಿಮವಾದ ಹೂ ಹಣ್ಣು ಹಕ್ಕಿಗಳಿಂದಲೂ ಕಣ್ಮನಗಳನ್ನು ಕವರಿಕೊಂಡಿತ್ತು.

ಹೀಗೆ ಸೌಂದರ್ಯದ ಬೀಡಾದ ಆ ಕೋಣೆಯೊಳಗೆ ಶ್ರೇಷ್ಠವಾದೊಂದು ದಂತದ ಮಂಚ; ಅದರಲ್ಲಿ ತುಪ್ಪಳದ ಹೂವಿನಂತಹ ಹಾಸಿಗೆ; ಆ ಹಾಸಿಗೆಯ ಮೇಲೆ ಕುಳಿತಿದ್ದಾಳೆ, ಹೂವಿನಂತಹ ಕೋಮಲ ಬಾಲೆ, ಸುಂದರ ಕನ್ಯೆ. ಇಷ್ಟು ಹೊತ್ತಾದರೂ ಸುಮ್ಮನೆ ಕುಳಿತಿದ್ದಾಳೆ, ಎರಳೆಗಂಗಳಿಂದ ಗೋಡೆಯ ಮೂಲೆಯನ್ನು ನೋಡುತ್ತಾ. ಅವಳ ಕೋಮಲಾಂಗದ ಎಡಭಾಗದ ಮೇಲೆ ದೀಪದ ಪ್ರಕಾಶವು ಲೇಪನವಾಗಿತ್ತು. ಆ ಬಟ್ಟಮೊಗದ ಅರ್ಧಭಾಗವು ಪುಟವಿಟ್ಟ ಬಂಗಾರದಂತೆ ಹೊಳೆಯುತ್ತಿತ್ತು; ಆದರೆ ವ್ಯಸನಾಕ್ರಾಂತವಾಗಿತ್ತು. ನೇತ್ರಗಳು ನಿಸ್ತೇಜವಾಗಿದ್ದುವು. ಜಡವಾಗಿದ್ದುವು. ಆ ಕೋಣೆಯೊಳಗಿರುವ ಸುಂದರ ವಸ್ತುನಿಚಯಗಳೇನೂ

ಅವಳ ದೃಷ್ಟಿಯನ್ನು ಆಕರ್ಷಿಸಿಕೊಳ್ಳಲಿಲ್ಲ. ಅವಳ ಆ ವ್ಯರ್ಥವೃಷ್ಟಿಯಲ್ಲಿ ವಿಚಾರವು ಹರಿದಾಡಿಕೊಂಡಿತ್ತು. ಮೂಗು ಸೊಗಸಾದ ಪುಷ್ಪ ಸೌರಭಗಳನ್ನು ಬೇಡಬೇಡವೆನ್ನುತ್ತಿತ್ತು. ಆ ನಿಟ್ಟುಸಿರು! ಸುಖ ಸಂತೋಷದಾಯಕವಾದ ಆ ದಿವ್ಯಮಂದಿರವು ಅವಳಿಗೆ ಅತ್ಯಂತ ಸಂಕಟವನ್ನುಂಟುಮಾಡುತ್ತಿರುವಂತೆ ಆ ಮುಖಭಾವವು ಹೇಳುತ್ತಿತ್ತು. ಆಕೆಯು ತಲೆಯ ಹೊಳೆವೆಳೆ ಕರಿಕೂದಲುಗಳನ್ನು ಸುಂದರವಾಗಿ ಬಾಚಿದ್ದರೂ, ಶ್ರೇಷ್ಠವಾದ ಜರತಾರೀ ಸೀರೆಯನ್ನು ಉಟ್ಟಿದ್ದರೂ, ಮೈ ತುಂಬಾ ಅಲಂಕಾರಗಳಿದ್ದರೂ, ಅವೆಲ್ಲಾ ಆಕೆಯೇ ಇಷ್ಟಪಟ್ಟುಮಾಡಿಕೊಂಡ ಅಲಂಕಾರಗಳಲ್ಲವೆಂದೂ, ಒತ್ತಾಯದ ಸಿಂಗಾರವೆಂದೂ ಸಂದೇಹವಿಲ್ಲದೆ ಹೇಳಬಹುದಿತ್ತು.

ಆ ಕೋಣೆಯ ಬಾಗಿಲು ಭದ್ರಪಡಿಸಿತ್ತು. ಬಾಗಿಲ ಬದಿಯಲ್ಲಿ ಇನ್ನೊಬ್ಬಳು ಹೆಂಗಸು ನಿದ್ರಾವಶಳಾಗಿ ಮಲಗಿದ್ದಳು. ಅವಳು ದಾಸಿಯೇ ಸರಿ. ಮಾತಾಡುವುದರಿಂದ ಆ ದಾಸಿಗೆ ಎಚ್ಚರವಾದೀತೇನೋ ಎಂದು ರಾಮರಾಜನು ಶಂಕಿಸಿದನು. ಬಾಗಿಲಿನ ಹೊರಗಿನಿಂದ ಯಾರದೋ ಗೊರಕೆಯ ದನಿಯೂ ಕೇಳಿಸುತ್ತಿತ್ತು. ರಾಮರಾಜನು ಉಡಿಯಲ್ಲಿದ್ದೊಂದು ಪತ್ರವನ್ನು ಒಳಕ್ಕೆಸೆಯಲೋ ಬೇಡವೋ ಎಂದು ಯೋಚಿಸುತ್ತಿದ್ದನು. ಪರಿಸ್ಥಿತಿಯನ್ನು ಪರಿಶೀಲಿಸಿದಂತೆ ಆ ಬಾಲೆಯೊಡನೆ ಮಾತಾಡಬಹುದೆಂಬ ಧೈರ್ಯವುಂಟಾಗುತ್ತಿತ್ತು.

ಅಷ್ಟರಲ್ಲಿ ಆ ಬಾಲೆ ಸಹಜವಾಗಿ ಈ ಕಡೆಗೇ ಮೊಗದಿರುವಿ ಕೈ ಜೋಡಿಸಿಕೊಂಡು ದೀನದೃಷ್ಟಿಯಿಂದ ಮೇಲೆ ನೋಡುತ್ತಾ "ದೇವ! ನನ್ನನ್ನು ಈ ಸಂಕಟ ಪಂಜರದಿಂದ ಪಾರುಮಾಡಲಾರೆಯಾ?" ಎನ್ನುತ್ತಾ ಕಣ್ಣು ಮುಚ್ಚಿಕೊಂಡು ಮತ್ತೆ ಕಣ್ಣು ತೆರೆದಳು. ಆಗ ಕಿಟಕಿಯಲ್ಲಿ ಕಾಣುವ ಪುರುಷಾಕೃತಿಯನ್ನು ನೋಡಿ ಬೆರಗಾದಳು.

"ಅಂಜದಿರಂಜದಿರು. ನಾನು ನಿನ್ನನ್ನು ಕಾಪಾಡಲಿಕ್ಕಾಗಿ ಬಂದಿರುವೆನು" ಎಂದು ಒಡನೆಯೇ ಸನ್ನೆಮಾಡಿದನು ರಾಮರಾಜ. ಆ ಧೀರಬಾಲೆಯ ಮುಖದಲ್ಲಿ ಧೈರ್ಯದ ಕಳೆ ಏರಿತು. ದೇವರಿಗೆ ನಮಸ್ಕರಿಸುವಂತೆ ರಾಮರಾಜನಿಗೇ ಕೈ ಮುಗಿದಳು.

ರಾಮರಾಜನು ಕೈಯಲ್ಲಿದ್ದ ಪತ್ರವನ್ನು ಒಳಕ್ಕೆಸೆದು ಓದಿನೋಡಿ ಸಮ್ಮತಿಯನ್ನು ಸೂಚಿಸುವಂತೆ ಸೈಗೆದೋರಿದನು. ಅವಳು ಲಗುಬಗೆಯಿಂದ ಆ ಪತ್ರವನ್ನು ಓದಿನೋಡಿ ಸಂದೇಹದಿಂದ ರಾಮರಾಜನನ್ನು ನೋಡಿದಳು.

"ಏನೂ ಸಂದೇಹ ಪಡಬೇಡ, ದೇವರು ದೊಡ್ಡವನು. ಹಾಗೆಯೇ ಅವನಿಗೆ ಹೇಳು" ಎಂದು ರಾಮರಾಜನು ಕೈಸನ್ನೆ ಮುಖಭಾವಗಳಿಂದಲೇ, ಅವಳಿಗೆ ನಂಬುಗೆಯನ್ನು ಹುಟ್ಟಿಸಿದ ಮೇಲೆ, ಅವಳು ಆಗಲೆಂದು ಒಪ್ಪಿ ಅವನನ್ನು ಕೃತಜ್ಞತಾ ದೃಷ್ಟಿಯಿಂದ ನೋಡಿದಳು. ಆ ಪತ್ರವನ್ನು ಆಗಲೇ ಸುಟ್ಟುಹಾಕುವಂತೆ ರಾಮರಾಜನು ಸೂಚಿಸಲು. ಅವಳು ಹಾಗೆಯೇ ಮಾಡಿ, ಅದರ ಬೂದಿಯನ್ನು ಕಂಬಳಿಯಡಿಗೆ ಹಾಕಿದಳು. ರಾಮರಾಜನು ಧೈರ್ಯವಾಗಿರುವಂತೆ ಮತ್ತೊಮ್ಮೆ ಸೂಚನೆ ಮಾಡಿ, ಆ ಕಿಟಕಿಯಿಂದ ಕೆಳಗಿಳಿದನು.

ಹೇಗೆ ಏರಿದನೋ ಹಾಗೆಯೇ ಸಾವಧಾನದಿಂದ ಕೆಳಗಿಳಿಯುತ್ತಾ, ಕುದುರೇಲಾಯದ ಮುಡಿಗೆ ಸೇರಿ, ಮಾವಿನ ಮರದ ಮೇಲಿಂದಾಗಿ ನೆಲದ ಬದಿಗೆ ಬರುವಾಗ, ಯಾವುದೋ ತುಂಡು ಕೊಂಬೆಯೊಂದು ನುರುಕ್ಕೆಂದು ಮುರಿದು, ಸುಮಾರು ಎರಡಾಳೆತ್ತರದಿಂದ ನೆಲಕ್ಕೆ ಬಿದ್ದನು. ಅಲ್ಲಿ ಕಾದಿದ್ದ ಸಿದ್ದನು ಗಾಬರಿಯಿಂದ "ಹಾ! ಒಡೆಯ!" ಎನ್ನುತ್ತ ಅವನನ್ನು ಹಿಡಿದನು. ರಾಮರಾಜನು ಸಾವರಿಸಿಕೊಂಡೆದ್ದು ಕುಳಿತು, "ದೇವರು ದೊಡ್ಡವನು. ಕಾಲಗಂಟಿಗೆ ಮಾತ್ರ ಪೆಟ್ಟಾಯಿತು. ಅಷ್ಟೇ" ಎಂದನು.

ಕಟ್ಟಾಳಾದ ರಾಮರಾಜನು ಆ ನೋವನ್ನೇನೂ ಲಕ್ಷ್ಯಮಾಡಲಿಲ್ಲ. ಬೆಳಬೆಳಗಾಗುವಾಗಲೇ ಅವರಿಬ್ಬರೂ ಅದೇ ಕೂಲಿಯ ವೇಷದಿಂದಲೇ ಹೊರಟರು. ದುರ್ಗರಕ್ಷಕರು ವಿಚಾರಿಸಿದ್ದಕ್ಕೆ "ನಿನ್ನೆ ಹುರುಳೀಮೂಟೆಗಳನ್ನು ಹೊತ್ತ ಕೂಲಿಗಳು ನಾವು. ಜೊತೆಗಾರನಿಗೆ ಬಿದ್ದು ಪೆಟ್ಟಾದುದರಿಂದ ಇಬ್ಬರೂ ದುರ್ಗದಲ್ಲಿದ್ದೆವು" ಎಂದು ಉತ್ತರ ಕೊಟ್ಟು ಜಾರಿಬಿಟ್ಟರು.

* * *

ರಾಮರಾಜನ ಅಭಯ ವಚನಗಳಿಂದ ಬಾಲರಾಣಿಯ ಮುಖವು ಪ್ರಫುಲ್ಲಿತವಾಗಿತ್ತು. 'ಅವನೆಂತಹ ವೀರಪುರುಷ! ಅವನ ವೀರೋಚಿತ ಸಾಹಸ ಉಪಾಯಕ್ಕೆ ದೇವನು ವಿಜಯವನ್ನು ನೀಡಲಿ' ಎಂದು ನೂರು ಬಾರಿ ದೇವರನ್ನು ಪ್ರಾರ್ಥಿಸಿದಳು. ಸಂತೋಷಕರವಾದ ಆಲೋಚನೆಗಳಿಂದ ಬಹಳ ರಾತ್ರಿಯವರೆಗೆ ನಿದ್ರೆಯೂ ಬಾರದೆ ಹೋಯಿತು. ಆದರೆ ಇಷ್ಟು ದಿನ ಚಿಂತೆಯಿಂದ ನಿದ್ದೆಗೆಟ್ಟಿದ್ದ ಅವಳಿಗೆ ಬೆಳಗಿನಝಾವದಲ್ಲಿ ಸುಖನಿದ್ರೆ ಹಿಡಿಯಿತು. ಆ ನಿದ್ರೆಯಲ್ಲಿಯೂ ಏನೇನೋ ಸವಿಗನಸುಗಳು. ಬೆಳಗಾಗಿಹೋದರೂ ಎಚ್ಚರಾಗಲಿಲ್ಲ. ಅವಳ ಸೇವೆಗಾಗಿ ಕಾದಿದ್ದ ದಾದಿಯರು, ಸಣ್ಣ ಮಗುವಿನಂತೆ ನಿಷ್ಕಳಂಕವಾದ ನಿದ್ದೆಯಲ್ಲಿ ಮಲಗಿದ್ದ ಆ ತರುಣಿಯನ್ನು ನೋಡಿ ಉದಾತ್ತ ಭಾವದಿಂದ ತುಂಬಿದವರಾದರು. ಮಾಲೂಖಾನನು ಬಂದು ಆ ಕನ್ಯಾಮಣಿಯ ಅಂದಿನ ಅಪೂರ್ವವಾದ ನಿದ್ದೆಯ ಸೊಬಗನ್ನು ಕಂಡು, 'ಇದೇನೋ ಶುಭಸೂಚನೆ' ಎಂದು ಮೆಚ್ಚಿಕೊಂಡು ಹೋದನು.

ಸ್ವಲ್ಪಹೊತ್ತಿನ ಮೇಲೆ ಅವಳು ಗಡಬಡಿಸಿ ಎಚ್ಚೆತ್ತು ರಾತ್ರಿಯ ಸಂಭವವನ್ನು ಸ್ಮರಿಸಿಕೊಂಡಳು. ಕಿಟಕಿಯಲ್ಲಿ ತೋರಿದ ಆ ಅಭಯದಾತನು ಕನಸಿನ ವ್ಯಕ್ತಿಯೇನೋ ಎಂದು ಸಂದೇಹವುಂಟಾಯಿತು. ಮೆಲ್ಲನೆ ರನ್ನಗಂಬಳಿಯನ್ನೆತ್ತಿ ನೋಡಲಾಗಿ, ಅಲ್ಲಿರುವ ಆ ಪತ್ರದ ಬೂದಿ ಕನಸಲ್ಲವೆಂಬುದಕ್ಕೆ ನಿದರ್ಶನವಾಯಿತು. ಆ ಕಿಟಕಿಯಿಂದ ಆಕಾಶವನ್ನು ನೋಡಿ, 'ಆಹಾ! ಅವನೆಂತಹ ಸಾಹಸಿ! ಇಷ್ಟೆತ್ತರದ ಉಪ್ಪರಿಗೆಯ ಮೇಲೆ ಗೋಡೆ ಹತ್ತಿ ಬಂದನಲ್ಲಾ! ಆ ಧೀರಪ್ರವರ ನಾರೊ!' ಎಂದು ಆಶ್ಚರ್ಯಪಟ್ಟು, ಹರ್ಷಗೊಂಡಳು.

"ಅಬ್ಬಾ! ಎಷ್ಟುಹೊತ್ತು ಮಲಗಿದ್ದೆ! ಖಾನ್‌ಸಾಹೇಬರು ಬಂದಿದ್ದರೆ?" ಅವಳ ಈ ಗಿಳಿದನಿಗೆ ದಾಸಿ ನಗುತ್ತ, "ಒಮ್ಮೆ ಬಂದು ನೀನು ಸುಖನಿದ್ರೆಯಲ್ಲಿರುವುದನ್ನು ನೋಡಿ ತುಂಬಾ ಮೆಚ್ಚಿಕೊಂಡು ಹೋದರು. ನಡೆ, ಪ್ರಾತಃಕೃತ್ಯಗಳನ್ನು ಲಗುಲಗು ತೀರಿಸೋಣ" ಎಂದಳು.

ಬಳಿಕ ದಾಸಿ ಅವಳನ್ನು ನೀರಮನೆಗೆ ಕರೆದುಕೊಂಡುಹೋದಳು.

- ಇಂದು ಅಪರೂಪವಾಗಿ ಅವಳು ಖಾಸಾಹೇಬರನ್ನು ವಿಚಾರಿಸಿದ್ದು ನೋಡಿ, ಅದನ್ನು ಖಾಸಾಹೇಬರಿಗೆ ಅರಿಕೆಪಡಿಸಿ ಇನಾಮನ್ನು ಪಡೆಯುವ ತವಕದಿಂದ ಇನ್ನೊಬ್ಬಳು ದಾಸಿ ಅತ್ತ ಓಡಿದಳು.

ಬಾಲಿಕೆ ಮುಖಮಾರ್ಜನಾದಿಗಳನ್ನು ತೀರಿಸಿಕೊಂಡು, ಕಾಸಿದ ಹಾಲನ್ನು ಸೇವಿಸಿ ತಲೆಬಾಚಿಸಿಕೊಳ್ಳುವಷ್ಟರಲ್ಲಿ, ಆ ಸುವಾರ್ತೆಯನ್ನು ಕೇಳಿದ ಮಾಲೂಖಾನನು, ಸಂಭ್ರಮದಿಂದ ಆ ಕೋಣೆಯನ್ನು ಪ್ರವೇಶಿಸಿ, ನಾಗಾಲಿಯ ಮೇಲೆ ಮಂಡಿಸಿ ಮುಗುಳ್ನಗುವನ್ನು ಸೂಸುತ್ತ, "ಪ್ರಿಯಮುಕ್ತಾ, ಇಂದು ನೀನು ಸುಖವಾಗಿ ನಿದ್ರಿಸಿದ್ದು ಕೇಳಿ ಬಹಳ ಸಂತೋಷವಾಯಿತು" ಎಂದನು.

ದಾಸಿಯರೆಲ್ಲರೂ ಹೊರಗೆ ಹೊರಟು ಹೋದರು.

ಬಾಲೆ ಜಡೆಯನ್ನು ಹಿಡಿದುಕೊಂಡು ಅದನ್ನು ನೋಡುತ್ತ "ಅದಿರಲಿ ಖಾನ್‌ಸಾಹೇಬ್, ನೀವು ನನ್ನನ್ನು ಮುಕ್ತಾ ಎಂದು ಕರೆಯುವುದನ್ನು ಕೇಳಿ, ಬಹಳ ಆಶ್ಚರ್ಯಪಡುತ್ತೇನೆ. ನೀವು ತಿಳಿಯುವ ಮುಕ್ತಾ ಎಂಬವಳು ನಾನಲ್ಲ, ನಾನು ಬೇರೆ" ಎಂದಳು.

ಈ ಗಿಳಿನುಡಿಯಿಂದ ಆನಂದಪುಳಕಿತನಾದ ಮಾಲೂಖಾನನು "ಬೇರೆ ಎಂದಷ್ಟೇ ಹೇಳಿದರೆ ನಂಬುವುದು ಹೇಗೆ? ಬೇರೆ ಯಾರು ಎಂಬುದನ್ನು ವಿವರಿಸಿ ಹೇಳಿದರೆ ತಾನೆ?" ಎಂದನು.

"ಅದನ್ನು ವಿವರಿಸಲಾಗುವುದಿಲ್ಲ. ನಾನೊಬ್ಬಳು ಅನಾಥ ಬಾಲಿಕೆ. ಅಬಲೆ. ಆದರೆ ವೀರಪುತ್ರಿ...."

"ವೀರಪುತ್ರಿ! ಆಹಾ!"

"ಹೌದು!"

"ನಾನೂ ವೀರಕುಮಾರ! ನಿನ್ನ ಅನಾಥತ್ವವನ್ನು ಕಳೆಯಲಿಕ್ಕಾಗಿಯೇ ಕಾದಿದ್ದೇನೆ. ಇಂದು ನೀನು ಇಷ್ಟು ಮಾತಾಡುವುದೇ ನನ್ನ ಭಾಗ್ಯ! ನನ್ನನ್ನು ವರಿಸಲು ಒಪ್ಪುವಿಯೆಂದು ನಾನು ನಂಬಲೆ?"

"ಸಾಹೇಬರೆ, ನಾನು ಸಂಪೂರ್ಣ ನಿಮ್ಮ ಕೈಯೊಳಗೆ ಸಿಕ್ಕಿಕೊಂಡಿರುವಾಗ, ನನ್ನ ಒಪ್ಪಿಗೆಗಾಗಿ ನೀವು ಕಾದಿರುವುದನ್ನು ನೋಡಿದರೆ, ನಿಮ್ಮ ವಿಷಯವಾಗಿ ಒಳ್ಳೆಯ ಭಾವನೆಯೇ ಹುಟ್ಟುತ್ತದೆ."

"ನಿಶ್ಚಯ! ನಾನು ಕೆಟ್ಟವನಲ್ಲ ಮತ್ತೂ ಕುಲೀನ ಹಿಂದೂ ಸ್ತ್ರೀಯರ ಉತ್ತಮ ಗುಣಗಳನ್ನು ನಾನು ಚೆನ್ನಾಗಿ ಬಲ್ಲೆ. ಶ್ರೀರಾಮನ ಶೌರ್ಯಕ್ಕೆ ಮೆಚ್ಚಿ, ಸೀತಾದೇವಿ ವರಿಸಿದಂತೆ, ನೀನೂ ನೀನಾಗಿ ಒಲಿದು ನನ್ನ ಕೊರಳಿಗೆ ಮಾಲೆಹಾಕುವ ವರೆಗೂ ನಾನು ಕಾದಿರುತ್ತೇನೆ."

ಬಾಲಿಕೆಯ ಮುಖವರಳಿತು. ದೇವರು ಅನುಕೂಲನಾಗಿರುವಂತೆ ತೋರುತ್ತಿದೆ. ಅವಳು ಜಡೆಯನ್ನು ಹಿಂದಕ್ಕೆ ಬಿಸುಟು, ಎರಳೆಗಂಗಳನ್ನು ಅಗಲವಾಗಿ ತೆರೆದು, ಖಾನನನ್ನು ನೋಡುತ್ತ, "ಏನೇನು? ವಿಧರ್ಮೀಯರಾದ ನಿಮಗೂ, ನಮ್ಮ ರಾಮಾಯಣಕ್ಕೂ ಸಂಬಂಧವೇನು?"

"ಓಹೊ! ನಾನು ನಿಮ್ಮ ರಾಮಾಯಣವನ್ನು ಓದಲಿಲ್ಲವೆಂದು ತಿಳಿದಿರುವಿಯಾ? ಅಯೋಧ್ಯಾಕಾಂಡದವರೆಗಿನ ಒಂದು ಗ್ರಂಥವು ನನ್ನ ಬಳಿಯಲ್ಲೇ ಉಂಟು. ಉಳಿದುದನ್ನು ಓದಿಸಿ ಕೇಳಿದ್ದೇನೆ. ಆಹಾ! ಆ ಸೀತೆ—"

ಅವನನ್ನು ಮುಂದೆ ಮಾತಾಡಗೊಡದೆ ಬಾಲಿಕೆಯೆಂದಳು: "ಓಹೊ! ಅರ್ಧ ಗ್ರಂಥವೆ? ಅರ್ಧ ಗ್ರಂಥವಾಗಿರಲು ಕಾರಣವೇನೊ?" ಆಗ ಅವಳ ತಾಯಿ ಆಗಾಗ ಹೇಳುತ್ತಿದ್ದ 'ಮಗು, ನಿನ್ನ ಅಜ್ಜಿ ಬರೆದ ಅಯೋಧ್ಯಾಕಾಂಡದವರೆಗಿನ ರಾಮಯಣ ಗ್ರಂಥವು ಎಲ್ಲಿಯೋ ಅಡಗಿದೆ. ಹುಡುಕಬೇಕು' ಎಂಬ ಮಾತು ನೆನಪಿಗೆ ಬಂದಿತು.

"ಅದೊಂದು ಹಳೆಯ ಗ್ರಂಥ. ಉದಯಗಿರಿಯ ಪ್ರಾಂತದಿಂದ ಹೇಗೋ ಇಲ್ಲಿಗೆ ಬಂದಿದೆ."

"ಹೌದೆ? ನನಗೆ ರಾಮಾಯಣವೆಂದರೆ ಬಹಳ ಇಷ್ಟ. ನಾನು ಅದಕ್ಕೆ ಉಳಿದ ಕಾಂಡಗಳನ್ನು ಬರೆದು ಸೇರಿಸಿ ಸಂಪೂರ್ಣ ಪಡಿಸಬೇಕೆಂದು ಆಶಿಸುತ್ತೇನೆ."

"ಒಳ್ಳೇದೇ. ಅದಿನ್ನು ನಿನ್ನದೆಂದೇ ತಿಳಿ. ಅದನ್ನು ಯಾರೊ ಸುಭದ್ರಾದೇವಿ ಎಂಬ ಹಿಂದೂ ಹೆಂಗಸೇ ಬರೆದಿರುವ ಹಾಗೆ ಅದರಲ್ಲಿ ಹೆಸರುಂಟು. ಹೆಂಗಸು ಬರೆದ ಗ್ರಂಥವನ್ನು ಹೆಂಗಸೇ ಪೂರ್ತಿ ಮಾಡಿದರೆ ತುಂಬಾ ಹೊಂದಿಕೆಯಾದ ಹಾಗಾಯಿತಲ್ಲ!"

"ಸರಿ. ಅದನ್ನು ನನಗೆ ಈಗಲೇ ಕೊಡುವಿರಾ ?"

"ಓ! ಈಗಲೇ !"

ಖಾನನು ಇವಳಿಗೆ ಪುಸ್ತಕವಾಚನದಲ್ಲಿ ತುಂಬಾ ಕುತೂಹಲ ವಿರಬೇಕೆಂದು ಭಾವಿಸಿ, ಎದ್ದು ಹೊರಗೆ ಹೋಗಿ ಆ ಗ್ರಂಥವನ್ನು ತರುವಂತೆ ಸೇವಕನಿಗೆ ಆಜ್ಞೆ ಮಾಡಿ, ಮತ್ತೆ ಒಳಗೆ ಬಂದು ಕುಳಿತು "ಅದಿರಲಿ ಪ್ರಿಯಮುಕ್ತಾ, ನನ್ನನ್ನು ವರಿಸಲು ಸಮ್ಮತಿಸಿದೆನೆಂದು ನೀನು ಹೇಳಲೇ ಇಲ್ಲವಲ್ಲ ?"

ಇದನ್ನೇ ಕಾಯುತ್ತಿದ್ದ ಆ ಬಾಲೆ " ನಾನು ನಿಮ್ಮನ್ನು ಸೀತಾ ದೇವಿಯ ಹಾಗೆ ವರಿಸಬೇಕೆಂದು ಈಗ ನೀವೇ ಹೇಳಿದಿರಲ್ಲ ? ಶ್ರೀರಾಮನು ಶೌರ್ಯಪ್ರದರ್ಶನದಿಂದ ಸೀತಾದೇವಿಯನ್ನು ವರಿಸಿದ ನೆಂದೂ ನಿಮಗೆ ಗೊತ್ತಿದ್ದೀತು ?"

"ಹೌದು."

"ನೀವು ಶ್ರೀರಾಮನಂತೆ ವರ್ತಿಸಿದ್ದೀರಾ ? ಇನ್ನೊಬ್ಬರ ಮೂಲಕವಾಗಿ ಕಳ್ಳತನದಿಂದ ನನ್ನನ್ನು ತರಿಸಿದ್ದೀರಿ, ಬಂಧಿಸಿದ್ದೀರಿ. ಇದು ನಿಮ್ಮ ಶೌರ್ಯವೆಂದು ನೀವು ಹೇಳುವಿರಾ ?"

ಖಾನನು ತುಸು ಅಪ್ರತಿಭನಾದನು. ಅದನ್ನು ಮುಚ್ಚಿಟ್ಟು ಕೊಂಡು ಗೆಲುವಿನ ನಗುವನ್ನು ನಕ್ಕು "ಓಹೊ! ಕೇಳು. ಮುಸ ಲ್ಮಾನರು ನ್ಯಾಯರೀತಿಯಾಗಿ ಕೇಳಿದರೆ, ಹಿಂದೂ ಕನ್ಯೆ ಸಿಕ್ಕಲಾರ ಳೆಂದು ಭಾವಿಸಿ, ಕಾರ್ಯಸಾಧನೆಗಾಗಿ ಸ್ವಲ್ಪ ವಂಚನೆ ಮಾಡಬೇಕಾ ಯಿತೇ ಹೊರತು, ಅದು ಹೇಡಿತನವಲ್ಲ. ನೀನೊಮ್ಮೆ ಒಪ್ಪಿರುವೆ ನೆಂದು ಬಿಡು. ಒಡನೆಯೇ ನಿನ್ನ ತಂದೆಯಾದ ವೀರರುದ್ರ ಗಜಪತಿ ಯನ್ನೂ ನಿನ್ನ ತಾಯಿಯನ್ನೂ ಕರೆಕಳುಹಿಸಿ, ಅವರ ಅನುಮತಿ ಯಿಂದಲೇ ನಿನ್ನನ್ನು ಮದುವೆ ಮಾಡಿಕೊಳ್ಳುವೆನೆಂದು ನಂಬು. ಸೀತಾ ದೇವಿಯಂತೆ ನೀನೂ ನನ್ನ ಶೌರ್ಯವನ್ನು ಪರೀಕ್ಷಿಸಬೇಕೆಂದಿ ರುವಿಯಾ ?"

ಬಾಲೆ ಗಂಭೀರಭಾವದಿಂದ "ಹೌದು. ಖಾನ್‌ಸಾಹೇಬರೆ !

ನೀವನ್ನುವಂತೆ ನಾನು ಮುಕ್ತಾಕುಮಾರಿಯೇ ಆಗಿರುವೆನು ! ವೀರರುದ್ರ ಗಜಪತಿ ನಂದಿನಿಯೇ ಆಗಿರುವೆನು. ವೀರಕ್ಷತ್ರಿಯ ಕುಮಾರಿ ನಾನು. ನಿಮ್ಮಂತಹ ಹೇಡಿಗಳನ್ನೆಂದಿಗೂ ವರಿಸುವವಳಲ್ಲ. ಹಿಂದೂವಾಗಲೀ ಮುಸಲ್ಮಾನನಾಗಲೀ ನಾನು ವೀರಪುರುಷನನ್ನೇ ವರಿಸುವವಳಲ್ಲದೆ ಹೇಡಿಯನ್ನಲ್ಲ. ನೀವು ಹೇಡಿಗಳು! ಮೋಸಗಾರರು ! ಸರಳವೀರರಿಗೆ ನೀವು ಸಮಾನರಲ್ಲ!" ಎಂದು ನುಡಿದಳು.

ಮಾಲೂಖಾನನ ಮುಖದಲ್ಲಿ ನಿಜಾಭಿಮಾನದ ಆವೇಗದಿಂದ ಒಮ್ಮೆಲೆ ಕೋಪದ ಕೆಂಪೇರಿ ಒಮ್ಮೆಲೆ ಇಳಿದೂ ಹೋಯಿತು.

"ಏನಂದಿ? ಮುಕ್ತಾ! ಭೇಷ್! ಭೇಷ್! ಈ ಮಾತನ್ನು ನೀನಲ್ಲದೆ ಬೇರೆ ಯಾರಾದರೂ ಹೇಳಿರುತ್ತಿದ್ದರೆ ಆಗಲೇ ತಕ್ಕ ಫಲವನ್ನು ಅನು ಭವಿಸುತ್ತಿದ್ದರು. ನೀನಿನ್ನೂ ಮುಗ್ಧಬಾಲೆ!"

ಹುಡುಗಿ ಅದೇ ತೀವ್ರ ಸ್ವರದಿಂದ "ನಾನು ಮುಗ್ಧಬಾಲೆ ಯಾದರೂ ನನ್ನ ಮಾತುಗಳು ವೀರಪ್ರೌಢೆಯ ಕೂರಂಬುಗಳಂತೆ ನಿಮ್ಮ ಮನಸ್ಸಿಗೆ ತಾಗುವುದೇ? ಖಾನ್‌ಸಾಹೇಬರೇ, ಕೇಳಿರಿ ಚೆನ್ನಾಗಿ! ನಿಮ್ಮನ್ನು ಹಿಂದೂ ಕನ್ಯೆಯಾದ ನಾನು ವರಿಸಬೇಕಾದರೆ, ವೀರ ಕ್ಷಾತ್ರ ಕುಮಾರಿಯಾದ ನನ್ನನ್ನು, ಗಜರಾಜ ನಂದಿನಿಯಾದ ನನ್ನನ್ನು ನ್ಯಾಯ ರೀತ್ಯಾ ನೀವು ವರಿಸಿಕೊಳ್ಳಬೇಕಾದರೆ ನನ್ನನ್ನು ಮೋಸದಿಂದ ಅಪಹಾರ ಮಾಡಿಸಿದ ನಿಮ್ಮ ಹೇಡಿತನದ ಕಳಂಕವನ್ನು ಕಳೆದು ಕೊಂಡು, ನಿಮ್ಮ ನಿಜಶೌರ್ಯವನ್ನು ನನಗೆ ತೋರಿಸಿರಿ. ಹಿಂದೂ ವೀರರಿಗೆ ಸರಿಸಮರಾದ ವೀರರು ನಿಮ್ಮಲ್ಲಿಯೂ ಇರುವರೆಂಬುದನ್ನು ನನಗೆ ತೋರಿಸಿಕೊಡಿರಿ. ಒಬ್ಬ ಹಿಂದೂ ವೀರನೊಡನೆ ದ್ವಂದ್ವ ಯುದ್ಧವನ್ನು ಮಾಡಿ ನಿಮ್ಮ ನಿಜಪರಾಕ್ರಮವನ್ನು ನನಗೆ ತೋರಿಸಿರಿ. ಆಗಲೇ ನಾನು ನಿಮ್ಮನ್ನು ವರಿಸಿಯೇನು. ಖಾನ್‌ಸಾಹೇಬರೆ, ನಾನು ಶೌರ್ಯಶುಲ್ಕ ವಧು !" ಎಂದು ನುಡಿದಳು.

"ಭಲೇ ಭೇಷ್ ! ವೀರ ಬಾಲೆ! ಮೆಚ್ಚಿದೆನು ಮೆಚ್ಚಿದೆನು ! ನನ್ನ ಶೌರ್ಯ ಪ್ರತಾಪವನ್ನು ನಿನ್ನ ಕಣ್ಮುಂದೆ ತೋರಿಸಿಯೇ ನಿನ್ನ ಪ್ರಾಣಿಗ್ರಹಣ ಮಾಡುವೆನು."

"ಇಲ್ಲದಿದ್ದರೆ?"

"ಇಲ್ಲದಿದ್ದರೆ ನಿನ್ನ ಇಚ್ಛಾನುಸಾರವಾಗಿ ನಿನ್ನನ್ನು ಬಿಟ್ಟು ಬಿಡುವೆನು."

"ಮರೆಯದಿರಿ ಈ ಮಾತನ್ನು, ಖಾನ್‌ಸಾಹೇಬರೆ, ಈ ಅದೃಷ್ಟ ಪರೀಕ್ಷೆಯಲ್ಲಿ ನನ್ನ ಪತಿ ಯಾರೆಂಬುದು ನಿಶ್ಚಯವಾದೀತು. ಹಿಂದೆ ಸೀತಾ, ದ್ರೌಪದಿ ಮೊದಲಾದ ವೀರಕನ್ಯೆಯರ ವಿವಾಹವೂ ಇಂತಹ ಪರೀಕ್ಷಾರಂಗದಲ್ಲಿಯೇ ನಿಶ್ಚಯವಾಗಿತ್ತು!"

"ಹೌದು, ನಿಜ. ನೀನು ನಿಶ್ಚಿಂತಳಾಗಿರು. ನಾನು ಈಗಲೇ ಪ್ರಸಿದ್ಧ ಹಿಂದೂ ಮಲ್ಲರನ್ನು ಬರಗೊಳಿಸಲು ಡಂಗುರ ಸಾರಿಸುವೆನು. ಬಂದ ವೀರರಲ್ಲಿ ಯಾರು ಮಹಾ ಬಲಿಷ್ಠನೋ ಅವನೊಂದಿಗೇ ಯುದ್ಧಕ್ಕೆ ನಿಲ್ಲುವೆನು" ಎಂದು ಎದ್ದನು ಮಾಲೂಖಾನ್. ಸೇವಕನು ತಂದುಕೊಟ್ಟ ಆ ರಾಮಾಯಣ ಗ್ರಂಥವನ್ನು ಆ ಬಾಲೆಗೆ ಕೊಟ್ಟು ಮಾಲೂಖಾನನು ಹೊರಟು ಹೋದನು.

"ವೀರತ್ವದ ಪರೀಕ್ಷೆಗೆ ತಕ್ಕ ಹಿಂದೂ ವೀರರು ರಾಯಚೂರು ಆಸ್ಥಾನಕ್ಕೆ ಬರಲಿ!" ಎಂದು ರಾಯಚೂರಿನ ಸುತ್ತುಮುತ್ತಣ ಊರಿನೊಳಗೆಲ್ಲಾ ಡಂಗುರ ಸಾರಲ್ಪಟ್ಟಿತು. ಇದನ್ನು ಕೇಳಿದ ದೊಡ್ಡ ದೊಡ್ಡ ಹಿಂದೂ ಜಟ್ಟಿಗಳು ರಾಯಚೂರಿನ ಆಸ್ಥಾನಕ್ಕೆ ಬಂದು ಸೇರುತ್ತಿದ್ದರು.

ಸುಮಾರು ಮಧ್ಯಾಹ್ನದ ವೇಳೆಯಲ್ಲಿ ರಾಮರಾಜನು ಉತ್ತಮೋತ್ತಮವಾದ ವೇಷಭೂಷಣಗಳನ್ನು ಧರಿಸಿಕೊಂಡು ದುರ್ಗ ಮಂದಿರಕ್ಕೆ ಬಂದು, ಮಾಲೂಖಾನನ ಇದಿರಿನಲ್ಲಿ ಸಡ್ಡುಹೊಡೆದು ನಿಂತು,— "ವ್ಯರ್ಥವಾಗಿ ಆಡಂಬರದಿಂದ ಡಂಗುರ ಸಾರಿಸುವಿರೇಕೆ? ಯಾರಿಲ್ಲಿ ಅಂಥಾ ವೀರರು! ಇದಿಗೊ! ಜಗಜಟ್ಟಿ ಜಯರಾಮನೆಂಬ ನಾನು! ನನಗೆ ಸಿಕ್ಕಿದ ವಿಜಯ ಪತ್ರಗಳನ್ನು ನೋಡಿರಿ" ಎಂದು ಕೆಲವು ಪತ್ರಗಳನ್ನು ತೋರಿಸಿ, "ಏನು ಹೇಳುವಿರಿ? ನನ್ನೊಡನೆ ಕಾದುವ ವೀರರಿದ್ದರೆ ಬರಲಿ ಮುಂದೆ" ಎಂದು ಅಬ್ಬರಿಸಿದನು.

ಈ ಕೆದರು ನುಡಿಗಳಿಂದ ಕುಪಿತನಾದ ಮಾಲೂಖಾನನು "ಎಲೈ

ಮದಾಂಧ, ಸರಿಯಾದ ಸಮಯಕ್ಕೇ ಬಂದಿದ್ದೀ. ನಿನ್ನ ಮುಂದೆ ನಾನೇ ನಿಲ್ಲುವೆನು. ನಾಳೆಯ ತನಕ ಸ್ವಲ್ಪ ಸೈರಿಸು" ಎಂದು ಆತನನ್ನು ತಕ್ಕ ವಸತಿಗೆ ಕಳುಹಿಸಿ ಕೊಟ್ಟನು.

ಈ ಸಮಾಚಾರವನ್ನು ಕೇಳಿದ ಬಾಲರಾಣಿ "ಓಹೊ, ಜಯರಾಮ ಜಟ್ಟಿಯೆ! ಕೇಳಿಬಲ್ಲೆ. ಅವನನ್ನು ಸೋಲಿಸಿದವರು ಮಹಾ ವೀರರೇ ಸರಿ!" ಎಂದಳು.

೧೬

ರಾಯಚೂರು ನಗರದ ಮಧ್ಯದಲ್ಲೊಂದು ವಿಶಾಲವಾದ ಮೈದಾನದಲ್ಲಿ ವೀರಾಗ್ರೇಸರರಾದ ಮಾಲೂಖಾನ-ಜಯರಾಮರ ದ್ವಂದ್ವ ಯುದ್ಧ ಕೌಶಲವನ್ನು ನೋಡುವ ಕುತೂಹಲದಿಂದ ಸಾವಿರಾರು ಜನರು ಬಂದು ಬಂದು ಸೇರುತ್ತಿದ್ದರು. ಅನೇಕ ಮಂದಿ ಹಿಂದೂ ಮುಸಲ್ಮಾನ ಜಟ್ಟಿಗಳೂ ನೋಟಕರಾಗಿ ಓರಣಿಸಿಕೊಂಡು ನಿಂತಿದ್ದರು. ಆ ಮಹಾ ರಂಗಕ್ಕೆ ಅಭಿಮುಖವಾಗಿ ಸುಂದರವಾದೊಂದು ಮಂಟಪದಲ್ಲಿ ದಾಸೀ ವೃಂದದ ಮಧ್ಯದಲ್ಲಿ ವೀರಬಾಲೆ ಯುದ್ಧ ಪರೀಕ್ಷಣಾಧ್ಯಕ್ಷಿಣಿಯಾಗಿ ಮಂಡಿಸಿದ್ದಳು. ಕೆಳಗಡೆ ಸುತ್ತಲೂ ದಿಂಬುಗಳಿಗೆ ಒರಗಿಯೂ, ಕುಳಿತೂ, ನಿಂತೂ, ದೊಡ್ಡ ದೊಡ್ಡ ಅಧಿಕಾರಿಗಳೂ, ಉದ್ಯೋಗಿಗಳೂ, ಸಿರಿಗರೂ, ಬಡವರೂ ಮೊದಲಾದ ಹಿಂದೂ ಮುಸಲ್ಮಾನರೆಲ್ಲರೂ ಕಲೆತಿದ್ದರು. ತೋಪಲ್‌ಖಾನನು ಎದ್ದು ನಿಂತು ಉಚ್ಚಸ್ವರದಿಂದ,

"ಪ್ರಿಯ ಮಹಾಜನರೆ, ಈಗ ಜರುಗಲಿರುವ ಈ ಕಾಳಗವು ಮುಸಲ್ಮಾನರ ಶೌರ್ಯವನ್ನು ನೆಲೆಗೊಳಿಸುವಂತಹುದಾಗಿರುತ್ತದೆ. ಗರ್ವೋನ್ಮತ್ತನಾದ ಈ ಜಯರಾಮನೆಂಬ ಜಟ್ಟಿ ನಮ್ಮ ಶೌರ್ಯ ವನ್ನು ಹಳಿದು ಕದನ ಕೆದರಿದ್ದಾನೆ. ಇವನ ಸೊಕ್ಕನ್ನು ಮುರಿಯಲು ನಮ್ಮ ಷಹಾಜಾದಾ ವೀರ ಮಾಲೂಖಾನರೇ ಸಡ್ಡುಹೊಡೆದು ಸಿದ್ಧರಾಗಿ ನಿಂತಿದ್ದಾರೆ. ಅವರು ವಿಜಯಶಾಲಿಗಳಾಗಿ ಮುಸಲ್ಮಾನರ ವೀರ

ಧ್ವಜವನ್ನು ನೆಲೆನಾಟಿಸುವಂತೆ ಖುದಾನನ್ನು ಕುರಿತು ಪ್ರಾರ್ಥಿಸೋಣ" ಎಂದನು.

"ಷಹಾಜಾದಾ ಮಾಲೂಖಾನ್ ಕೀ ಜಯ್" ಎಂದು ನೆರೆದ ಸಮೂಹದಿಂದ ಮಾರ್ದನಿಯೆದ್ದಿತು.

ಆಮೇಲೆ ಉಭಯ ವೀರರೂ ಪುಟಚೆಂಡುಗಳಂತೆ ಹಾರಿಕೊಂಡು ಬಂದು ರಂಗಮಧ್ಯದಲ್ಲೆಸೆದು ನಿಂತರು. ಇಬ್ಬರೂ ಮಹಾಗಾತ್ರರು ; ಮದೋನ್ಮತ್ತರು ; ಮದಗಜದಂತಹರು ; ಕದಲುವ ಬೆಟ್ಟಗಳಂತಹರು; ಸರಿಯಾದ ಜೋಡಿಗಳು. ಮಲ್ಲಚಡ್ಡಿಗಳನ್ನು ಹಾಕಿಕೊಂಡು, ಸಿದ್ಧರಾಗಿ ನಿಂತ ಆ ಜಗಜಟ್ಟಿಗಳ, ಬೆಟ್ಟದ ಕಲ್ಲತಪ್ಪಲಿನಂತಹ ಅಗಲುಬ್ಬೆದೆ, ಉಕ್ಕಿನ ತುಂಡುಗಳಂತಹ ಕೈಕಾಲುಗಳು, ಗುಂಡುಕಲ್ಲುಗಳಂತೆ ಉಬ್ಬಿದ ಮಾಂಸಖಂಡಗಳು, ಮೊದಲಾದ ಮೈಮಾಟ ನೋಟಗಳಿಂದ ಪ್ರೇಕ್ಷಕರು ಬಹಳ ಕೌತುಕಗೊಳ್ಳುವಂತಾಯಿತು.

ತನ್ನ ಭವಿಷ್ಯವನ್ನು ಉತ್ತಮಗೊಳಿಸುವಂತೆ ಬಾಲರಾಣಿ ಮನಸಾ ಜಗದಂಬೆಯನ್ನು ಪ್ರಾರ್ಥಿಸಿದಳು.

ಸಿದ್ಧರಾದ ವೀರರಿಬ್ಬರೂ ಮುಂದೆ ಮುಂದೆ ಬಂದು, ಪರಸ್ಪರ ಕೈಗಳನ್ನು ಹಿಡಿದು ಭುಜಗಳನ್ನು ಕುಲುಕಿ ವೀರವಂದನೆ ಮಾಡಿಕೊಂಡು ಪುನಃ ಹಿಂದೆ ಹಿಂದೆ ಸರಿದರು. ಮಾಲೂಖಾನನ ದೃಷ್ಟಿಯೊಮ್ಮೆ ಆ ವೀರಬಾಲೆಯ ಮುಖವನ್ನು ಗೆಲುವಿನಿಂದ ನೋಡಿತು. ಹಾಗೆಯೇ ರಾಮರಾಜನೂ ಅವಳ ಮೇಲೊಂದು ರಹಸ್ಯವಾದ ಅಭಯ ಕಟಾಕ್ಷವನ್ನು ಕಳುಹಿಸಿದನು.

ಬಳಿಕ ವೀರರಿಬ್ಬರೂ ಇಷ್ಟದೈವವನ್ನು ಸ್ಮರಿಸಿಕೊಂಡು, ತೊಡೆಗಳನ್ನು ತಟ್ಟಿ ಭುಜಗಳನ್ನು ಚೊಟ್ಟಿ ಒಬ್ಬರನ್ನೊಬ್ಬರು ತಾಗಿದರು. ಕೈಕೈ ಕಲೆತರು. ಮೊದಲು ಬೇಟೆಯ ಮೇಲೆ ಬೀಳ ಬರುವ ಹುಲಿಗಳ ಹಾಗೆ ಹೊಂಚಿದರು. ಬಳಿಕ ಬಟ್ಟ ಬಟ್ಟವಾಗಿ ಸುತ್ತಿದರು. ಹಿಡಿಯುವೆನು, ಹಿಡಿಯುವೆನು ಎನ್ನುವಂತೆ ತಿರುಗಿದರು. ಸುಳಿಗಾಳಿಯಂತೆ ಸುಳಿದುಕೊಂಡು ಬಂದು, ಕವಕ್ಕನೆ ಒಬ್ಬರ ಮೇಲೊಬ್ಬರು ಹಾರಿ

ಬಿದ್ದರು. ಹಿಡಿದೊತ್ತಿದರು. ಒತ್ತಿ ಕುಲುಕಿದರು, ಕುಲುಕಿ ಕೆಡವಲೆತ್ನಿಸಿದರು. ಆಗ ಒಬ್ಬರಿಂದೊಬ್ಬರು ದೂಡಲ್ಪಟ್ಟು ಹಿಂದಕ್ಕೆ ಹಾರಿ, ಮಹಾ ಪರ್ವತಗಳಂತೆ, ಮಹಾ ಮೇಘಗಳಂತೆ ಒಮ್ಮೆಗೇ ಓಡಿಬಂದು ತಾಗಿದರು. ಚೆಂಡು ಚೆಂಡಿಗೆ ತಾಗಿ ಹಾರಿಹೋದಂತೆ ಸಿಡಿದುಹೋದರು. ವೀರನಾಟ್ಯದಿಂದ ಅಟ್ಟಹಾಸಮಾಡಿ ಪುನಃ ಕಲೆತು, ಅಮುಕಿ, ಅಲುಗಿಸಿ, ಮರ್ಮ ಮರ್ಮಗಳನ್ನು ಹಿಡಿದು, ಹಿಡಿಯಲೆತ್ನಿಸಿ, ಖಂಡ ಖಂಡಗಳ ಮೇಲೆ ಮುಷ್ಟಿಪ್ರಹಾರ ಮಾಡಿ, ಹೆಬ್ಬಾವುಗಳ ಜಗಳದಂತೆ ಕಾಲೆಡೆಗೆ ಕಾಲು, ಕೈಯೆಡೆಗೆ ಕೈ ಸಿಗಿಸಿಯೂ, ಕೊರಳುಗಳನ್ನು ಕಂಕುಳುಗಳಿಂದ ಅಮುಕಿ ಚಕ್ರದಂತೆ ತಿರುಗಿದಾಗ ಶುಂಠಿಗಳು ಜೋಡಿದಂತೆ ಪಿಜುಂಟೆ ಕಾಣಿಸಿದರು. ಅಡಿಗಡಿಗೆ ಏಳುವ ಆ ವೀರರ ಹುಂಕಾರಗಳೂ, ಭುಜಾಸ್ಫಾಲನೋದ್ಭೂತ ಛಟಛಟಾತ್ಕಾರವೂ, ವಜ್ರಮುಷ್ಟಿ ಪ್ರಹಾರಗಳ ದುಂಧುಂ ಶಬ್ದವೂ ಭಯಂಕರವಾದುವು. ನೆಲದಿಂದ ಧೂಳೀಪಟಲವೆದ್ದು, ಆ ಸುಳಿಯೊಳಗೆ ಆ ವೀರರು ಸುಳಿದರು. ಹೀಗೆ ಹೋರಾಹೋರಿಯಾಗಿ ಘೋರವಾಗಿ ಅವರು ದ್ವಂದ್ವಯುದ್ಧ ಮಾಡುತ್ತಿರುವಾಗ ನೋಟಕರು ಅಡಿಗಡಿಗೆ ಕೈಪರೆಗುಟ್ಟಿದರು. 'ಭಲೇ ಭಲೇ' 'ಶಾಬಾಸ್!' 'ಭಪ್ಪರೇ ಮಾಲೂಖಾನ್!' 'ಭಪ್ಪರೇ ಜಗದೇಕಮಲ್ಲ!' 'ಜಗಜಟ್ಟಿ ಜಯರಾಮಾ! ಶಾಭಾಸ್!' ಎಂದು ಮುಂತಾಗಿ ಹರ್ಷೋದ್ಗಾರಗಳನ್ನು ಹಾರಿಸಿದರು.

ಹೀಗೆ ಒಂದು ಗಂಟೆಯವರೆಗೆ ಇಬ್ಬರೂ ಸಮಾನ ಬಲಶಾಲಿಗಳಾಗಿ ಕಾದಿದರು. ವೀರ ಮಾಲೂಖಾನನು ಎರಡು ಮೂರು ಸಾರಿ ರಾಮರಾಜನನ್ನು ಎತ್ತೆತ್ತಿ ಬಿಸುಟನು. ರಾಮರಾಜನು ಕಂಬದಂತೆ ನೆಟ್ಟಗೆಯೇ ನಿಂತು ನಿಂತು, ಮಾಲೂಖಾನನನ್ನು ಹಾಗೆಯೇ ಎಸೆದನು! ಅವನೂ ಮಹಾಬಲನೇ. ಈ ಬಾರಿ ಜಯರಾಮನ ಗಟ್ಟಿಕ್ಕುಳದಂತಹ ಹಿಡಿತವನ್ನು ತಪ್ಪಿಸಲು, ಮಾಲೂಖಾನನು ತನ್ನ ಪೂರ್ಣಬಲವನ್ನು ಉಪಯೋಗಿಸುತ್ತಿದ್ದನು. ರಾಮರಾಜನು ಅವನನ್ನು ನೆಲಕ್ಕೆ ಒತ್ತುತ್ತಲೇ ಇದ್ದರೂ, ಮಾಲೂಖಾನನಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಇನ್ನೇನು ಮಾಲೂಖಾನನು ಬಿದ್ದ ಬಿದ್ದನೆಂದು ಜನರು ಹಾಹಾ

ಕಾರ ಮಾಡುವುದರೊಳಗೆ ವಿಪರೀತವಾಗಿ ಹೋಯಿತು. ಬಿದ್ದವನು ಜಯರಾಮ! ಜಯರಾಮಜಟ್ಟಿ 'ಆ' ಎಂದು ಕೂಗಿ ಬಿದ್ದುಬಿಟ್ಟನು. ಮಾಲೂಖಾನನು ಹಾರಿ ದೃಢವಾಗಿಯೇ ನಿಂತಿದ್ದನು. ಆದರೂ ಆತನು ವಿಜಯಶಾಲೀತನದ ಸಿಂಹನಾದವನ್ನು ಮಾಡಲಿಲ್ಲ! ಭುಜಗಳನ್ನು ತಟ್ಟಿಕೊಳ್ಳಲಿಲ್ಲ. ವಿಜಯಾನಂದವಾವುದೂ ಅವನಿಂದ ಸೂಚನೆಯಾಗಲಿಲ್ಲ. ಏಕೆ? ಕಾರಣ?

ಅಸಂಭವವಾದ ಆ ಸಂಭವದಿಂದ ನೋಟಕರೆಲ್ಲಾ ಕೆಲವು ಕ್ಷಣ ಸ್ತಬ್ಧರೇ ಆದರು. ಬಳಿಕ ತೋಪಲ್‌ಖಾನನು 'ಷಹಾಜಾದಾ ಮಾಲೂಖಾನ್-ಕೀ-ಜೈ!' ಎಂದು ಕೂಗಿದನು. ಬಳಿಕ ಭೂನಭೋಂತರಾಳವು ಗದಗದಿಸುವಂತೆ ಜಯಧ್ವನಿಯೆದ್ದಿತು. ಮಾಲೂಖಾನನಿಗೆ ಬೇಕು ಬೇಕಾದ ಹಾಗೆ ವಿಜಯೋಪಚಾರಗಳು ನಡೆಯುತ್ತಿದ್ದಾಗ, ಅತ್ತ ಬಾಲರಾಣಿ ವಜ್ರಾಘಾತವಾದವಳಂತೆ 'ದೈವಾಘಾತ!' ಎನ್ನುತ್ತಾ ಹಿಮ್ಮಾಲಿ ಮೈಮರೆತಳು.

ಎಲ್ಲರೂ ವಿಶೇಷವಾಗಿ ಜಯರಾಮಜಟ್ಟಿಯ ಯುದ್ಧ ಕೌಶಲವನ್ನು ಕುರಿತೇ ಬಣ್ಣಿಸಿಕೊಂಡು ಚದರಿ ಹೋಗುತ್ತಿದ್ದರು. ಮಾಲೂಖಾನನು ಜಯರಾಮನನ್ನು ಸೇವಕರಿಂದ ಕರೆದೊಯ್ಯಿಸಿ, ದುರ್ಗ ಮಂದಿರದ ಕೋಣೆಯೊಂದರಲ್ಲಿ ಮಲಗಿಸಿ, ತಕ್ಕ ಚಿಕಿತ್ಸೆಗೆ ಏರ್ಪಾಡು ಮಾಡಿದನು. ರಾಮರಾಜನ ಕಾಲಿಗೆ ಏನೋ ಘಾತವಾಗಿತ್ತು. ಕುಂಟುತ್ತಿದ್ದನು.

* * *

"ಪ್ರಿಯಮುಕ್ತಾ, ನೆಮ್ಮದಿಯಾಗಿರುವಿಯಾ?" ಮಾಲೂಖಾನನು ಮುಗುಳ್ನಗುತ್ತಾ ಬಾಲಿಕೆಯ ಇದುರಿಗೆ ಬಂದು ಕೇಳಿದನು.

ದಾಸಿಯರ ಕಾಲೋಚಿತವಾದ ಉಪಚಾರದಿಂದ ಬಾಲೆ ಈಗ ನೆಮ್ಮದಿಯಾಗಿಯೇ ಇದ್ದಳು. "ನಾನು ನೆಮ್ಮದಿಗೆಟ್ಟಿರುವೆನೆಂದು ನಿಮಗೆ ಗೊತ್ತಿದ್ದೀತಲ್ಲವೇ ಖಾನ್ ಸಾಹೇಬರೆ?" ಎಂದು ಮರು ಪ್ರಶ್ನೆಯನ್ನೇ ಹಾಕಿದಳು.

"ಗೊತ್ತಿಲ್ಲದೇನು? ನಾನು ಗೆದ್ದದ್ದು ಹಿಂದೂ ಕನ್ಯೆಯಾದ ನಿನಗೆ

ಇಷ್ಟವಿಲ್ಲ. ಅದು ಸ್ವಾಭಾವಿಕವೂ ಹೌದು. ಆದರೆ ಹಿಂದೂ ವೀರ ಕನ್ಯೆಯಾದ ನೀನು ಹೇಳಿದ ಮಾತಿಗೆ ತಪ್ಪಲಿಕ್ಕಿಲ್ಲವೆಂದು ನಂಬುತ್ತೇನೆ. ಸುಂದರಿ, ಇನ್ನು ನಮ್ಮ ಕಾಜಿಗಳನ್ನು ಬರಮಾಡಿ ನಮ್ಮ ಪ್ರಾಣಿ ಗ್ರಹಣ— ”

“ತಡೆಯಿರಿ ” ಬಾಲಿಕೆ ತಿರಸ್ಕಾರದ ನಗುವೊಂದನ್ನು ನಕ್ಕು, “ಪ್ರಾಣಿಗ್ರಹಣವೇ ಖಾನ್ ಸಾಹೇಬ್ ! ಸ್ವಲ್ಪ ತಾಳಿ ! ನನಗೆ ಒಮ್ಮೆ ನಿಮ್ಮ ಪ್ರತಿಸ್ಪರ್ಧಿಯಾದ ಜಯರಾಮಜಟ್ಟೆಯ ದರ್ಶನ ಮಾಡ ಬೇಕಾಗಿದೆ.”

“ಏಕೆ ? ಅದೇಕೆ ?” ಮಾಲೂಖಾನನ ಈ ಪ್ರಶ್ನೆಯಲ್ಲಿ ಸಂದೇ ಹದ ಕಂಪನವಿತ್ತು.

“ಬೇಕು. ನಿಮ್ಮ ಇದಿರೇ ಅದು ಗೊತ್ತಾಗುತ್ತದೆ.”

“ಕೂಡದು. ಅಷ್ಟು ಸ್ವತಂತ್ರವನ್ನು ನಾನು ನಿನಗೆ ಕೊಡ ಲಾರೆ.”

“ಕೊಡಲಾರಿರಾ ? ಕನ್ಯೆಯಾದ ನಾನು ಸ್ವತಂತ್ರಳಾಗಿಯೇ ಇದ್ದೇನೆ ! ನೀವು ನನ್ನ ಕೋರಿಕೆಯನ್ನು ಈಡೇರಿಸದಿದ್ದರೆ, ವೀರ ಕುಮಾರಿಯಾದ ನನ್ನೊಂದಿಗೇ ನೀವು ಯುದ್ಧಕ್ಕೆ ನಿಲ್ಲಬೇಕಾದೀತು !”

ಮಾಲೂಖಾನನು ಒಂದು ನಿಮಿಷ ಅವಳ ಮುಖವನ್ನು ನೋಡಿ “ಸರಿ. ನಡಿ ಹಾಗಾದರೆ !” ಎಂದನು.

ಇಬ್ಬರೂ ರಾಮರಾಜನು ಮಲಗಿದ್ದ ಕೋಣೆಯನ್ನು ಹೊಕ್ಕರು. ರಾಮರಾಜನ ಕಾಲಗಂಟೆಗೆ ಔಷಧಿಯ ಬಟ್ಟೆಯನ್ನು ಕಟ್ಟಿತ್ತು. ಅವನು ಮಂಚದ ಮೇಲೆ ಕುಳಿತಿದ್ದನು. ಮುಖವು ಚಿಂತಾಸಕ್ತ ವಾಗಿತ್ತು. ಬಾಲೆ ಅವನನ್ನು ಪರಿತಾಪಕರವಾದ ದೃಷ್ಟಿಯಿಂದ ನೋಡಿದಳು. ಅವನೂ ಹಾಗೆಯೇ ಅವಳನ್ನು ನೋಡಿದನು. ಮಾಲೂ ಖಾನನು ರಾಮರಾಜನನ್ನು ಶಂಕಭಾವದಿಂದ ನೋಡುತ್ತ “ಜಯ ರಾಂಜಿ, ಈಗ ಹೇಗಿದೆ ?” ಎಂದು ಕೇಳಿದನು.

“ಎಲ್ಲಾ ವಾಸಿಯಾಯಿತು. ಅಂತಹ ಪ್ರಮಾದವೇನಿಲ್ಲ !” ಎಂದನು ರಾಮರಾಜ.

"ವೀರ ಜಯರಾಂಜೀಯವರೆ, ನಾನೊಂದು ಮುಖ್ಯವಾದ ಗುಟ್ಟನ್ನು ತಿಳಿಯಲಿಕ್ಕಾಗಿ ಬಂದಿದ್ದೇನೆ. ತಾವು ಉತ್ತರ ಕೊಡಲು ಶಕ್ತರಾಗಿರುವಿರಾ?" ಎಂದು ಬಾಲೆ ಕೇಳಿದಳು.

"ಆಹಾ! ಬೇಕಾದರೆ ಈಗ ಪುನಃ ದ್ವಂದ್ವಯುದ್ಧಕ್ಕೂ ಸಿದ್ಧನಾದೇನು."

"ಅದಕ್ಕೇ ಕೇಳುತ್ತೇನೆ. ಇಂದು ನಡೆದ ಯುದ್ಧಕೇಳಿಯಲ್ಲಿ ತಾವು ಆಕಸ್ಮಿಕವಾಗಿ ಹಾಗೆ ಬೀಳಲು ಏನಾಯಿತು? ಹಾಗೆ ಬಿದ್ದು ಕಾಲಿಗೆ ಪೆಟ್ಟಾಯಿತೋ, ಅಲ್ಲ ಮೊದಲೇ ಕಾಲಿಗೆ ಪೆಟ್ಟಾಗಿದ್ದು ಹಾಗೆ ಬೀಳುವಂತಾಯಿತೊ?" ಬಾಲೆ ಕೇಳಿದಳು.

"ಇದನ್ನು ತಿಳಿದು ನಿನಗೇನಾಗಬೇಕಾಗಿದೆ?" ಎಂದು ರಾಮರಾಜನು ಕೇಳಿದನು.

"ನನಗಾಗಿಯೇ ಜರುಗಿದ ಯುದ್ಧವಿದು. ನಾನೇ ಯುದ್ಧ ಪರೀಕ್ಷಣಾಧ್ಯಕ್ಷಿಣಿ!" ಎಂದು ಹುಡುಗಿ ಸಂಕ್ಷೇಪವಾಗಿ ತಾನು ಶೌರ್ಯಶುಲ್ಕ ವಧುವಾಗಿರುವ ಬಗೆಯನ್ನು ಹೇಳಿದಳು.

"ಓಹೋ! ಹಾಗಾದರೆ, ನಿನ್ನ ಸೂಕ್ಷ್ಮಮತಿಯನ್ನು ಮೆಚ್ಚಲೇ ಬೇಕು. ನಾನು ಮೊನ್ನೆ ರಾತ್ರಿ ಒಂದಾನೊಂದು ಎತ್ತರಪ್ರದೇಶದಿಂದ ಕೆಳಕ್ಕೆ ಬಿದ್ದಿದ್ದೆ."

ಬಾಲೆ ಚಕಿತೆಯಾದಳು. ಆ ಸೌಧಾಗ್ರದಿಂದಲೇ ಬಿದ್ದಿರ ಬಹುದೇ? ಎಂದು ತೋರಿತು. ರಾಮರಾಜನು ಮುಂದುವರಿಸಿದನು: "ಆಗ ಈ ಕಾಲಿನ ಗಂಟು ಉಳುಕಿಹೋಯಿತು. ಅದೇನೂ ಅಷ್ಟು ಪ್ರಮಾದವಾಗಿ ತೋರದ್ದರಿಂದ ದ್ವಂದ್ವಯುದ್ಧಕ್ಕೆ ನಿಂತೆನು. ಆದರೆ ದೈವದುರ್ವಿಪಾಕದಿಂದ ಆಯತ ವೇಳೆಯಲ್ಲಿ, ಆ ಉಳುಕಿನ ಸ್ಥಳದಲ್ಲಿ ಕೀಲುಜಾರಿದಂತೆ ಅಸಹ್ಯವೇದನೆಯಾಗಿಬಿಟ್ಟಿತು. ನಾನು ಬಿದ್ದುಬಿಟ್ಟೆ. ನಿಜವಾದ ಸೋಲು ಗೆಲವು, ನಿಜವೀರರಾದ ಮಾಲೂಖಾನರಿಗೆ ಗೊತ್ತೇ ಇದ್ದೀತು."

ರಾಮರಾಜನ ಸತ್ಯ ಸರಳ ದೃಷ್ಟಿಯೊಂದಿಗೆ, ಬಾಲಿಕೆಯ ತೀಕ್ಷ್ಣ ದೃಷ್ಟಿಯೂ ಸೇರಿ, ಮಾಲೂಖಾನನ ಮುಖವನ್ನು ವೇಧಿ

ಸಿತು. ಅದರಿಂದ ಮಾಲೂಖಾನನು ಅಧೋವದನನಾದನು.

"ಖಾನ್‌ಸಾಹೇಬರೆ, ಈಗ ನಿಮ್ಮ ಹೃದಯದ ಮೇಲೆ ಕೈಯಿಟ್ಟುಕೊಂಡು ಹೇಳಿರಿ. ನಿಮ್ಮ ಆತ್ಮಸಾಕ್ಷಿ ಏನೆನ್ನುತ್ತಿದೆ?" ಎಂದಳು ಬಾಲೆ.

ಮಾಲೂಖಾನನು ಮೌನವಾಗಿರುವುದನ್ನು ನೋಡಿ, ಅವಳು ಗಂಭೀರಸ್ಖಲಿತವಾಣಿಯಿಂದ "ಹೇಳುವುದಿಲ್ಲವೆ? ನಿಮಗೆ ಆತ್ಮ ವಿಲ್ಲವೆ? ಇಲ್ಲದಿದ್ದರೆ ನಿಮ್ಮ ಆತ್ಮಸಾಕ್ಷಿಗೆ ವಿರೋಧವಾಗಿಯೇ ನೀವು ಸಾಧಿಸುವುದಾದರೆ ಈ ಪರೀಕ್ಷೆ ಪೂರ್ಣವಾದುದಲ್ಲ. ಈ ಆತ್ಮ ವಂಚನೆಯ ಪರೀಕ್ಷೆಗೆ ನಾನೆಂದೂ ಒಪ್ಪಲಾರೆನು. ಹಾಗಿದ್ದರೆ, ಬನ್ನಿರಿ, ನನಗೇ ಇದಿರಾಗಿರಿ. ಕಠಿನ ಪ್ರಸಂಗದಲ್ಲಿ ಪ್ರಾಣವನ್ನು ತೃಣಕ್ಕೆ ಸಮನಾಗಿ ಎಣಿಸುವ ವೀರಕ್ಷಾತ್ರಕುಮಾರಿ ನಾನು. ಕೊಡಿರಿ ನನ್ನ ಕೈಗೊಂದು ಕತ್ತಿ. ನಿಲ್ಲಿರಿ ನನ್ನ ಮುಂದೆ. ನಿಮ್ಮನ್ನು ವರಿಸುವ ಮಾತಂತೂ ಇನ್ನು ಹೋಗೇಹೋಯಿತು. ಈಗಿರುವುದು ಇದೊಂದೇ ದಾರಿ ನನಗೆ! ವಿಜಯವೊ! ಮರಣವೊ!" ಎಂದು ವೀರರಸದಿಂದ ಕೆಂಪುಕೆಂಪಾಗಿ ವಿಜೃಂಭಿಸಿದಳು.

ರಾಮರಾಜನು "ಶಾಭಾಸ್! ವೀರಕುಮಾರಿ, ಶಾಂತಳಾಗು! ಈ ಖಾನ್‌ಸಾಹೇಬರಿಗೆ ತಕ್ಕ ಪ್ರತಿಸ್ಪರ್ಧಿ ಇಲ್ಲಿ ಕಾದಿರುವಾಗ ನೀನೇ ಮುಂದೆ ಹಾರಿಬಿಡಬೇಡ. ಖಾನ್‌ಸಾಹೇಬರೇ, ಏನೆನ್ನುವಿರಿ? ಇನ್ನೊಮ್ಮೆ ನನಗೆ ಯುದ್ಧ ಪರೀಕ್ಷೆಯನ್ನು ಕೊಡಬೇಕಲ್ಲ?"

"ಬೇಡ ಬೇಡ"–ಮಾಲೂಖಾನನು ಗದ್ಗದಿತನಾಗಿ "ನಿಜ. ಒಪ್ಪಿಕೊಳ್ಳುವೆನು. ಸತ್ಯವಾಗಿಯೂ ಗೆದ್ದವನು ನಾನಲ್ಲ. ಬೀಳ ಲಿಕ್ಕಿದ್ದವನೇ ನಾನು. ಆದರೆ ಅಕಸ್ಮಾತ್ತಾಗಿ ನನ್ನ ಈ ವೀರ ಪ್ರತಿ ಸ್ಪರ್ಧಿ ತನ್ನಿಂತಾನೇ ಬಿದ್ದು ಬಿಟ್ಟದ್ದರಿಂದ, ಎಲ್ಲರೂ ನಾನೇ ಗೆದ್ದೆ ಎಂದು ಕೇಕೆಹಾಕಿಬಿಟ್ಟರು. ನಾನು ಅದಕ್ಕೆ ಪ್ರತಿಯಾಡದೆ ಸುಮ್ಮ ನಿರಬೇಕಾಯಿತು. ಮನ್ನಿಸಿರಿ" ಎಂದು ಕೈಮುಗಿದನು.

ಮಾಲೂಖಾನನು ಉತ್ತಮ ಗುಣಶಾಲಿಯೆಂಬುದಕ್ಕೆ ಇದೇ ಉದಾಹರಣೆಯಾಯಿತು. ಬಾಲಿಕೆಯ ಸತ್ಪ್ರೋತ್ತೇಜಕವಾದ

ಮಾತುಗಳ ತಾಡನೆಯಿಂದ, ಆತನ ಸತ್ಯಾತ್ಮವನ್ನು ಮುಸುಕಿಕೊಂಡಿದ್ದ ವಂಚನೆಯ ಪರದೆ ಪರ್ರನೆ ಹರಿದುಹೋಯಿತು.

ಬಾಲೆ ಸಮಾಧಾನ ಸೂಚಿತವಾದೊಂದು ನಿಟ್ಟುಸಿರುಬಿಟ್ಟು "ಹಾಗಾದರೆ ನೀವು........" ಎನ್ನುತ್ತಿರಲು ಒಡನೆಯೇ ಮಾಲೂಖಾನನು ಗದ್ಗದ ಸ್ವರದಿಂದ "ಹೌದು ತಂಗಿ, ಹೇಳಿದ ಮಾತಿಗೆ ನಾನು ತಪ್ಪಲಾರೆ, ಇಂದಿನಿಂದ ನೀನು ನನ್ನ ಹಿಂದೂ ಸಹೋದರಿ. ನಿನ್ನ ಇಷ್ಟದಂತೆಯೇ ನಡೆಯಿಸುವೆನು" ಎಂದನು.

"ಆ ! ನಿಜವೇ ಅಣ್ಣಾ ! ಆಹಾ ! ಇಂತಹ ಉತ್ತಮವಾದ ಗುಣಗಳಿರುವುದರಿಂದಲೇ ಮುಸಲ್ಮಾನರು ಕೂಡ ನಮ್ಮ ಸಹೋದರರಂತೆ ನಮ್ಮೊಂದಿಗಿರಲು ತಕ್ಕವರಾಗಿದ್ದಾರೆ!" ಎಂದಳು ಬಾಲೆ.

"ಹೌದು ತಂಗಿ! ನನ್ನ ಆತ್ಮವಂಚನೆಯ ಅಪವಾದವನ್ನು ಮನ್ನಿಸಿಬಿಡು" ಎನ್ನುತ್ತಾ ಮಾಲೂಖಾನನು ಬಾಲೆಯ ಮುಂದೆ ಮಂಡಿಯೂರಿದನು.

"ಆಹಾ ! ಇಂದು ನಾನು ಹೊಸ ಅಣ್ಣನನ್ನು ಪಡೆದೆನೆಂದು ತುಂಬಾ ಸಂತೋಷಪಡುತ್ತೇನೆ. ಇನ್ನು ನಾನು ಕ್ಷಮಿಸಲಿಕ್ಕೆ ಏನಿರುವುದಣ್ಣ ? ಏನೂ ಇಲ್ಲ!" ಎನ್ನುತ್ತಾ ಹುಡುಗಿ ಬಾಗಿ ಮಾಲೂಖಾನನ ಕೈಯನ್ನು ಹಿಡಿದಳು.

"ಎಂತಹ ಸುಂದರ ಸಹೋದರ ಸಮ್ಮೇಳನವಿದು !" ಎಂದು ರಾಮರಾಜನು ಉದಾತ್ತಭಾವದಿಂದ ಉದ್ಗರಿಸಿದನು.

"ಜಯರಾಂಜಿ, ನಿಮ್ಮ ಬಾಹುಬಲವು ನನಗೆ ಚೆನ್ನಾಗಿ ಅವಗತವಾಗಿದೆ. ಮನ್ನಿಸಿರಿ" ಎಂದು ಮಾಲೂಖಾನನು ಪ್ರಾರ್ಥಿಸುವುದರೊಳಗೆ, ಜಯರಾಮನು ಅವನ ಕೈಯನ್ನು ಹಿಡಿದು "ವೀರಬಂಧು! ಹೀಗೆನ್ನಬಾರದು. ನೀವು ನನಗೆ ಸರಿಯಾದ ಪ್ರತಿದ್ವಂದ್ವಿಗಳಾಗಿರುತ್ತೀರಿ. ನಿಮ್ಮಲ್ಲಿ ಉತ್ತಮ ಗುಣವು ಅಡಗಿರುವುದರಿಂದಲೇ ಈ ಬಗೆಯ ಸೋದರ ಭಾವವು ಜಾಗ್ರತವಾಯಿತು. ಆಹಾ! ಸರ್ವಶಕ್ತಿ ಸಾಮ್ರಾಟ ಷಹಾಜಾದಾರಾಗಿರುವ ತಾವು ಏನು ಮಾಡಲಿಕ್ಕೂ ಸಾಧ್ಯವಿರಲು, ಅಶಕ್ತರಾದ ನಮ್ಮ ಮುಂದೆ ಈ ರೀತಿಯಾದ ತ್ಯಾಗವನ್ನು

ತೋರಿಸಿದ್ದು ಅತ್ಯಂತ ಶ್ಲಾಘ್ಯವು! ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ್ದು. ಆದರೆ ಇನ್ನು ಈ ಸತ್ಯವನ್ನು ಬಹಿರಂಗವಾಗಿ ಹೇಳುವುದರಿಂದ ಜನರೆಲ್ಲರೂ ನಿಮ್ಮ ವಿಷಯದಲ್ಲಿ ಅನ್ಯಥಾ ಹೇಳಿಕೊಳ್ಳುವ ಸಂಭವವುಂಟು. ಆದ್ದರಿಂದ ಇದು ನಮ್ಮೊಳಗೆ ಮಾತ್ರವೇ ಗೊತ್ತಾಗಿರಲಿ!" ಎಂದನು.

ಆಗ ಬಾಲೆಯೆಂದಳು: "ಹೌದಣ್ಣ! ಅದೇ ಸರಿ. ನನ್ನನ್ನು ಕೂಡಾ ನೀವು ಬಹಿರಂಗವಾಗಿ ಕಳುಹಿಸಿಕೊಡುವುದರಿಂದ ನಿಮ್ಮವರ ನಿಂದನೆಗೆ ನೀವು ಒಳಗಾಗಬೇಕಾಗಬಹುದು. ನನ್ನನ್ನು ನನ್ನ ಕುದುರೆಯೊಂದಿಗೆ ರಹಸ್ಯವಾಗಿ ಕಳುಹಿಸಿಬಿಡುವುದೇ ನಿಮಗೆ ಶ್ರೇಯಸ್ಕರವಾಗಿದೆ. ಆದರೆ ಅಣ್ಣ, ಒಂದು ಮಾತು ಹೇಳುವೆನು. ನಂಬಿದರೆ ನಂಬಿ, ಬಿಟ್ಟರೆ ಬಿಡಿರಿ. ನೀವು ಉದಯಗಿರಿಯ ರಾಜಕುಮಾರಿ ಮುಕ್ತಾದೇವಿಯನ್ನು ಮದುವೆಯಾಗುವ ಬಯಕೆಯುಳ್ಳವರಾಗಿರಬಹುದು. ಯಾರು ನಿಮಗೆ ನನ್ನನ್ನು ಅಪಹರಿಸಿ ತಂದುಕೊಟ್ಟರೋ ಅವರು, ನಾನೇ ಮುಕ್ತಾಕುಮಾರಿ ಎಂದು ಸುಳ್ಳು ಹೇಳಿ ನಿಮಗೆ ಮೋಸಮಾಡಿದ್ದಾರೆ. ಆದರೆ ನಾನು ಯಾರೆಂಬುದನ್ನು ಮಾತ್ರ ನನ್ನ ಹೆತ್ತವರ ಅನುಮತಿಯಿಲ್ಲದೆ ಹೇಳಕೂಡದಾಗಿದೆ. ನಾನು ವೀರಕ್ಷಾತ್ರಕುಮಾರಿ ಎಂಬುದೇನೋ ಸತ್ಯ. ಅಣ್ಣಾ, ನಿಮ್ಮ ಈ ಹೊಸ ತಂಗಿಯ ಹೆಸರನ್ನು ಜ್ಞಾಪಕವಿಟ್ಟುಕೊಳ್ಳಿರಿ. ನನ್ನ ಹೆಸರು ತಿರುಮಲಾ. ಮುಕ್ತಾ ಅಲ್ಲ."

"ತಿರುಮಲಾ! ಎಂದಿಗೂ ಮರೆಯಲಾರೆನು." ಹೀಗೆಂದು ಮಾಲೂಖಾನನು, ಬಳಿಕ ತನಗೆ ತಾನೇ ಹೇಳಿಕೊಂಡಂತೆ "ಹಾಗಾದರೆ ರಾಮಯಾಮಾತ್ಯನು ಮೋಸಮಾಡಿರಬೇಕು!" ಎಂದನು.

"ರಾಮಯಾಮಾತ್ಯನೆ?" ಎಂದು ತಿರುಮಲಾ ಮಾರ್ದನಿತೆಗೆದಳು.

"ಉತ್ಕಲ ಮಂತ್ರಿ ರಾಮಯಾಮಾತ್ಯನು ಮಹಾ ಮಾಯಾವಿ ಎಂಬುದು ಪ್ರಸಿದ್ಧವಲ್ಲವೆ? ಅವನು ಏನೂ ಮಾಡಿಯಾನು" ಎಂದನು ರಾಮರಾಜ.

ತಿರುಮಲಾ ರಾಮಯಾಮಾತ್ಯನ ಹೆಸರನ್ನು ಅವಳ ತಾಯಿಯ ಬಾಯಿಯಿಂದ ಅನೇಕ ಬಾರಿ ಕೇಳಿದ್ದಳು. "ಅದಾರು ರಾಮಯಾಮಾತ್ಯ? ನನ್ನನ್ನು ಅಪಹರಿಸಿದವರಲ್ಲಿ ಬಿಳೀಗಡ್ಡದ ಚತುರ ಮುದುಕನಿದ್ದನಲ್ಲಾ" ಎನ್ನಲು ಮಾಲೂಖಾನನು "ಅವನೇ, ಅವನೇ" ಎಂದನು.

"ಅದೇನೇ ಇರಲಿ. ಉದಯಗಿರಿಯ ರಾಣಿ ಕುಮಾರಿಯರು ವಿಜಯನಗರದ ಸೆರೆಯಲ್ಲಿರುವರೆಂದು ನಾನು ಕೇಳಿದ್ದೆನು. ತಿರುಮಲಾ ನಿನ್ನದು ಯಾವ ಊರೊ?" ಎಂದು ರಾಮರಾಜನು ಕೇಳಿದನು.

"ನನ್ನದು ದಕ್ಷಿಣದೇಶ. ಸೊಂಡೂರು ಪ್ರಾಂತ. ತಮ್ಮ ಪ್ರಖ್ಯಾತವಾದ ಹೆಸರನ್ನು ನಾನು ಕೇಳಿದ್ದುಂಟು. ತಮ್ಮದೂ ದಕ್ಷಿಣ ದೇಶ ತಾನೆ?" ಎಂದು ತಿರುಮಲಾ ಚಾತುರ್ಯದಿಂದಲೇ ಕೇಳಿದಳು.

"ಹೌದು. ನಾನು ಈ ದಿನವೇ ಹೊರಡುವೆನು. ಕಾಲು ನೋವೇನೂ ಲಕ್ಷ್ಯವಿಲ್ಲ" ಎಂದನು ರಾಮರಾಜ.

"ಸ್ವಾಮಿ, ತಾವು ನನ್ನೊಂದಿಗೆ ನನ್ನ ಜಾಗೆಯವರೆಗೆ ಬಂದು ಹೋಗಲಾದೀತೆ?" ಎಂದು ತಿರುಮಲಾ ಕೇಳಿದಳು.

"ಅಗತ್ಯವಾಗಿ ಬರುವೆನು. ನಿನ್ನನ್ನು ಸುರಕ್ಷಿತವಾಗಿ ನಿನ್ನ ಹೆತ್ತವರ ಕೈಯಲ್ಲಿ ಒಪ್ಪಿಸುವ ಭಾರ ನನ್ನದೆಂದು ನಂಬು." ರಾಮರಾಜನೆಂದ.

"ಖಾನ್ ಸಾಹೇಬಣ್ಣ! ನೀವು ನನಗೆ ಕೊಟ್ಟಿರುವ ರಾಮಾಯಣವನ್ನು ನಿಮ್ಮ ಜ್ಞಾಪಕಾರ್ಥವಾಗಿ ನಾನು ಕೊಂಡೊಯ್ಯಬಹುದಷ್ಟೆ?"

"ಕೊಂಡೊಯ್ಯಬಹುದು. ತಂಗಿ" ಎಂದೆಂದು ಮಾಲೂಖಾನನು "ಜಯರಾಂಜೀ, ನೀವು ಈ ದಿನ ರಾತ್ರಿಯೇ ಪಲಾಯನ ಮಾಡಿಬಿಡಿ. ಈ ಕನ್ಯೆ ನಿಮ್ಮೊಂದಿಗೆ ಪಲಾಯನ ಮಾಡಿದಂತೆ ನಾನು ಪುಕಾರು ಹುಟ್ಟಿಸುತ್ತೇನೆ. ಆದುದರಿಂದ ನೀವು ಬೆಳಗಾಗುವುದರೊಳಗೆ ಬಹುದೂರ ಹೋಗಿಬಿಡಿರಿ!" ಎಂದನು.

## ೧೮

ಕುಮಾರಿ ತಿರುಮಲೆಯೂ ರಾಮರಾಜನೂ ಅಶ್ವಾರೋಹಿಗಳಾಗಿ ವಿನೋದವಾಗಿ ಮಾತು ಕತೆಯಾಡುತ್ತಾ ಹೋಗುತ್ತಿದ್ದರು. ಸಿದ್ದನೂ ಅವರೊಂದಿಗಿದ್ದನು. ಆಗ ಅಜ್ಞಾತಾದೇವಿ ಕಳುಹಿಸಿದ್ದ ಬಂಧುವೊಬ್ಬನು ಬಾಲರಾಣಿಯ ಭೇಟಿಗೊಂಡು, ಅಜ್ಞಾತಾದೇವಿಯ ಕ್ಷೇಮ ಸಮಾಚಾರಗಳನ್ನು ತಿಳಿಸಿ, ತಿರುಮಲೆಯನ್ನು ತನ್ನೊಂದಿಗೆ ಬರುವಂತೆ ಕೇಳಿಕೊಂಡನು. ಅದಕ್ಕೆ ತಿರುಮಲಾ ತಾನು ಈ ಆಪದ್ರಕ್ಷಕನೊಂದಿಗೆ ವಿಜಯನಗರವನ್ನು ಸುತ್ತಿ ನೋಡಿಕೊಂಡು ಬರುವೆನೆಂದೂ, ತಾಯಿಗೆ ತನ್ನ ಕ್ಷೇಮವನ್ನು ತಿಳಿಸಬೇಕೆಂದೂ ಹೇಳಿ, ರಾಮಾಯಣ ಗ್ರಂಥವನ್ನು ಆತನ ಕೈಗೆ ಕೊಟ್ಟು ಅವನನ್ನು ಕಳುಹಿಸಿದಳು.

ಹೋಗುತ್ತಾ ರಾಮರಾಜನು ಅವಳ ತಾಯಿ ಅಜ್ಞಾತಾದೇವಿ ಆನೆಗೊಂದಿಯ ಸೆರೆಮನೆಯಿಂದ ಹೊರಟ ಬಗೆ, ತನಗೂ ಅವಳಿಗೂ ನಡೆದ ಹೃದಯಬಾಂಧವ್ಯ, ಮೊದಲಾದ ವೃತ್ತಾಂತಗಳನ್ನು ತಿರುಮಲೆಗೆ ವಿಶದೀಕರಿಸಿದನು. ತಿರುಮಲಾ ತನ್ನ ವೃತ್ತಾಂತವನ್ನು ಕಿಂಚಿತ್ತಾಗಿಯೇ ಹೇಳಿದಳು. ಅಜ್ಞಾತಾದೇವಿಯ ರಹಸ್ಯವನ್ನು ಹೆಚ್ಚಾಗಿ ಹೇಳಬಾರದಷ್ಟೆ?

ಹೀಗೆ ಮಾತುಕತೆಯಾಡುತ್ತಾ ಅವರು ಆನೆಗೊಂದಿಯ ಮಾರ್ಗವಾಗಿ ವಿಜಯನಗರದೊಳಗೆ ಪ್ರವೇಶಮಾಡಿದರು. ಶ್ರೀ ಕೃಷ್ಣದೇವ

ರಾಯನ ಕಾಲದಲ್ಲಿ ವಿಜಯನಗರದ ವೈಭವವು ಉಚ್ಚಶಿಖರಕ್ಕೇರುತ್ತಿದ್ದಿತು. ಆ ಕಾಲದಲ್ಲಿ ವಿದ್ಯಾನಗರವನ್ನು ಸಂದರ್ಶನ ಮಾಡಿದ ಪರದೇಶೀಯ ಯಾತ್ರಿಕರು, ಇಂತಹ "ಶ್ರೇಷ್ಠನಗರವನ್ನು ನಾವು ಇದುವರೆಗೆ ಕಂಡೂ ಕೇಳಿಯೂ ಇಲ್ಲ" ಎಂದು ಮುಂತಾಗಿ ಆಶ್ಚರ್ಯೋದ್ಗಾರಗಳನ್ನು ತೆಗೆಯುವಷ್ಟು ಅದು ಉನ್ನತಿಯನ್ನೈದಿತ್ತು. ಕೃಷ್ಣದೇವರಾಯನ ಮಿತ್ರನಾದ 'ಕ್ರಿಸ್ತೋವಾ ಡಿ ಫಿಗರಿಡೊ' ಎಂಬ ಪೋರ್ಚುಗಲ್ಲೀಯನ ನೊಂದಿಗೆ ವಿದ್ಯಾನಗರವನ್ನು ನೋಡಿದ 'ಪಿಯಸ್' ಎಂಬಾತನು ಪೋರ್ಚುಗಲ್ ರಾಜಧಾನಿಯಾದ ಲಿಸ್ಬನ್ ನಗರಕ್ಕಿಂತಲೂ ವಿದ್ಯಾನಗರವೇ ಅತಿಶಯವಾಗಿರುವುದೆಂದು ಬಣ್ಣಿಸಿರುತ್ತಾನೆ. ಇಂತಹ ಭುವನೈಕ ಸುಂದರವಾದ ರಾಜಧಾನಿಗೆ ಪೂರ್ವದಲ್ಲಿ ಕಾಂಪಿಲ್ಯ ನಗರವೂ, ದಕ್ಷಿಣದಲ್ಲಿ ದರೋಜಿಯೂ, ಪಶ್ಚಿಮದಲ್ಲಿ ನಾಗಲಾಪುರವೂ, ಉತ್ತರದಲ್ಲಿ ಆನೆಗೊಂದಿಯೂ ಬಾಹ್ಯ ಗೋಪುರಗಳಂತೆ ಒಪ್ಪುತಿದ್ದುವು.

ನಗರವು ಬಲು ಎತ್ತರವಾದ ಬೃಹತ್ ಕೋಟೆಗಳಿಂದ ಭದ್ರವಾಗಿತ್ತು; ದುರ್ಭೇದ್ಯವಾಗಿತ್ತು. ಮಧ್ಯಭಾಗವನ್ನು ಪ್ರವೇಶಿಸಬೇಕಾದರೆ ನಗರವನ್ನು ಸುತ್ತಿಕೊಂಡಿರುವ ಪರ್ವತಮಾಲಿಕೆಗಳ ನಡು ನಡುವೆ ದಾರಿಗಳುಂಟು. ಇಲ್ಲಿಯೇ ಸುಂದರ ಗಂಭೀರಾಕಾರಗಳಿಂದೊಪ್ಪುವ ನಗರದ ಮುಖ್ಯ ಮಹಾದ್ವಾರಗಳಿದ್ದುವು. ಈ ದ್ವಾರಗಳ ಹೊರತು ಬೇರೆ ಮಾರ್ಗಗಳಿರಲಿಲ್ಲ. ಇಲ್ಲಿ ಯಾವಾಗಲೂ ವೀರಭಟರ ಕಾವಲುಂಟು. ಬಲಿಷ್ಠವಾದ ಪ್ರಹರಿಗಳು ಪರ್ವತ ಶ್ರೇಣಿಗಳ ನಡುವಣ ಸಮತಲವನ್ನಾವರಿಸಿಕೊಂಡು ಗುಡ್ಡಗಳನ್ನು ಒಂದಕ್ಕೊಂದು ಬಂಧಿಸಿದ್ದುವು. ಹೀಗೆ ಬಹಳ ಬಲಾಢ್ಯವಾದ ಕಲ್ಲಿನಿಂದ ಕಟ್ಟಲ್ಪಟ್ಟ ಏಳು ಕೋಟೆಗಳೂ ದುರ್ಗಗಳೂ ನಗರಲಕ್ಷ್ಮಿಗೆ ಸಂರಕ್ಷಣಾಗಿದ್ದುವು. ಹೊರಗೋಡೆಯ ಸುತ್ತಲೂ ಜಲಪೂರ್ಣವಾಗಿ ಮೊಸಳೆಗಳಿಂದ ತುಂಬಿದ ಅಗಲಾಳವಾದ ಕಂದಕವಿತ್ತು. ಬದಿಯಲ್ಲಿ ಹರಿಯುತ್ತಿದೆ ಪುಣ್ಯಜೀವ ಪ್ರವಾಹಿನಿಯಾದ ತುಂಗಭದ್ರೆ.

ಹಳೆಯ ಆನೆಗೊಂದಿಯನ್ನೂ ಹೊಸ ವಿದ್ಯಾನಗರವನ್ನೂ ವಿಭಜಿಸಿಕೊಂಡು ಇತ್ತಕಡೆ ಅಂಜನಾದ್ರಿ,ಅತ್ತಕಡೆ ಸುಗ್ರೀವ ಶೈಲ, ಮಾತಂಗ

ಪರ್ವತ, ಅದರ ಬದಿಯಲ್ಲಿ ಹೇಮಕೂಟ ಗಿರಿ, ಮೊದಲಾದ ಬೆಟ್ಟಗಳ ಗಂಡಶಿಲಾ ಶೈಲವಾಲಿಕೆಗಳ ನಡುವೆ, ನಗರಲಕ್ಷ್ಮಿಯ ರಜತ ಮೇಖಲೆಯೋ, ಭೂದೇವಿಯ ಸೀರೆಯಂಚಿನ ಹೊಳೆವ ಜರಿಯೋ, ಎಂಬಂತೆ ಅನೇಕಾನೇಕ ಸಣ್ಣ ದೊಡ್ಡ ಬಂಡೆಗಳನ್ನು ಹಾರಿ ಜಾರಿ, ಸುತ್ತಿ ಸುಳಿದು, ಕೊರೆದು ಬಳಸಿ, ಓಡುತ್ತ, ತುಂತುರ್ವನಿಗಳನ್ನು ಜಿನುಗಿಸಿ, ಫೇನ ನರ್ತನಗಳಿಂದ ಕರೆಯನ್ನು ಕೊರೆದುಕೊಂಡು, ಉಲ್ಲಾಸದಿಂದ ಕಲಕಲನೆ ನಲಿದುಲಿದು ಪ್ರವಹಿಸಿಕೊಂಡಿರುವ ತುಂಗಭದ್ರೆಯನ್ನು, ಕೆಲವರು ತಳವಾರ ಘಾಟಿನಲ್ಲಿಯ ತರಿಯ ಮೂಲಕವೂ, ಕೆಲವರು ಅಂಜಾನಾದ್ರಿಯ ಬಳಿಯಲ್ಲಿರುವ ಕಲ್ಲ ಸೇತುವೆಯಲ್ಲಿಯೂ ದಾಟುತ್ತಿದ್ದರು. ತಿರುಮಲಾ ರಾಮರಾಜರು ಉನ್ನತಾದ್ಭುತವಾದ ಆ ಕಲ್ಲ ಸೇತುವೆಯಿಂದಲೇ ದಾಟಿದರು. ಆಗ ಕಂಡ ನದಿಯ ಸೌಂದರ್ಯವೆಂತಹುದು! ನದಿಯ ಇಬ್ಬದಿಗಳಲ್ಲಿಯೂ ಎಷ್ಟು ಘಾಟಿಗಳು! ಎಷ್ಟು ಮನೋಜ್ಞ ದೇವಾಲಯಗಳು! ಓಹೊ! ಆಕಾಶವನ್ನು ಮುದ್ದಿಡುವ ಅನೇಕ ಗೋಪುರಗಳ ಸುವರ್ಣಗುಮಟಗಳೂ ವಿಮಾನಗಳೂ ಧ್ವಜಗಳೂ ಹೇರಳವಾಗಿವೆ. ಕೆಲವು ಕಡೆ ಅನೇಕ ಶಿಲ್ಪಿಗಳು ಬಹಳ ಮುಮ್ಮುರವಾಗಿ ಕೆಲಸ ಮಾಡುತ್ತಾರೆ. ಇತ್ತ ಕಾಣುವ ಆ ಸೊಬಗಿನ ದೇವಾಲಯ ಪಂಡರಪುರದಿಂದ ವಿಜಯವಿಠ್ಠಲದಾಯನನ್ನು ಬರಮಾಡಿ ಪ್ರತಿಷ್ಠಿಸಲಿಕ್ಕಾಗಿ ಕೃಷ್ಣದೇವ ಸಾರ್ವಭೌಮನಿಂದ ಕಟ್ಟಿಸಲ್ಪಡುತ್ತಿದೆ. ಮತ್ತಿಲ್ಲಿ ತುಂಗಭದ್ರೆ ಶ್ರೀರಾಮಚಂದ್ರನ ಪಾದಪ್ರದೇಶದಲ್ಲಿ ಪ್ರದಕ್ಷಿಣೆ ಮಾಡಿಕೊಂಡು ಹರಿಯುವ ಚೆಂದನೇ ಚಂದ! ಇಲ್ಲಿಯ ವಿಸ್ತಾರವಾದ ಘಾಟಿನಲ್ಲಿ ಅಪರಿಮಿತರಾದ ಭಕ್ತ-ನಾಗರಿಕರು ನೀರಾಡುತ್ತಿದ್ದಾರೆ. ಇಲ್ಲಿರುವ ಚದರಾಕಾರದ ಮನೋಜ್ಞವಾದ ವೈಷ್ಣವ ದೇವಾಲಯವು ಶ್ರೀರಾಮಚಂದ್ರನದು. ಅದರ ಮೇಲುಗಡೆಯಲ್ಲಿ ಕಾಣುತ್ತಿರುವುದು ಮಧ್ವಮತೀಯರಿಗೆ ಪವಿತ್ರವಾದ ಯಂತ್ರೋದ್ಧಾರಕವು! ಇವು ರಜತ ಸುವರ್ಣಮಯ ಚಿತ್ರಗಳಿಂದ ಸೂರ್ಯನೊಡನೆ ಸ್ಪರ್ಧಿಸುತ್ತ ವಿಜಯನಗರದ ರಾಯರ ಮತೈಕದೃಷ್ಟಿಯನ್ನು ವ್ಯಕ್ತಪಡಿಸುತ್ತಿದ್ದುವು. ಅಲ್ಲಿ ಆ ಧವಳಮಯ ಗೋಪುರಪಙ್ಕ್ತಿಗಳಿಂದ

ರಂಜಿಸುವ ಹೇಮಕೂಟದ ತಪ್ಪಲಿನಲ್ಲಿ ಕೃಷ್ಣದೇವರಾಯನು ಉದಯ
ಗಿರಿಯ ವಿಜಯದ ಕುರುಹಾಗಿ ಅಲ್ಲಿಂದ ತಂದ ಕೃಷ್ಣಮೂರ್ತಿಯನ್ನು
ಪ್ರತಿಷ್ಠಿಸುವ ಕೆಲಸವು, ಭರದಿಂದ ಸಾಗುತ್ತಿತ್ತು.

ಇನ್ನತ್ತ ನಗರ ಬೀದಿಯ ವೈಭವನ್ನೇನು ನೋಡುವುದು!
ವಿಶಾಲವಾದ ಬೀದಿಗಳೆಲ್ಲಾ ಜನಮಯ, ಜಾತ್ರಾಮಯ! ಅರಮನೆ
ಗಳು, ಆಲಯುಗಳು, ಅಂಗಡಿಗಳು, ಬಂಡಸಾಲೆಗಳು, ಉಪವನಗಳು,
ಚಿತ್ರಲಲಿತೆಗಳು, ವೃಕ್ಷವಾಟಿಕೆಗಳು, ಸಿಂಗಾರ ಜಗುಲಿಗಳು, ಮಂಡಪ
ಗಳು, ಕಟ್ಟೆಗಳು, ಕೆರೆಕೊಳ ಬಾವಿಗಳು, ಕಾಲುವೆಗಳು ಮತ್ತು ಕವಲು
ಕವಲುಗಳಾಗಿ ನಗರದೊಳಗೆಂಟು ದಿಕ್ಕುಗಳಿಗೂ ಹರಡಿಕೊಂಡು ಸದಾ
ಶುದ್ಧ ಜಲವನ್ನೊದಗಿಸುತ್ತಿರುವ ಗಾರೆಹಾಕಿದ ಕಲ್ಲಿನ ನೀರೋಳಿಗಳು!
ಮಧ್ಯೆ ಮಧ್ಯೆ ಕಣ್ಣನ್ನು ಕವರುವ ಹಸುರು ಮುರಿಯುವ ಹೊಲಗಳು,
ತೋಟಗಳು, ಎಲ್ಲೆಲ್ಲಿಯೂ ಸರ್ವದಾ ವಸಂತಋತುವಾಗಿರುವಂತೆ
ನಾನಾ ಸುಗಂಧ ಕುಸುಮಗಳ ಸುವಾಸನೆ. ಆಹಾ! ಜನರೆಲ್ಲಾ
ಸದಾ ಪರ್ವಕಾಲಗಳಂತೆ ಕುಂಕುಮ ಗಂಧಮಾಲ್ಯ ದಿವ್ಯವಸ್ತ್ರಭೂಷಣಾ
ಭರಣಾದಿಗಳಿಂದ ಅಲಂಕೃತರಾಗಿ ಶ್ರೀಮಂತಶೋಭಿತರಾಗಿ ಕಳಕಳಿಸು
ತ್ತಿದ್ದಾರೆ. ಸುಂದರ ಸೌಧವಾಟಿಕೆಗಳಿಂದ ರಂಜಿಸುವ ಪೇಟೆಗಳ ಬೀದಿ
ಗಳು ನಾನಾ ತರದ ಜನರ ಕೂಟಗಳಿಂದ ನಿಬಿಡವಾಗಿವೆ. ಅಲ್ಲಿ
ನಾನಾ ದೇಶದ ನಾನಾ ಭಾಷೆಯ ಜನರು ಕಾಣಿಸುತ್ತಿದ್ದರು. ನವರತ್ನ
ಗಳೂ, ಅನರ್ಘವಾದ ಮಣಿಗಳೂ, ವಜ್ರಗಳೂ, ಮುತ್ತುಗಳೂ, ಚಿತ್ರ
ವಿಚಿತ್ರವಾದ ವಸ್ತ್ರಗಳೂ, ಹೆಚ್ಚೇನು? ಪ್ರಪಂಚದಲ್ಲಿ ಸಿಕ್ಕುವ ವಿಶೇಷ
ವಸ್ತುಗಳೆಲ್ಲವೂ ಅಲ್ಲಿ ಹೇರಳವಾಗಿಯೂ ಅಗ್ಗವಾಗಿಯೂ ವ್ಯಾಪಾ
ವಾಗುತ್ತಿದ್ದುವು. ಟಂಕಸಾಲೆ, ನೇಯಿಗೆಸಾಲೆ, ವಿದ್ಯಾಶಾಲೆ, ಧರ್ಮ
ಶಾಲೆ ಮೊದಲಾದ ನಾನಾವಿಧ ಕರ್ಮಶಾಲೆಗಳು ಅಲ್ಲಲ್ಲಿ ಕಾರ್ಯ
ನಿರತಗಳಾಗಿದ್ದುವು.

ಅತ್ತಕಡೆಯಲ್ಲಿರುವ ಮುಸಲ್ಮಾನರ ಪೇಟೆಯೂ, ಮಸೀದಿಯೂ
ವಿದ್ಯಾನಗರದ ಅರಸುಗಳ ಸರ್ವಮತ ಸಮದೃಷ್ಟಿಯನ್ನು ಸಾರ
ತ್ತಿದ್ದುವು. ರಾಜಸದನಗಳೆಲ್ಲವೂ ನಗರದ ಮಧ್ಯಪ್ರದೇಶದಲ್ಲಿ ಕಂಗೊ

ಸುತ್ತಿದ್ದುವು. ಅಲ್ಲಿ ಅಗಲವಾದ ಬೀದಿಗಳು ಮಂತ್ರಿಗಳ, ಸೇನಾಧಿಪತಿಗಳ, ಸಾಮಂತ ಪ್ರಭುಗಳ ಸುಮನೋಜ್ಞವಾದ ಪ್ರಕಾಂಡ ಸೌಧಮಾಲಿಕೆಗಳಿಂದ ರಾರಾಜಿಸುತ್ತಿದ್ದುವು. ಇಂದ್ರಭವನಗಳೇ ಈ ಪ್ರದೇಶಕ್ಕಿಳಿದುವೋ ಎಂಬ ಭ್ರಾಂತಿಯನ್ನು ಹುಟ್ಟಿಸುವ ಅನೇಕ ಸಭಾಭವನಗಳು ಒಪ್ಪುತ್ತಿದ್ದುವು. ಅಲ್ಲಲ್ಲಿ ದಣುವಾರಿಸಿಕೊಳ್ಳಲು ವಿಸ್ತಾರವಾದ ಮರಗಳ ನೆರಳುಗಳಲ್ಲಿ ಶಿಲ್ಪಕಲೆಯಿಂದಲಂಕೃತವಾದ ಸಮತಲವೇದಿಕೆಗಳುಂಟು. ನೋಡಸಿಕ್ಕುವ ಎಲ್ಲಾ ಆಲಯ, ಭವನ, ಮಂಡಪ, ಮಂದಿರ, ಸೌಧಗಳ ಗೋಡೆಗಳೂ ಬಾಗಿಲುಗಳೂ, ಸ್ತಂಭಗಳೂ, ಮೆಟ್ಟಿಗೆಗಳೂ ಶಿಲ್ಪಕಲಾಪೂರ್ಣಗಳಾಗಿದ್ದುವು. ಅದೊಂದು ಕಲಾನಗರವೇ ಆಗಿತ್ತು.

ಅಲ್ಲಲ್ಲಿ ಸಂಚರಿಸಿಕೊಂಡು ಹೋಗುತ್ತಿರುವ ದೊಡ್ಡ ದೊಡ್ಡ ಅಧಿಕಾರಿಗಳೂ ರಾಜಕರ್ಮಚಾರಿಗಳೂ, ಬೆಟ್ಟದಂತಹ ಆನೆಗಳ ಮೇಲೆಯೂ, ಗುಡ್ಡದಂತಹ ಕುದುರೆಗಳ ಮೇಲೆಯೂ ಸವಾರಿ ಮಾಡುತ್ತಿರುವ ಸೊಗಸೇ ಸೊಗಸು. ಎತ್ತ ನೋಡಿದರತ್ತ ಕುತೂಹಲಾಶ್ಚರ್ಯಕಾರಿಗಳಾದ ದೃಶ್ಯಗಳೇ. ಈ ಮಹಾ ನಗರದ ವೈಭವ ವೈಶಾಲ್ಯಗಳನ್ನು ಒಂದೇ ಕಡೆಯಿಂದ ಒಂದೇ ಬಾರಿಗೆ ನೋಡಿ ಮುಗಿಸುವುದೂ, ಮುಗಿಸಿ ಬಣ್ಣಿಸುವುದೂ ಸಾಧ್ಯವಿಲ್ಲ.

ರಾಮರಾಜನು ತಿರುಮಲೆಯೊಂದಿಗೆ ಪಂಪಾಪತಿಯ ದರ್ಶನಕ್ಕೆ ಹೊರಟನು.

ಅದು ದಕ್ಷಿಣ ಕಾಶಿ ಎಂದು ಪ್ರಸಿದ್ಧವಾದ ಪ್ರಾಚೀನ ದೇವಾಲಯ. ಮುಗಿಲನ್ನು ಸೀಳಿಕೊಂಡು ಹೋಗಿರುವ ಆ ಎರಡು ಗೋಪುರಗಳೂ, ಅದ್ಭುತವಾದ ಆ ರಂಗಮಂಟಪವೂ, ಕೃಷ್ಣದೇವರಾಯನ ಪಟ್ಟಾಭಿಷೇಕ ಕಾಲದ ಸ್ಮಾರಕಚಿಹ್ನಗಳಾಗಿ ಕಟ್ಟಿಸಲ್ಪಟ್ಟದ್ದುವು. ಅಲ್ಲಿಯ ತುಂಗಾಭದ್ರಾಸಲಿಲವು 'ವಸಿಷ್ಠ ತೀರ್ಥ'ವೆನಿಸಿತ್ತು.

ರಾಮರಾಜನು ತಿರುಮಲಾ ಕುಮಾರಿಗೆ, ಕಣ್ಣಿಗೆ ಕಂಡ ದೃಶ್ಯಗಳನ್ನು ತೋರಿಸಿ ಬಣ್ಣಿಸುತ್ತ, ದೇವದರ್ಶನ ಮಾಡಿಕೊಂಡು ಹೊರಗೆ ಬಂದನು. ಆಗ ಇಬ್ಬರು ರಾಜಭಟರು ಅವರನ್ನು ತಡೆದರು. ರಾಮ

ರಾಜನು ತಿರುಮಲಾ ಕುಮಾರಿಯ ಸಮೇತನಾಗಿ, ಆ ರಾಜಭಟರ ವಶನಾಗಿ ತಿಮ್ಮರಸನ ಬಳಿಗೆ ಬರಬೇಕೆಂದೂ, ಇದಕ್ಕೆ ತಪ್ಪಿದರೆ ಖೈದಿಗಳಾಗಿ ಕೊಂಡೊಯ್ಯಲ್ಪಡಬೇಕಾಗುವುದೆಂದೂ ತಿಮ್ಮರಸರ ಆಜ್ಞೆಯಾಗಿರುವುದನ್ನು ಆ ಭಟರು ಅರಿಕೆ ಮಾಡಿದರು. ಮುಂದೇನಾಗುವುದೋ ಎಂದು ಶಂಕಿಸಿದ ರಾಮರಾಜನು ಸಿದ್ದನ ಕಿವಿಯಲ್ಲಿ, "ನೀನು ತಪ್ಪಲಹಳ್ಳಿಯ ದುರುಗಮ್ಮನ ದಿನ್ನೆಯ ದ್ವಾರಾ, ಅಜ್ಞಾತಾದೇವಿಯು ಮಗಳು, ಸುಖವಾಗಿ ವಿಜಯನಗರಕ್ಕೆ ಬಂದು, ನನ್ನೊಂದಿಗೆ ರಾಜಭಟರ ವಶವಾಗಿರುವುದನ್ನು ತಿಳಿಸಿ ಬಂದುಬಿಡು" ಎಂದು ಹೇಳಿ ಕಳಿಸಿದನು. ಬಳಿಕ ತಿರುಮಲಾ-ರಾಮರಾಜರು ರಾಜಭಟರ ವಶರಾದರು.

## ೧೯

ಹತ್ಯಾಕಾರಿಣಿಯೆಂದು ಆಪಾದಿತಳಾದ ಅಜ್ಞಾತಾದೇವಿ ಸೆರೆಮನೆಯೊಳಗಿನಿಂದ ಮಂತ್ರ, ಮಾಯೆ ಮೊದಲಾದ ಅಮಾನುಷ ರೀತಿಯಲ್ಲಿ ಪಾರಾಗಿರುವುದಾಗಿ ಅವಳೇ ಬರೆದಿಟ್ಟು ವ್ಯಕ್ತಪಡಿಸಿದ್ದನ್ನು ಮೇಧಾವಿಯಾದ ತಿಮ್ಮರಸನು ಹೇಗೆ ನಂಬಿಯಾನು? ಅವಳಿಗೆ ಯಾವುದೋ ಎಂದು ಮುಖ್ಯ ವ್ಯಕ್ತಿಯ ಸಹಾಯವಿದ್ದೇ ಇರಬೇಕೆಂದು ತಿಮ್ಮರಸನು ಊಹಿಸಿದನು. ನಂತರ ಸೆರೆಮನೆಯ ಮುಖ್ಯಾಧಿಕಾರಿ ರಾಮರಾಜನು ಆರ್ವೀಡಿಗೆ ಹೋಗುವೆನೆಂದು ನೆವ ಹೇಳಿ ರಜೆ ಪಡೆದುಕೊಂಡು, ರಾಯಚೂರಿನ ಕಡೆಗೆ ತಿರುಗಿದುದು, ಗೂಢಚಾರರಿಂದ ಅವನಿಗೆ ಗೊತ್ತಾಯಿತು. ಇದರಿಂದ ತಿಮ್ಮರಸನ ಸಂದೇಹವು ರಾಮರಾಜನ ಮೇಲೆಯೇ ನೆಟ್ಟಿತು. ಅವನು ಕನ್ಯೆಯೊಬ್ಬಳೊಂದಿಗೆ ವಿಜಯನಗರಕ್ಕೆ ಹಿಂದಿರುಗಿರುವನೆಂದು ಗೊತ್ತಾಗುತ್ತಲೇ, ಮೇಲೆ ಹೇಳಿದಂತೆ ಅವರಿಬ್ಬರನ್ನೂ ಬರಮಾಡಿಕೊಂಡನು.

ಇಬ್ಬರೂ ಕೈಜೋಡಿಸಿ ಮಂತ್ರೀಶನಿಗೆ ವಂದಿಸಿದರು. ಆದರೆ ತಿರುಮಲೆ ಮನಃಪೂರ್ವಕವಾಗಿ ವಂದಿಸಿದ್ದಲ್ಲ. ತಾಯಿಯ ವೈರಿಗಳಲ್ಲೊಬ್ಬನಾದ ತಿಮ್ಮರಸನು ವಂದನೆಗೆ ಅರ್ಹನಲ್ಲವೆಂದು ಅವಳ ಭಾವನೆ. ಆದರೆ ತಿಮ್ಮರಸನ ವೃದ್ಧಗಾಂಭೀರ್ಯದಿಂದೊಪ್ಪುವ ಮುಖಮಂಡಲದ ಗೌರವಶಕ್ತಿಯ ಆಕರ್ಷಣೆಯಿಂದ ಅವಳ ಕೈ

ತಾನಾಗಿ ಜೋಡಿಸಿಕೊಂಡಿತು. ನಮಸ್ಕರಿಸಿದೊಡನೆಯೇ ಅವಳು ದಿಟ್ಟಳಾಗಿ ನಿಂತಳು. ನಸುಗೋಪದಿಂದ ಅವಳ ಕಣ್ಣುಗಳು ಪ್ರಕಾಶಮಾನವಾದುವು.

ರಾಮರಾಜನ ಪಾರ್ಶ್ವದಲ್ಲಿ ಬೀರಿ ತೋರುವ ಆ ವೀರ ಕಿಶೋರಿಯನ್ನು ಕಂಡು ತಿಮ್ಮರಸನು, 'ಎಂತಹ ಉಜ್ವಲ ಕನ್ಯಾರತ್ನವಿದು !' ಎಂದು ತನ್ನೊಳಗೆ ತಾನೇ ಬೆರಗಾಗುತ್ತಿದ್ದನು.

ರಾಮರಾಜನು ತಿಮ್ಮರಸನ ತೇಜಃಪುಂಜವಾದ ತೀಕ್ಷ್ಣ ದೃಷ್ಟಿಯ ಇದಿರಿಗೆ, ಸೂರ್ಯನ ಬೆಳಕಿನಿಂದ ಮಂಗಿಹೋಗುವ ಚಂದ್ರನಂತೆ ಕಳಾವಿಹೀನನಾಗಿ ಅಪರಾಧಿಯಂತೆ ನಿಂತಿದ್ದನು. ನಿಜಕ್ಕೂ ಅವನು ಮನಃಸಾಕ್ಷಿಗೆ ಸರಿಯಾಗಿ ಮಾಡಿದ ಕೆಲಸಗಳೆಲ್ಲವೂ ರಾಜ್ಯಾಂಗದ ಮುಂದೆ ಅಪರಾಧವೇ ಆಗಿದ್ದಿತಷ್ಟೆ ?

ತಿಮ್ಮರಸನು ಒಂದು ನಿಮಿಷ ಇಬ್ಬರನ್ನೂ ಕುಕ್ಕುವ ಹಾಗೆ ನೋಡಿ, "ರಾಮರಾಜ, ನೀನು ಆರ್ವೀಡಿಗೆ ಹೋಗುವೆನೆಂದು ಹೇಳಿ ರಾಯಚೂರಿಗೆ ಹೋದಿಯಲ್ಲ? ಅಲ್ಲಿಯೂ ಒಂದು ಆರ್ವೀಡು ಇದೆಯೆ ?" ಎಂದು ಕೇಳಿದನು.

ರಾಮರಾಜನು ಮಾತಾಡಲಿಲ್ಲ.

"ಏಕೆ? ಮೌನವೇಕೆ? ಈ ಕನ್ಯೆಯನ್ನು ಮೀಂಟಿಕೊಂಡು ಬರಲು ಹೊರಟಿರುವ ನೀನು ಸುಳ್ಳು ಕಾರಣ ಹೇಳಿದಿಯೇಕೆ ?"

ಇದಕ್ಕೂ ರಾಮರಾಜನು ನಿರುತ್ತರ.

"ಹೋಗಲಿ. ಈಗಾದರೂ ನಿಜವನ್ನು ಹೇಳು. ಈ ಕನ್ಯಾರತ್ನವು ಎಲ್ಲಿಯದು ? ಇದಕ್ಕೂ ನಿನಗೂ ಸಂಬಂಧವು ಹೇಗಾಯಿತು ?"

ಈಗ ರಾಮರಾಜನು ಬಾಯಿಬಿಟ್ಟನು. "ಪ್ರಭುವೆ, ಈ ಕನ್ಯೆಯ ಆದ್ಯಂತೋದಂತಗಳೊಂದೂ ನನಗೆ ತಿಳಿಯದು. ಮುಸಲ್ಮಾನರು ಬಲವಂತದಿಂದ ಇವಳನ್ನು ಅಪಹರಿಸಿಕೊಂಡು ರಾಯಚೂರಿಗೆ ಹೋದುದನ್ನು ತಿಳಿದು, ನಾನು ಬಿಡಿಸಿಕೊಂಡು ಬರಲಿಕ್ಕಾಗಿ ಹೋದೆನು. ಈ ಕನ್ಯೆಯ ಪೂರ್ವಾಪರವು ನನಗೆ ಗೊತ್ತಿಲ್ಲದ್ದರಿಂದಲೇ ಸುಳ್ಳುನೆವವನ್ನು ಹೇಳಬೇಕಾಯಿತು. ಮಹಾಪ್ರಭುಗಳು ಕ್ಷಮಿಸಬೇಕು."

"ಆ ಸುಳ್ಳು ನೆವಕ್ಕೆ ಇದೊಂದೇ ಕಾರಣವಲ್ಲ. ಕೆಲವು ಮುಖ್ಯ ಗುರುತುಗಳೂ ನಿನಗೆ ಗೊತ್ತಿವೆ. ಅದನ್ನು ತಿಳಿಸು" ತಿಮ್ಮರಸನೆಂದನು.

ರಾಮರಾಜನು ಕುಂಠಿತ ಸ್ವರದಿಂದ, "ಅದನ್ನು ಪ್ರಕಟಮಾಡ ಲಾರದಿರುವೆನು."

"ಏನಾದರೂ ನಿರ್ಬಂಧವಿದೆಯೇ ?"

ರಾಮರಾಜನು ನಿರುತ್ತರನಾಗಿ ತಲೆವಾಗಿ ನಿಂತನು.

"ರಾಮರಾಜ, ನನ್ನ ಸಂದೇಹವು ಸುಳ್ಳಲ್ಲ! ರಾಜಮಾತೆಯ ಹತ್ಯಾಕಾರಿಣಿಯೆಂದು ಆಪಾದಿತೆಯಾದ ಅಜ್ಞಾತಾದೇವಿಯೆಂಬ ಚೋರನಾಯಕಿಗೆ ನೀನೇನೋ ವಚನಬದ್ಧನಾಗಿರುತ್ತಿ. ಅವಳನ್ನು ಸೆರೆಮನೆಯಿಂದ ಮುಕ್ತಪಡಿಸಿದ್ದು ನೀನೇ ಎಂಬುದನ್ನು ಒಪ್ಪಿಕೋ" ಎಂದನು ತಿಮ್ಮರಸ.

ರಾಮರಾಜನೆಂದನು : "ಆಕೆ ಪಂಪಾಪತಿಯಾಣೆಗೂ ಹತ್ಯಾ ಕಾರಿಣಿಯಲ್ಲ."

"ಅದನ್ನು ನಾನೂ ಬಲ್ಲೆ. ಆದರೆ ಅವಳನ್ನು ವಿಚಾರಿಸಿ ತೀರ್ಪು ಮಾಡುವ ಅಧಿಕಾರವು ನಿನಗಿದೆಯೆ? ರಾಮರಾಜ, ನೀನು ಒಳ್ಳೆಯ ಸ್ವಾಮಿನಿಷ್ಠನೆಂದು ನಂಬಿ, ನಿನ್ನನ್ನು ಇಡಿಯ ಸೆರೆಮನೆಗೇ ಅಧಿಕಾರಿಯನ್ನಾಗಿ ಮಾಡಿದ್ದಕ್ಕೆ ಈ ರೀತಿಯಾಗಿ ದ್ರೋಹ ಮಾಡಿದಿ!"

"ನಾನು ತಪ್ಪಿಸಿಕೊಳ್ಳಲಿಲ್ಲ ಪ್ರಭು. ಇದರಿಂದ ಬರುವ ಹೆಚ್ಚು ಕಡಮೆಗಳಿಗೆ ನಾನೇ ಉತ್ತರವಾದಿಯಾಗಿಯೂ ಇರುತ್ತೇನೆ."

"ಅವಳಿಗಾಗಿ ನೀನು ಉತ್ತರವಾದಿ? ಅವಳು ನಿನ್ನ ಸ್ವಕೀಯಳೆ? ಅಥವಾ ವೀರಬ್ರಹ್ಮಚಾರಿಯಾದ ನಿನಗೆ ಅವಳ ಮಗಳೊಂದಿಗೆ ಮದುವೆ ಯಾಗಿ, ಆ ಮೂಲಕ ಸ್ವಕೀಯಳಾಗುವಂತಹ ಮಾತುಕತೆಯೇನಾದರೂ ಜರುಗಿದೆಯೆ ?"

"ಅದೇನಿಲ್ಲ ಪ್ರಭು. ಇನ್ನು ಬೇಗದಲ್ಲಿ ಅವಳೇ ಎಲ್ಲವನ್ನೂ ಬಹಿರಂಗಪಡಿಸುವಳೆಂಬುದರಲ್ಲಿ ನನಗೆ ನಂಬುಗೆಯುಂಟು."

ತಿಮ್ಮರಸನೊಮ್ಮೆ ರಾಮರಾಜನನ್ನು ದುರದುರನೆ ನೋಡಿ ಬಳಿಕ ತಿರುಮಲೆಯನ್ನು ಕುರಿತು, "ಮಗುವೆ, ನಿನ್ನದು ಯಾವ

ಊರಮ್ಮ ?" ಎಂದು ಕೇಳಿದನು.

ಕೂಡಲೇ ತಿರುಮಲೆ ಅಸ್ಖಲಿತ ವಾಣಿಯಿಂದ, "ಯಾವ ಊರು? ಅಪ್ಪ ಯಾರು ? ಅಮ್ಮ ಯಾರು ? ಎಂದು ಬೇರೆ ಬೇರೆ ಪ್ರಶ್ನೆ ಕೇಳುವ ತೊಂದರೆಯೇ ನಿಮಗೆ ಬೇಡ. ನನ್ನ ಹಿರಿಯರ ಆಜ್ಞೆಗೆ ಬದ್ಧಳಾಗಿರುವ ನಾನು ನನ್ನ ಯಾವ ವೃತ್ತಾಂತವನ್ನೂ ಹೇಳಲಾರೆ. ಆದರೆ ನನ್ನನ್ನು ಉದಯಗಿರಿಯ ರಾಜಕುಮಾರಿ ಮುಕ್ತಾದೇವಿಯೆಂದು ಸುಳ್ಳು ಹೇಳಿ ಯಾವನೋ ಒಬ್ಬ ರಾಮಯಾಮಾತ್ಯನೆಂಬ ಮುದುಕನು ಅಪಹರಿಸಿ ಕೊಂಡು ಹೋಗಿ ಮುಸಲ್ಮಾನರಿಗೆ ಒಪ್ಪಿಸಿದನು. ದೈವಯೋಗದಿಂದ ಅದನ್ನರಿತ ಈ ವೀರವರೇಣ್ಯರು ದೇವರಂತೆ ಬಂದು ನನ್ನನ್ನು ಪಾರು ಮಾಡಿದರು. ನಾನು ಈ ವಿಜಯನಗರವನ್ನು ನೋಡಬೇಕೆಂದು ಇಲ್ಲಿಗೆ ಬಂದಿದ್ದೇನೆ. ಇಷ್ಟೇ ನನ್ನ ವೃತ್ತಾಂತ" ಎಂದು ಮುದ್ದುಗುಲುಕುವ ದಿಟ್ಟ ನುಡಿಗಳಿಂದ ಹೇಳಿದಳು.

ತಿಮ್ಮರಸನು ಬೆರಗಾಗಿ, "ಇಷ್ಟೇನೆ ? ,ಓ ! ಬಹಳ ಒಳ್ಳೇದು. ನೀನು ಬಹಳ ಜೋರಿರುವಹಾಗಿದೆ. ನಿನ್ನ ಹೆಸರನ್ನಾದರೂ ಹೇಳಲಿಕ್ಕೆ ಆಕ್ಷೇಪವಿದೆಯೆ ?" ಎಂದು ಕೇಳಿದನು.

"ತಿರುಮಲಾ ಎಂದು ನನ್ನ ಹೆಸರು. ಮುಸಲ್ಮಾನರು ಮುಕ್ತಾ ಎಂದು ನನಗೆ ಬಾಧೆ ಕೊಟ್ಟಂತೆ, ನೀವು ಬೇರೇನಾದರೂ ಭ್ರಮೆಪಟ್ಟು ನನ್ನನ್ನು ಕಾಡಬಾರದೆಂದೇ ನಿಜ ಹೆಸರು ಹೇಳಿಬಿಟ್ಟೆ. ಈ ಹೆಸರು ತಕ್ಕೊಂಡು ನೀವೇನು ಮಾಡುವಿರೊ ?"

"ಜಪಿಸಿಕೊಳ್ಳುತ್ತೇನೆ. ಮತ್ತು ಈಗ ನಮಗೆ ನೀನು ಸರಿ ಯಾದ ಉತ್ತರವನ್ನು ಕೊಡದೆ ಕತ್ತಲೆ ಕೋಣೆಯಲ್ಲಿ ಹಾಕಬೇಕಾಗಿ ಬಂದಗೆ, ನಿನ್ನನ್ನು ವಿಚಾರಿಸಿಕೊಂಡು ಬಂದವರಿಗೆ, ನಿನ್ನ ಹೆಸರು ತಿಳಿಸಬೇಕಷ್ಟೆ ?" ಎಂದನು ತಿಮ್ಮರಸ.

"ಓಹೊ ! ನನ್ನನ್ನು ಸೆರೆಮನೆಯಲ್ಲಿ ಹಾಕುವಿರಾ ? ಹಾಕಿರಿ ! ಆದರೆ ಕಷ್ಟಗಳಿಗೆ ಭಯಪಟ್ಟು, ಗುಟ್ಟು ಹೇಳುವವಳು ಮಾತ್ರ ನಾನಲ್ಲ ವೆಂದು ನೀವು ಗಟ್ಟಿಯಾಗಿಯೇ ನಂಬಿರಿ. ವೀರಕುಮಾರಿ ನಾನು. ಆದರೆ ಈಗ ತಬ್ಬಲಿ. ನನ್ನನ್ನು ಸೆರೆಹಾಕುವುದು ಈಗ ನಿಮಗೆ

ಸುಲಭ. ಪ್ರಯೋಜನ ಮಾತ್ರ ಏನೂ ಇಲ್ಲ. ಮಹಾ ಮಂತ್ರಿಗಳಾದ ನೀವು ಏನು ಮಾಡಿದರೂ ಮಟ್ಟವೆಂದುಕೊಂಡು ಇಂಥ ಚೇಷ್ಟೆಯನ್ನೂ ಮಾಡುವಿರೇನೊ?" ಎಂದಳು ತಿರುಮಲೆ!

"ಅಬ್ಬಬ್ಬ! ಎಷ್ಟು ಹರಿತವಾಗಿದೆ ನಿನ್ನ ನಾಲಗೆ! ಒಳ್ಳೇದು, ಈಗ ಅರಸರ ಬಳಿಗೆ ಹೋಗಿ ನಿನ್ನ ಈ ನಾಲಗೆಗೆ ತಕ್ಕ ತಿಂಡಿ ಕೊಡಿಸುವೆನು. ಈಗ ನಡೆಯಿರಿ, ನೀವಿಬ್ಬರೂ ರಾಜದರ್ಶನಕ್ಕೆ."

ತಿಮ್ಮರಸನು ಅವರಿಬ್ಬರನ್ನೂ ಸೇವಕರ ಸ್ವಾಧೀನದಲ್ಲಿ ಸಾರ್ವಭೌಮನ ನಿವಾಸಕ್ಕೆ ಕಳುಹಿಸಿ, ತಾನು ಸಾರೋಟಿನ ಮೇಲೇರಿಕೊಂಡು ಅತ್ತ ಹೊರಟನು.

ಪರಮಪೂಜ್ಯ ಮಾತೃದೇವತೆಯ ವಿಯೋಗದಿಂದ ಕೃಷ್ಣದೇವರಾಯನ ದುಃಖಕ್ಕೆ ಮೇರೆ ಇರಲಿಲ್ಲ. ತಾಯಿಯ ಹತ್ಯಾಕಾಂಡದ ಮರ್ಮವೂ ತಿಳಿಯದೆಹೋದುದರಿಂದ ದುಃಸ್ಸಹವಾದ ವೇದನೆಗೆ ಆಳಾಗಿದ್ದನು. ಅವನ ಸಾಮು, ದಂಡ, ಯುದ್ಧಪ್ರಯೋಗ, ಪೂಜೆ, ನೇಮ-ನಿಷ್ಠೆ, ನಿದ್ರೆ, ಆಹಾರ ಮೊದಲಾದ ನಿತ್ಯ ನೈಮಿತ್ತಿಕೆಗಳು ಕ್ರಮ ತಪ್ಪಿಹೋಗಿದ್ದುವು. ಒಮ್ಮೊಮ್ಮೆ ರಹಸ್ಯದಲ್ಲಿ ತನ್ನ ಕೈಬೆರಳಿಗೆ ಹಾಕಿಕೊಂಡಿರುವ, ಆ ಹತ್ಯಾರೋಪಿತೆಯ ಉಂಗುರವನ್ನು ನೋಡಿಕೊಂಡು ಏನೇನೋ ನೆನೆದುಕೊಂಡು ಹಲುಬುವನು. ಇದ್ದಕ್ಕಿದ್ದಂತೆ ಸಿಟ್ಟುಗೊಂಡು "ಹೇ! ಕೊಲೆಪಾತಕಿ! ನನ್ನ ಮಾತೃದೇವಿಯನ್ನು ಹತ್ಯ ಮಾಡಿದ ನೀನು ನನ್ನ ಪ್ರೇಮದೇವಿಯನ್ನೂ ಕೊಂದಿರಬೇಕು. ಪಿಶಾಚಿ! ನೀನು ಸೆರೆಮನೆಯಿಂದ ತಪ್ಪಿಸಿಕೊಂಡರೂ ನ್ಯಾಯ, ಸತ್ಯ, ಧರ್ಮ ಬಂಧನಗಳಿಂದ ಎಂದಿಗೂ ಪಾರಾಗಲಾರೆ. ನಿನ್ನನ್ನು ಶೋಧಿಸಿ ಹಿಡಿದು ನಿನಗೆ ತಕ್ಕ ಶಿಕ್ಷೆಯನ್ನು ಕೊಡಿಸದಿದ್ದರೆ ನಾನು ವೀರಪುತ್ರನೇ ಅಲ್ಲ!" ಎಂದು ಶಪಥ ಹಾಕಿಕೊಳ್ಳುವನು. ಇದರ ಮೇಲೆ ವಿಷಹೃದಯೆಯಾದ ಅವನ ದೊಡ್ಡಮ್ಮ ತಿಪ್ಪಾಂಬೆಯೂ ಆ ಚೋರನಾಯಕಿಯೊಂದಿಗೆ ಸೇರಿಕೊಂಡದ್ದು ಇನ್ನಿಷ್ಟು ಅಸಹನೀಯವಾಗಿತ್ತು. ಹೀಗೆ ಮೂಬಗೆಯ ಹೃದಯವಿದಾರಕವಾದ ಆಲೋಚನೆಗಳಿಂದ ರಾಯನು ಬಹಳ ವಿಕೃತದೃಶ್ಯನಾಗಿ ಹೋಗಿದ್ದನು. ದುಃಖೋಷ್ಣದಿಂದ ಕುದಿಯು

ತ್ತಿರುವ ರಾಯನ ಸಂತಪ್ತ ಮನಸ್ಸಿಗೆ, ಶೀತಳ ದೃಶ್ಯಳಾದ ಆ ಕನ್ಯಾ ಮಣಿಯನ್ನು ತೋರಿಸಿ, ಚೋರನಾಯಕಿಗೆ ಸಂಬಂಧಿಸಿರುವ ಈ ಹೊ ವಾರ್ತೆಯನ್ನು ಅರಿಕೆಮಾಡುವುದರಿಂದ, ಅವನ ದುಃಖವು ಸ್ವಲ್ಪಮಟ್ಟಿ ಶಮನವಾಗಬಹುದೆಂದು ತಿಮ್ಮರಸನ ಊಹೆ.

ಅವನು ಲೋಕೈಕ ಮಹತ್ಪ್ರಾಸಾದದಂತಿದ್ದ ರಾಯನ ನೆಲೆಮ ಯನ್ನು ಪ್ರವೇಶಿಸಿ ಭಟರೊಡನೆ ಸಮಯವನ್ನು ವಿಚಾರಿಸಿ, ರಾಯ ಬಳಿಗೆ ನಡೆತಂದನು.

"ರಾಜೇಂದ್ರ, ಇನ್ನೂ ಬಹಳ ಚಿಂತಿಸುತ್ತಿರುವೆಯಾ? ಎನ್ನುತ್ತಾ ತಿಮ್ಮರಸನು ರಾಯನಿದಿರು ಸಿಂಹಾಸನದಲ್ಲಿ ಆಸೀನನಾದನ

"ಅಪ್ಪಾಜಿ, ಶ್ರೀ ವಿರೂಪಾಕ್ಷನೇ ಚಿಂತಾಯೋಗವನ್ನು ಕಲ್ಪಿಸಿ ವಾಗ ಮತ್ತೇನು ಮಾಡಲಿ? ನನ್ನ ತಾಯಿಯ ಹತ್ಯಾಕಾಂಡದ ವಿಷಯ ವಾಗಿ ಏನಾದರೂ ಹೊಸ ಸಮಾಚಾರ ತಿಳಿದಿದೆಯೆ?"

"ಅದಕ್ಕಾಗಿಯೇ ಬಂದಿರುವೆನು" ಎಂದು ತಿಮ್ಮರಸನು, ರಾಮ ರಾಜನ ಮೇಲೆ ತನಗೆ ಬಂದ ಸಂದೇಹ, ರಾಮರಾಜನು 'ಮೀಂ ಕೊಂಡು ಬಂದ ಆ ಕನ್ಯೆ, ಅವಳಿಗೂ ಸೆರೆಮನೆಯಿಂದ ಪಾರಾ ಹೆಂಗಸಿಗೂ ರಾಮರಾಜನಿಗೂ ಸಂಬಂಧವಿರಬೇಕೆಂಬ ತನ್ನ ಅನುಮಾ ಮೊದಲಾದುವನ್ನು ವಿವರಿಸಿ, "ರಾಜೇಂದ್ರ, ಇದರಲ್ಲಿ ಆ ರಾಮಯ ಮಾತ್ಯನ ಆಟವೂ ಸೇರಿದೆ. ಅವನು ಈ ಉಜ್ವಲ ಕನ್ಯೆಯನ್ನು ಉದಯಗಿರಿಯ ಗಜಪತಿ ನಂದಿನಿ ಮುಕ್ತಾಕುಮಾರಿ ಎನ್ನಿ ಅದಿಲ್‌ಷಹನಿಂದ ಏನೋ ಸಹಾಯಪಡೆಯುವ ಎತ್ತುಗಡೆ ನಡೆಯಿಸಿ ಬೇಕು. ಆ ಬಾಲೆಯಾದರೂ ಮುಕ್ತಾಕುಮಾರಿಗೆ ಸರಿ ಸಮಾ ಯಾಗಿಯೇ ಕಾಣುತ್ತಾಳೆ. ಚೆಲುವೇ ರೂಪುಗೊಂಡಹಾಗಿದೆ. ಒಳ್ ಕ್ಷಾತ್ರ ತೇಜಸ್ವಿನಿ. ಪರಮ ಚತುರೆ. ಖಂಡಿತವಾಗಿಯೂ ಆ ಚೋ ರಾಣಿಗೂ ಈ ಬಾಲಿಕೆಗೂ ನಿಕಟ ಸಂಬಂಧವೇ ಇದ್ದೀತು. ನೋಡಿದ ಸಣ್ಣ ಮಗುವಿನಂತೆ ಎತ್ತಿ ಮುದ್ದಾಡಬೇಕೆನ್ನಿಸುವುದೇ ಹೊರತ ಸೆರೆಗೂಡಿಸಲು ಮನಸ್ಸು ಬರುವುದಿಲ್ಲ. ಆ ಬಾಲೆಯನ್ನು ಇಲ್ಲಿಯ ಇರಿಸಿಕೊಳ್ಳುವುದರಿಂದ ಕರುವಿನ ಬಳಿಗೆ ಬರುವ ಹಸುವಿನಂತೆ ಅವ

ತಾನಾಗಿ ಇಲ್ಲಿಗೆ ಬಂದಾಳು" ಎಂದು ಹೇಳುತ್ತಿರುವಾಗ, ಬಾಗಿಲಿನವನು ಬಂದು "ಬಂದಿಗಳು ಬಂದಿರುವರೆಂದು" ಅರಿಕೆ ಮಾಡಿದನು.

ರಾಯನ ಆಜ್ಞೆಯಿಂದ ರಾಮರಾಜನೂ ತಿರುಮಲಾಕುಮಾರಿಯೂ ಒಳಗೆ ಬರಲ್ಪಟ್ಟರು. ಇಬ್ಬರೂ ರಾಯನಿಗೆ ಕೈಮುಗಿದರು.

* * *

ನೋಡಿದನು. ರಾಯನು ತಿರುಮಲಾ ಕುಮಾರಿಯನ್ನು ನೋಡಿದನು. ಆಶ್ಚರ್ಯವು ಅವನ ದೃಷ್ಟಿಯಲ್ಲಿ ತೇಲಿತು. ಯಾವುದೋ ಹಳೆಯ ಸ್ವಪ್ನವೊಂದು ಮೂರ್ತೀಭವಿಸಿದಂತಾಯಿತು. ಶೋಕವಿಚಾರಗಳು ಒಮ್ಮಿಂದೊಮ್ಮೆ ಅಡಗಿಹೋದುವು. ಮೂಕನಾಗಿ ನೋಡಿದನು. ತುಟಿಗಳು ಅಲುಗಿದುವು. ಅವುಗಳೆಡೆಯಿಂದ "ಮಗು! ಮಗು! ನನ್ನ ಗುರುತು ನಿನಗುಂಟೆ?" ಎಂಬ ಶಬ್ದಗಳು ಅಪ್ರಯತ್ನವಾಗಿ ಜಾರಿದವು. ತಿಮ್ಮರಸನು ಮಾತಾಡಿಸದೆ ಇರುತ್ತಿದ್ದರೆ ಅವನಿಗೆ ಅರಿವೇ ಬರುತ್ತಿದ್ದಿಲ್ಲವೇನೋ!

"ರಾಜೇಂದ್ರ, ಇದೇನು? ಈ ಹಸುಳೆಗೆ ನಿನ್ನ ಗುರುತು ಇರುವುದೆಂದರೇನು?" ಎಂದನು ತಿಮ್ಮರಸ.

ಒಡನೆಯೇ ರಾಯನು ಯಥಾಸ್ಥಿತಿಗೆ ಬಂದವನಾಗಿ, ಶುಷ್ಕವಾದ ನಗುವಿನಿಂದ ಮುಖಭಾವವನ್ನು ಮರೆಸಿಕೊಂಡು, ರಾಮರಾಜನನ್ನು ನೋಡಿ, "ನೀನು ಮಾಡಿದ ರಾಜದ್ರೋಹಗಳು ನಮ್ಮ ಗಮನಕ್ಕೆ ಬಂದಿವೆ. ರಾಮರಾಜ, ನೀನು ತಿಳಿದಿರುವ ರಹಸ್ಯಗಳನ್ನು ತಿಳಿಸಿದರೆ ನಿನ್ನನ್ನು ಕ್ಷಮಿಸಲ್ಪಡಬಹುದು. ಅಜ್ಞಾತಾದೇವಿಯ ನಿವಾಸಸ್ಥಾನವನ್ನು ನಮಗೆ ತೋರಿಸು. ಅಥವಾ ದಿಗ್ನಿರ್ದೇಶವನ್ನಾದರೂ ಮಾಡು" ಎಂದನು.

"ಸತ್ಯವಾಗಿಯೂ ನನಗೆ ಗೊತ್ತಿಲ್ಲ ಪ್ರಭು" ಎಂದನು ರಾಮರಾಜ, ತಲೆತಗ್ಗಿಸಿಕೊಂಡೇ.

"ಗೊತ್ತಿಲ್ಲ?" ರಾಯನು ಅವನನ್ನು ತೀಕ್ಷ್ಣದೃಷ್ಟಿಯಿಂದ ನೋಡಿದನು.

"ಇವರಿಗೆ ಗೊತ್ತಿಲ್ಲ!" ಎಂದು ತಿರುಮಲಾ ಕುಮಾರಿಯ ಕಂಠ

ದಿಂದ ಉತ್ತರ ಹೊರಟಿತು. ರಾಯನು ಮತ್ತೆ ಅವಳ ಕಡೆಗೆ ಚಕಿತಾ
ಕರ್ಷಿತನಾದನು. ಅವಳೆಂದಳು: "ಇವರಿಗೆ ನಿಜವಾಗಿಯೂ ಗೊತ್ತಿಲ್ಲ
ಮಹಾಪ್ರಭು! ಪರೋಪಕಾರಿಗಳೂ, ಆಪದ್ರಕ್ಷಕರೂ ಇವರಾಗಿದ್ದಾರೆ
ಹೆಚ್ಚೇನೂ ಇವರಿಗೆ ತಿಳಿಯದು. ಅದೆಲ್ಲವನ್ನೂ ನಿಜವಾಗಿ ಬಲ್ಲ
ಳೆಂದರೆ ನಾನೇ. ಆದುದರಿಂದ ಇವರನ್ನು ವ್ಯರ್ಥವಾಗಿ ಪ್ರಶ್ನೆ ಕೇ
ಪೀಡಿಸಬಾರದು!"ಎಂದಂದ ಅವಳ ಶಬ್ದಮಣಿಗಳನ್ನು ಕೇಳಿ ರಾಯನ
ಮುಗ್ಧನಾಗಿಬಿಟ್ಟನು.

ಆಗ ತಿಮ್ಮರಸನು "ಓಹೊ! ನೀನು ಬಲ್ಲೆಯಾ?" ಎಂದ
ಕೇಳಿದನು.

"ಬಲ್ಲೆ" ಎಂದಳು ತಿರುಮಲಾ.

"ತೋರಿಸುವಿಯಾ?"

"ತೋರಿಸುವೆನು. ಮೊದಲು ಆಪದ್ರಕ್ಷಕರಾದ ಈ ವೀ
ಮಹಾಶಯರನ್ನು ಬಿಡುಗಡೆಗೊಳಿಸಿ ಸ್ವತಂತ್ರರನ್ನಾಗಿ ಮಾಡಿರಿ."

"ಒಳ್ಳೇದು. ಹಾಗೇ ಆಗಲಿ" ಎಂದು ರಾಯನು, ರಾಮರಾ
ನನ್ನು ನೋಡಿ, "ರಾಮರಾಜ, ಈ ಬಾಲಿಕಾಮಣಿಯ ಪ್ರಾರ್ಥನೆಗಾ
ನಿನ್ನ ಕಠಿನ ದಂಡನೆಯನ್ನು ತಪ್ಪಿಸಿರುತ್ತೇನೆ. ಆದರೂ ನೀನು ರಾ
ಪರಾಮರ್ಶೆಯಲ್ಲಿ ನಿನ್ನ ಮನೆಯಲ್ಲಿಯೇ ಇರು" ಎಂದು ಆಣತಿಯಿತ್ತು
ಸೇವಕರನ್ನು ನೋಡಿ, "ಇವನನ್ನು ಕರೆದೊಯ್ಯಿರಿ. ಇವನ ಮೇ
ಸದಾ ಲಕ್ಷ್ಯವಿರಲಿ" ಎಂದು ಕಟ್ಟಳೆ ಕೊಟ್ಟು ಕಳುಹಿಸಿದನು.

ರಾಮರಾಜನು ರಾಜ-ಮಂತ್ರಿಗಳಿಗೆ ಅಭಿವಾದನೆ ಮಾಡಿ
ತಿರುಮಲೆಯನ್ನು ಭಾವಪೂರ್ಣಲೋಚನದಿಂದ ನೋಡಿ ಹೊರಟ
ಹೋದನು. ತಿರುಮಲೆ ಅವನನ್ನು ನೋಡಿ ಮುಗುಳ್ನಕ್ಕಳು.
ನಗು ನೋಟಗಳಲ್ಲಿ ಧೈರ್ಯವು ಬಿಂಬಿಸಿತ್ತು.

ರಾಯನು ತಿರುಮಲೆಯ ಎಳೆಯ ಕೈಗಳನ್ನು ಹಿಡಿದು, ಆದ
ದಿಂದ ತನ್ನ ಕಡೆಗೆ ಎಳೆದುಕೊಳ್ಳುತ್ತ, "ಈಗ ಹೇಳುವಿಯಾ ಕಂದ
ಆ ಕಳ್ಳರ ರಾಣಿ ಎಲ್ಲಿ ಅಡಗಿದ್ದಾಳೆ ಗೊತ್ತೇ?" ಎಂದನು.

"ಗೊತ್ತು" ಎಂದು ತಲೆಯಾಡಿಸಿದಳು ತಿರುಮಲಾ.

"ಆ ಭಯಂಕರ ನಾರಿಯ ವಾಸಸ್ಥಾನ ಸಣ್ಣ ಹುಡುಗಿಯಾದ ನಿನಗೆ ಹೇಗೆ ಗೊತ್ತು?" ರಾಯನ ಪ್ರಶ್ನೆ.

ತಿರುಮಲಾ ತನ್ನೊಳಗೆ 'ತನ್ನ ತಾಯಿಯ ವೈರಿಗಳಾದ, ತನ್ನ ತಂದೆಯನ್ನು ಶೂಲಕ್ಕೇರಿಸಿದವರಾದ ಆ ರಾಜ-ಮಂತ್ರಿಗಳು ಇವರೇ ಅಲ್ಲವೆ? ಆಹಾ! ಎಷ್ಟು ಪ್ರೀತಿಯ ನಟನೆಯನ್ನು ತೋರುತ್ತಿದ್ದಾರೆ?' ಎಂದು ನೆನೆದುಕೊಂಡು, ರಾಯನ ಹಸ್ತದಿಂದ ತನ್ನ ಕೈಯನ್ನು ಬಿಡಿಸಿಕೊಂಡು ಒಂದು ಹೆಜ್ಜೆ ಹಿಂದಿಟ್ಟು, "ದೂರ ನಿಂತೇ ಮಾತಾಡುತ್ತೇನೆ. ನೀವು ಕೇಳುವುದಕ್ಕೇ ಇಷ್ಟು ಸುಲಭವಾಗಿ ಉತ್ತರ ಕೊಡಲಾಗುವುದಿಲ್ಲ. ನಿಮ್ಮ ಇಬ್ಬರಲ್ಲಿ ಯಾರಾದರೊಬ್ಬರಿಗೆ ಮಾತ್ರವೇ ಹೇಳಿಯೇನು. ಅದೂ ಈಗಲ್ಲ. ನಾನು ಯೋಚನೆ ಮಾಡಲಿಕ್ಕಿದೆ. ತರುವಾಯ ನಿಮ್ಮಿಬ್ಬರಲ್ಲಿ ಯಾರಿಗೆ ಹೇಳಬೇಕೆಂದು ನನ್ನ ಮನೋದೇವತೆ ತಿಳಿಸುವುದೋ ಅವರಿಗೆ ಮಾತ್ರವೇ ಹೇಳುವೆನು" ಎಂದಳು.

ರಾಯನು ಹುಬ್ಬೆತ್ತಿ, ಮುಗುಳ್ನಗುವನ್ನು ಸೂಸುತ್ತಾ, "ಓಹೊ! ಬಹಳ ಮಂತ್ರಾಲೋಚನೆಯಾಗಬೇಕೇನು? ಅಷ್ಟರವರೆಗೆ ನನ್ನ ಬಳಿಯಲ್ಲಿರುವಿಯಾ? ಇಲ್ಲ ಮಂತ್ರಿ ತಿಮ್ಮರಸರ ಬಳಿಯಲ್ಲಿ ಇರುವಿಯಾ?"

"ಮಂತ್ರಿಗಳಿಗಿಂತ ರಾಜನೇ ಹೆಚ್ಚು, ಆದುದರಿಂದ ತಮ್ಮ ಬಳಿಯಲ್ಲಿಯೇ ಇರುವೆನು. ಆದರೆ—"

ತಿರುಮಲಾ ಅಲ್ಲಿಗೇ ನಿಲ್ಲಿಸಿದ್ದು ಕೇಳಿ ರಾಯನು "ಆದರೆ ಏನಾಯಿತು?" ಎಂದು ಕೇಳಿದನು.

"ನಾನು ನಿಮ್ಮ ಶತ್ರುವಾಗಿರುವುದರಿಂದ ನಿಮ್ಮಿಬ್ಬರ ಬಳಿ ಇರಲಿಕ್ಕೂ ಒಪ್ಪಲಾರೆನು."

ರಾಯನು ಅಚ್ಚರಿಯಿಂದ ಪುನಃ ಅವಳ ಕೈಯನ್ನು ಹಿಡಿದು "ಏನೇನು? ಇಷ್ಟು ಚಿಕ್ಕವಳಾದ ನೀನು ಇಷ್ಟು ದೊಡ್ಡವರಾದ ನಮಗೆ ಶತ್ರುವಾದ ಬಗೆ ಹೇಗೆ?" ಎನ್ನುತ್ತಾ ಅವಳ ಮುಖವನ್ನು ಕೂರ್ಮೆಯಿಂದ ನೋಡಿದನು.

ತಿಮ್ಮರಸನ ಮುಖದಲ್ಲಿ ನಗು ತಾಂಡವಿಸಿತು.

ತಿರುಮಲೆ ನೆಲವನ್ನು ನೋಡಿ ಅವುಡುಗಚ್ಚಿ "ಹೌದು. ನಾನು ನಿಮ್ಮ ಶತ್ರು. ನೀವು ಅರಸುವ ರಾಣೀ ಅಜ್ಞಾತಾದೇವಿಯೆಂದರೆ ನಾನೇ!"

"ನೀನು!"

"ನಾನೇ ರಾಣೀ ಅಜ್ಞಾತಾದೇವಿ!"

ರಾಯನು ಅವಳ ಮುಖವನ್ನು ದಿಟ್ಟಿಸಿ ನೋಡಿದನು. ಅವಳೂ ತನ್ನ ದೃಷ್ಟಿಯಿಂದ ಅವನ ದೃಷ್ಟಿಯನ್ನಿದಿರಿಸಿದಳು. ಇದ್ದಕ್ಕಿದ್ದ ಹಾಗೆ ರಾಯನಿಗೆ ಏನು ತೋರಿತೋ—"ಅಲ್ಲಲ್ಲ! ನೀನು ನನ್ನ ಮಗಳು. ನನ್ನ ಮುದ್ದು ಮಗಳು!" ಎನ್ನುತ್ತಾ ಅವಳನ್ನು ಮುಂದಕ್ಕೆಳೆದು ಗಲ್ಲವನ್ನು ಹಿಡಿದು, "ನೀನು ನನ್ನ ಮಗಳಾಗಿ ಇಲ್ಲಿಯೇ ಇರುವೆಯಾ?" ಎಂದು ಕೇಳಿದನು.

ಆಗತಾನೇ ರಾಯನ ಕಿರುಬೆರಳಿನಲ್ಲಿದ್ದ ಉಂಗುರ ತಿರುಮಲೆಯ ಕಣ್ಣಿಗೆ ಮಿಂಚಿತು. ಅದು ತಾಯಿಯ ಬೆರಳಲ್ಲಿದ್ದಂತಹುದೇ ಎಂದು ನೋಡಿ ಆಶ್ಚರ್ಯ ಪಟ್ಟಳು. ಆಶ್ಚರ್ಯವನ್ನು ತೋರಗೊಡದೆ, "ಇದೇನು? ಛೀ, ಮಹಾಪ್ರಭುಗಳಾಗಿ ಹೀಗೆಲ್ಲಾ ಮಾಡಬಹುದೆ?" ಎನ್ನುತ್ತ ಅವನ ಹಸ್ತಬಂಧನದಿಂದ ಹಿಂದಾಗಲು ಯತ್ನಿಸಿದಳು. ರಾಯನು ಬಿಟ್ಟರೆ ತಾನೆ! "ಮಗಳೇ, ನಿನ್ನ ತಂದೆ ಯಾರಮ್ಮ?" ಎಂದು ಕೇಳಿಯೇ ಬಿಟ್ಟನು.

"ತಂದೆ! ನನ್ನ ತಂದೆಯೆ?" ಎಂದು ವಟಗುಟ್ಟಿದಳು ತಿರುಮಲಾ. ಮುಂದೇನೂ ಹೇಳಲಿಲ್ಲ. ಅವಳ ದೃಷ್ಟಿಗಳು ಅಂತರ್ಮುಖವಾದವು. ರಾಯನ ಕೈಯನ್ನು ಕೊಡವಿಕೊಂಡು ದೂರ ಸರಿದು ನಿಂತಳು. ಕೋಪದ ಕೆಂಪು ಮತ್ತೆ ಅವಳ ಚೆಮ್ಮೊಗವನ್ನಾವರಿಸಿತು. ಒಡನೆಯೇ ಅದನ್ನು ಹಿಂದೂಡಿಕೊಂಡು ಬಂತು ತಾಯಿಯ ದುಃಖಸ್ಮರಣೆ. ಹೊಳೆಗಂಗಳು ತಳಕ್ಕನೆ ಕಂಬನಿದುಂಬಿದುವು. ಇದನ್ನು ಕಂಡು ರಾಯನು ಸಹಾನುತಾಪಗೊಂಡು, ಮುಂಬರಿದು ಬಂದು ತನ್ನ ಅನರ್ಘವಾದ ಅಂಗವಸ್ತ್ರದ ಕೊನೆಯಿಂದ ಅವಳ ಕಣ್ಣುಗಳನ್ನೊತ್ತಿ, "ಹೋಗಲಿ ಬಿಡೇ ನನ್ನ ಕಂದ! ನಿನ್ನ ಹೆಸರೇನಮ್ಮ?" ಎಂದು ಕೇಳಿದನು.

ತಿರುಮಲೆ ತನ್ನ ಕೊರಳನ್ನು ಸರಿಮಾಡಿಕೊಂಡು, "ಏಕೆ?

ನನ್ನ ಹೆಸರು ನಿಮಗೇಕೆ?" ಎಂದಳು.

"ತಿರುಮಲಾ ಎಂದು ಹೆಸರಂತೆ" ತಿಮ್ಮರಸನೆಂದ.

"ತಿರುಮಲಾ!" ಎಂದು ರಾಯನು ಬಾಯಿ ತೆರೆದನು. ಅವನ ಮುಖವೆಲ್ಲಾ ಕಣ್ಣಾಗಿ ಹೋಯಿತು. ಪರವಶನಾಗಿ, "ತಿರುಮಲಾ! ತಿರುಮಲಾ! ನನ್ನ ತಿರುಮಲಾ! ನನ್ನ ಮುದ್ದು ಮಗು ತಿರುಮಲೆಯೇ ನೀನು? ನನ್ನ ಚಿನ್ನಾದೇವಿಯ ಮಗುವೇ ನೀನು?-ಬಾ ಬಾ ಬಾ! ತಿರುಮಲಾ! ನನ್ನ ಮಗು! ಕಂದ!" ರಾಯನು ಇಕ್ಕೈಗಳಿಂದಲೂ ಬಾಲೆಯನ್ನೆಳೆದು ಬಾಚಿ ತಬ್ಬಿ, ತಲೆಯನ್ನು ತಡವಿ, ಮುಂಗುರುಳನ್ನು ನೀವಿ, ಕಪೋಲವನ್ನೆತ್ತಿ ಮುದ್ದು ಮುಖವನ್ನು ದಿಟ್ಟಿಸುತ್ತ "ಆಹಾ! ಹೌದು. ಇದು ಅದೇ ನನ್ನ ಮುದ್ದು ತಿರುಮಲೆಯ ಮುಖ! ನನ್ನ ಪ್ರಿಯ ಚಿನ್ನಾದೇವಿಯ ಅಚ್ಚಿನಲ್ಲಿಯೇ ಎರಕ ಹೊಯ್ದ ಮುಖವಿದು. ಎಷ್ಟು ದೊಡ್ಡವಳಾಗಿರುವಿಯಲ್ಲವಮ್ಮಾ? ಕಂದ! ನಿನ್ನ ತಾಯಿ ಎಲ್ಲಿರುವಳೆ?" ಎಂದು ಕೇಳಿದನು.

ಒಂದೂ ತಿಳಿಯದೆ ತಿರುಮಲಾ ಭ್ರಮಿಸಿದಳು. ಅದೇನೋ ಒಂದು ಅವ್ಯಕ್ತವಾದ ಆನಂದದಿಂದ, ಪಿತೃವಾತ್ಸಲ್ಯದ ಮಧುರಾನುಭವದಿಂದಲೋ ಏನೋ ಅವಳು ಪುಲಕಿತಗಾತ್ರಳಾಗುತ್ತಿದ್ದಳು. ಪಿಳಿ ಪಿಳಿ ನೋಡುತ್ತಿದ್ದಳು ರಾಯನ ಮುಖವನ್ನೇ.

ರಾಯನು ಕಟ್ಟು ಮೀರಿದ ವಾತ್ಸಲ್ಯದಿಂದ ಅವಳ ಮೈಕೈಗಳನ್ನು ತಡವುತ್ತ ಬಾರಿಬಾರಿಗೆ ಕೆಂಜಿ ಕೆಂಜಿ ಕೇಳತೊಡಗಲು, ಬಾಲೆ ಅರಿವಿಗೆ ಬಂದು "ಇದೇನಿದೇನು? ನಿಮಗೇನಾಯಿತು? ನನ್ನನ್ನು ಯಾರೆಂದು ತಿಳಿದಿರಿ? ಚಿನ್ನಾ! ಚಿನ್ನಾ ಎನ್ನುವಿರಲ್ಲ! ಆ ಮುಸಲ್ಮಾನರು ನನ್ನನ್ನು ಮುಕ್ತಾ ಮುಕ್ತಾ ಎಂದು ಭ್ರಮಿಸಿದರು. ನೀವೋ ಮಗಳೇ ಮಗಳೇ ಎನ್ನುತ್ತೀರಿ!" ಎಂದಳು.

"ಸತ್ಯ ಮಗಳೇ. ನೀನು ನನ್ನ ಚಿನ್ನಾದೇವಿಯ ಮಗಳು ಹೌದಷ್ಟೆ?" ರಾಯನ ಪ್ರಶ್ನೆ.

ತಿರುಮಲೆ ಕಟ್ಟಚ್ಚರಿಯಿಂದ ರಾಯನ ಮೋರೆಯನ್ನು ನೋಡುತ್ತ "ನಿಮ್ಮ ಚಿನ್ನಾದೇವಿಯ ಮಗಳು ನಾನಲ್ಲ. ಆದರೆ ನನ್ನ ತಾಯಿಯ

ಹೆಸರು ಚಿನ್ನಾದೇವಿಯೆಂಬುದು ನಿಜ. ಆ ಹೆಸರೇ ಯಾರಿಗೂ ತಿಳಿಯ
ದಿರುವಾಗ–" ಎಂದು ನುಡಿಯುವಷ್ಟರಲ್ಲಿ "ನನಗೆ ತಿಳಿಯಿತು. ಕಂದಾ
ನಿನ್ನ ತಾಯಿಯೇ ನನ್ನ ರಾಣಿ ಚಿನ್ನಾ. ನನ್ನ ಪ್ರೇಮ ರಾಣಿ! ಪಟ್ಟ
ರಾಣಿ ಅವಳೇ! ಮಗೂ, ತಿರುಮಲಾ! ನಾನೇ ನಿನ್ನ ನಿರ್ಭಾಗ್ಯ ತಂದೆ
ಆಹಾ! ಮೂರು ವರ್ಷದ ಮಗುವಾಗಿದ್ದಾಗ ನಿನ್ನನ್ನು ಅಗಲಿದ ನಾನ
ಈಗ ನಿನ್ನನ್ನು ಕಂಡೆನೆ? ನನ್ನ ಕಣ್ಣು ಏನು ಪುಣ್ಯಮಾಡಿತೋ!
ಎನ್ನುತ್ತಾ ರಾಯನು ಅವಳನ್ನು ಮಡಲಲ್ಲಿ ಕುಳ್ಳಿರಿಸಿಕೊಂಡು ಮುಂಗ
ರುಳನ್ನು ತೀಡಲಾರಂಭಿಸಿದನು.

"ಏನಾಶ್ಚರ್ಯವೋ, ನನ್ನ ತಂದೆಯ ಹೆಸರು ಶ್ರೀ ವಿರೂಪಾಕ್ಷ
ರಾಯರು ? ನಿಮ್ಮ ಹೆಸರೋ ಶ್ರೀ ಕೃಷ್ಣ...."

"ನಾನೇ ಆ ವಿರೂಪಾಕ್ಷನು. ಅಪವಾದ ಭೀತಿಯಿಂದ ಮುದ್ದು
ಮಗಳಾದ ನಿನ್ನನ್ನೂ, ಧರ್ಮಪತ್ನಿಯಾದ ಚಿನ್ನಾದೇವಿಯನ್ನೂ ಅಗಲಿ
ಕಲ್ಮನನಾಗಿ ರಾಜಭೋಗದಲ್ಲಿ ಮೆರೆಯುತ್ತಿರುವ ನಿನ್ನ ತಂದೆಯಾದ
ಆ ವಿರೂಪಾಕ್ಷನೇ ನಾನು" ಎನ್ನುತ್ತಾ ರಾಯನು ಪುನಃ ಪುನ
ಅವಳ ಮುಖವನ್ನು ತನ್ನೆದೆಗೆ ಒತ್ತಿಕೊಂಡನು.

ವಿಸ್ಮಯ ವಿಸ್ಫಾರಿತಲೋಚನನಾಗಿ, ಆ ಪಿತಾ ಪುತ್ರಿಯ
ವಿಚಿತ್ರಾನಂದದ ಸಂಯೋಗವನ್ನು ನೋಡುತ್ತಿದ್ದ ತಿಮ್ಮರಸನು ಮೆ
ನೆದ್ದು "ರಾಜೇಂದ್ರ, ಪ್ರಕೃತ ನನಗೆ ಅಪ್ಪಣೆಕೊಡು. ತಂದೆ–ಮಗ
ಳಾದ ನಿಮ್ಮನ್ನು ನೋಡಿ ನನಗೆ ಪರಮಾನಂದವಾಯಿತು" ಎಂದನು.

ರಾಯನು "ಅಪ್ಪಾಜಿ, ಕುಳಿತುಕೊಳ್ಳಿರಿ. ಇನ್ನೂ ಅನೇಕ
ವಿಷಯಗಳನ್ನು ತಿಳಿದುಕೊಳ್ಳೋಣ" ಎಂದನು.

"ನನಗೆಲ್ಲವೂ ತಿಳಿಯಿತು. ನೀನು ಯಥೇಷ್ಟವಾಗಿ ನಿನ್ನ ಕುಮಾ
ಯೊಂದಿಗೆ ಮಾತಾಡಿಕೊಂಡಿರು. ಆಮೇಲೆ ನನಗೆ ತಿಳಿಸತಕ್ಕಂತಹದೇನಾ
ದರೂ ಇದ್ದರೆ ತಿಳಿಸುವಿಯಂತೆ. ಮನ್ನಿಸು. ಈಗ ನಾನು ಹೋಗಿ ಬರುವೆ
ಎಂದು ತಿಮ್ಮರಸನು ರಾಯನ ಅಪ್ಪಣೆಗೊಂಡು ಹೊರಟುಹೋದನು

ಆಗ ತಿಮ್ಮರಸನು ತನ್ನ ಮನಸ್ಸಿನಲ್ಲಿ ಅನೇಕ ಬಗೆಯ ಊಹನೆ
ಗಳನ್ನು ಮಾಡಿಕೊಳ್ಳುತ್ತಿದ್ದನು.

## ೨೦

ರಾಯನು ತನ್ನ ಹೃದಯದಲ್ಲಿ ಹಿಡಿಸಲಾರದ ವಾತ್ಸಲ್ಯವನ್ನು ಹೊರಸೂಸುತ್ತ ಬಗೆಬಗೆಯ ಹಣ್ಣು ಹಂಪಲು, ತಿಂಡಿ ತಿನಸುಗಳನ್ನು ತರಿಸಿ ಮಗಳ ಬಾಯಿಗೆ ತುರುಕುತ್ತ ಮುದ್ದು ಮಾಡಿದನು. ಕುತೂಹಲವನ್ನು ತಾಳಲಾರದೆ ಅನೇಕ ಪ್ರಶ್ನೆಗಳನ್ನು ಮೇಲಿಂದ ಮೇಲೆ ಮಾಡಿದನು. ಅದಕ್ಕೆಲ್ಲಾ ಒಮ್ಮೆಲೆ ಉತ್ತರ ಕೊಡಲು ಆ ಕಿಶೋರಿಗೆ ಸಾಧ್ಯವಾಗದೇ ಹೋಯಿತು. ಅವಳು ಇನ್ನೂ ತನ್ನನ್ನು ತಂದೆ ಎಂದು ನಂಬಲಿಲ್ಲವೆಂದು ಭಾವಿಸಿ ರಾಯನು ಅವಳನ್ನೊಂದು ಏಕಾಂತ ಮಂದಿರಕ್ಕೆ ಕರೆದೊಯ್ದು, ಒಂದು ದಂತದ ಪೆಟ್ಟಿಗೆಯನ್ನು ತೆರೆದು, ಅದರೊಳಗಿಂದೊಂದು ಸಣ್ಣ ಖಡ್ಗವನ್ನು ತೆಗೆದು, ಅದರ ಹಿಡಿಕೆಯಲ್ಲಿರುವ ಹೆಸರನ್ನು ಅವಳಿಗೆ ತೋರಿಸಿದನು. 'ಚಿನ್ನಾ' ಎಂದು ತಿರುಮಲೆ ಓದಿದಳು.

"ಈ ಖಡ್ಗದ ಕತೆಯನ್ನು ಹೇಳಲೇ ಕಂದ? ನಿನ್ನ ತಾಯಿಯದು ಖಡ್ಗವಿದು. ನಿನ್ನ ತಾಯಿಗೂ ನನಗೂ ಪ್ರಥಮ ಸಂದರ್ಶನವನ್ನು ಮಾಡಿಸಿದ್ದು ಈ ಖಡ್ಗವೇ. ಆಗ ನಿನ್ನಮ್ಮ ನಿನ್ನ ಹಾಗೆಯೇ ಹುಡುಗಿಯಾಗಿದ್ದಳು. ಕೇಳು, ಅಂದು ಚಂಪಲ್ಲಿ ಎಂಬ ಗ್ರಾಮದಲ್ಲಿ ಓಂಕಾರೇಶ್ವರ ದೇವಾಲಯದ ಉತ್ಸವವು ನಡೆಯುತ್ತಿತ್ತು. ಆಗ ಉತ್ಸವದ ಒಂದು ಅಂಗವಾಗಿ, ದೇವಾಲಯದ ಹೊರಗೆ ವಿಸ್ತಾರವಾದ ಪಟಾಂಗಣ

ದಲ್ಲಿ ಬಾಲ ವಿದ್ಯಾ ಪ್ರದರ್ಶನವೊಂದು ನಡೆಯಿತು. ನೋಟಕರ ಗುಂಪಿನಲ್ಲಿ ನಾನೂ ಸೇರಿದ್ದೆ. ಆ ಪ್ರದರ್ಶನದಲ್ಲಿ ಒಬ್ಬಳು ವೀರ ಬಾಲೆಯ ಯುದ್ಧಕೌಶಲವು ಎಲ್ಲರನ್ನೂ ಬೆರಗುವಡೆಸಿತು. ಬಿಲ್ಲು ಬಿಡುವುದರಲ್ಲಿಯೂ, ಕತ್ತಿ ಬೀಸುವುದರಲ್ಲಿಯೂ, ದೊಣ್ಣೆ ತಿರುವುದರ ಲ್ಲಿಯೂ, ಎಲ್ಲಾ ಬಾಲ-ಬಾಲಿಕೆಯರನ್ನೂ ಮೀರಿಸಿ, ಆ ಬಾಲೆಯೇ ಯುದ್ಧರಾಣಿಯಂತೆ ಮೆರೆದಳು. ನಾನಂತೂ ಬಲು ಮೆಚ್ಚಿ ಸಂತೋಷ ವನ್ನು ತಾಳಲಾರದೆ, ಸರಸರನೆ ಅವಳ ಬಳಿಗೆ ನಡೆದು ನನ್ನ 'ಶಕ್ತೀ ಖಡ್ಗ' ಎಂಬ ಕತ್ತಿಯನ್ನು ಅವಳಿಗೆ ಬಹುಮಾನವಾಗಿ ಕೊಡಲಿಕ್ಕೆ ನೀಡಿದೆ. ಆಗ ಅವಳು ಏನೆಂದಳು ಗೊತ್ತೆ ?"

"ಏನೆಂದಳು ?"

"'ನನ್ನ ಕೈಯ ಕತ್ತಿಯನ್ನು ನೀವು ಬೀಳಗೆಡಹಿದರೆ ನಿಮ್ಮ ಖಡ್ಗವನ್ನು ಸ್ವೀಕರಿಸಿಯೇನು' ಎಂದಳು. ಅವಳೋ ಹದಿನಾಲ್ಕು ವರ್ಷದ ಬಾಲೆ. ನಾನೋ ಇಪ್ಪತ್ತೈದು ವರ್ಷದ ತರುಣ. ನನಗೂ ಅವಳಿಗೂ ಜೋಡೇ ತಿರುವುಲಾ ? ಆದರೂ ಅವಳು ನನ್ನೊಡನೆ ಯುದ್ಧಕೇಳಿಯಾಡದೆ, ನನ್ನ ಶಕ್ತೀಖಡ್ಗವನ್ನು ಸ್ವೀಕರಿಸಲು ಒಪ್ಪದೇ ಹೋದುದರಿಂದ ಅವಳೊಡನೆ ಕಾಳೆಗಕ್ಕೆ ತೊಡಗಲೇಬೇಕಾಯಿತು. ಪರಿಣಾಮವೇನಾಯಿತು ಹೇಳು ನೋಡೋಣ ?"

"ಅವಳು ನಿಮ್ಮ ಮಾನ ಕಾಪಾಡಬೇಕೆಂದು ತಾನೇ ತನ್ನ ಕತ್ತಿ ಯನ್ನು ಕೆಳಗೆ ಹಾಕಿ ಸೋತಿರಬಹುದು !"

"ಆಹಾ ! ಜೋರಿದ್ದಿ ನೀನು. ಹಾಗೇ ಇದ್ದೀತು. ಅವಳ ಕತ್ತಿ ಅವಳ ಕೈತಪ್ಪಿ ಆಕಾಶಕ್ಕೆ ಹಾರಿತು. ನಾನು ಅದನ್ನು ಕೆಳಗೆ ಬೀಳದಂತೆ ಎಡಗೈಯಿಂದ ಹಿಡಿದುಕೊಂಡೆನು. ಆಮೇಲೆ ನನ್ನ 'ಶಕ್ತೀ ಖಡ್ಗ'ವನ್ನು ಅವಳಿಗೆ ಕೊಟ್ಟೆನು. ಅವಳ ಈ ಸಣ್ಣ ಕತ್ತಿ ಒಂದು ಆಭರಣದ ಹಾಗೆ ಯಾವಾಗಲೂ ನನ್ನ ಟೊಂಕದಲ್ಲಿ ಸೇರಿತು."

"ಆಮೇಲೆ ಆ ಹುಡುಗಿಯನ್ನು ನೀವು ಏನು ಮಾಡಿದಿರೊ ?"

"ಏನು ಮಾಡಿದೆ ಹೇಳು ನೋಡೋಣ ?"

"ನನಗೇನು ಗೊತ್ತು ? ನಾನಿದ್ದೆನೇ ಆಗ ?"

ಕೃಷ್ಣದೇವರಾಯನು ನಕ್ಕು, "ನಾನು ಅವಳನ್ನು ಮದುವೆ ಮಾಡಿಕೊಂಡೆನು. ಅವಳ ಕುಲಗೋತ್ರಗಳು ಯಾರಿಗೂ ಗೊತ್ತಿಲ್ಲದಿದ್ದರೂ, ಆ ಅನಾಥ ಭದ್ರಪ್ಪನ ಮಗಳು ಚಿನ್ನಾದೇವಿಯನ್ನು ನಾನು ಮದುವೆಮಾಡಿಕೊಂಡೆನಮ್ಮ. ಅನೇಕ ವರ್ಷಗಳ ಮೇಲೆ ಈ ಪುತ್ರಿಕಾರತ್ನವು ಅವಳ ಹೊಟ್ಟೆಯಲ್ಲಿ ಹುಟ್ಟಿತು. ನಾನು, ಈ ಸಿಂಹಾಸನದ ಧರ್ಮವನ್ನು ಕಾಪಾಡಲಿಕ್ಕಾಗಿ ಆ ಪ್ರೇಮಪತ್ನಿಯನ್ನೂ, ಈ ಪುತ್ರೀರತ್ನವನ್ನೂ ತ್ಯಾಗಮಾಡಬೇಕಾಯಿತು. ನಾನು ಕಟ್ಟಕಡೆಗೆ ಅವಳನ್ನು ಅಗಲುವಾಗ ನನ್ನ ಪುಣ್ಯವಶದಿಂದ ಅವಳ ಈ ಸಣ್ಣ ಖಡ್ಗವು ನನ್ನ ಟೊಂಕದಲ್ಲೇ ಇತ್ತು. ಇದರಿಂದ ಅಡಿಗಡಿಗೆ ಅವಳ ಜ್ಞಾಪಕವು ಬರಬಾರದೆಂತಲೇ ಇದನ್ನು ಈ ಪೆಟ್ಟಿಗೆಯೊಳಗೆ ಅಡಗಿಸಿಟ್ಟೆ. ತಿರುಮಲಾ, ಈ ಖಡ್ಗವು ನಿನ್ನ ಟೊಂಕಕ್ಕೆ ಎಷ್ಟು ಶೋಭಿತವಾಗಿದೆ ನೋಡು!" ಎಂದಂದು ಆ ಖಡ್ಗವನ್ನು ಮಗಳ ಟೊಂಕಕ್ಕೆ ಕಟ್ಟಿ ಚಂದ ನೋಡಿದನು.

ತಿರುಮಲಾ, ತಾಯಿ ಪೂಜಿಸುತ್ತಿದ್ದ ಆ ಶಕ್ತೀಖಡ್ಗವನ್ನು ಈಗ ತನ್ನೊಳಗೇ ನೆನೆದುಕೊಳ್ಳುತ್ತ. "ಅಪ್ಪಾ, ನಿಮ್ಮನ್ನು ಅಪ್ಪಾ ಎಂದು ಕರೆಯುವಾಗ ನನಗೆ ಹೇಗೆ ಹೇಗೋ ಆಗುತ್ತದೆ."

"ನನಗೂ ಹಾಗೆಯೇ ಮಗೂ, ಕರೆಯೇ ಕಂದ, ಬಾಯಿತುಂಬಾ 'ಅಪ್ಪಾ' ಎಂದು ಕರೆಯಮ್ಮ."

"ಅದಿರಲಿ, ಅಪ್ಪಾ, ಈಗ ನೀವು ಕುಲಹೀನೆಯಾಗಿರುವ ನನ್ನ ತಾಯಿಯನ್ನು ಏನುಮಾಡಬೇಕೆಂದಿದ್ದೀರಿ?" ಎಂದು ಕೇಳಿಬಿಟ್ಟಳು ತಿರುಮಲಾ.

ಇದು ರಾಯನ ಹೃದಯವನ್ನು ತಿವಿದಂತಾಯಿತು. 'ಕುಲಹೀನೆ-ಕುಲಹೀನೆ! ಹಾ!' ಎಂದು ಒಂದು ನಿಮಿಷ ಯೋಚಿಸಿ "ಏನುಮಾಡಲಿ? ಕ್ಷಮೆಯನ್ನೇ ಕೇಳಬೇಕಲ್ಲದೆ ಮತ್ತೇನು ಮಾಡಲಿಕ್ಕೂ ನಾನು ಶಕ್ತನಲ್ಲವೆಂದೇ ಕಾಣುತ್ತದೆ. ಅವಳು ನಿಜವಾಗಿಯೂ ಸತ್ಕುಲಪ್ರಸೂತಳಾದ ಕ್ಷಾತ್ರನಾರಿ ಎನ್ನಲು ಸಂದೇಹವಿಲ್ಲದಿದ್ದರೂ ಲೋಕಕ್ಕೆ ಗೊತ್ತಾಗದಲ್ಲವೆ? ಅಯ್ಯೋ, ಈಗಾದರೂ ಅವಳ ತಂದೆಯು

ಹೆಸರು ಗೊತ್ತಾಗಿದ್ದರೆ ಎಷ್ಟು ಒಳ್ಳೆಯದಿತ್ತು!" ಎಂದು ತನಗೆ ತಾನೇ ಹೇಳಿಕೊಳ್ಳುವಂತೆ ಹೇಳಿಕೊಂಡು, "ತಿರುಮಲಾ, ಅಂದು ನಾನು ನಿಮ್ಮನ್ನೆಲ್ಲಾ ಕಡೆಯಬಾರಿ ಅಗಲುವಾಗ ಭದ್ರವ್ವನು ಕಾಹಿಲೆಯಲ್ಲಿದ್ದಳು. ಈಗ ಆ ಭದ್ರವ್ವ ಇದ್ದಾಳೆಯೆ ?"

"ಅಜ್ಜಿ ಎಂದೋ ತೀರಿಹೋಗಾಯಿತಲ್ಲಾ! ನನಗೂ ಮಸಮಸಕಾಗಿ ನೆನಪಿದೆ. ಅಪ್ಪಾ, ನನ್ನ ತಾಯಿಯ ವಿಷಯದಲ್ಲಿ ಮುಖ್ಯವಾದ ರಹಸ್ಯವಿದೆ. ಆದರೆ ನನ್ನ ತಾಯಿಯ ಅನುಮತಿಯಿಲ್ಲದೆ ನಾನೊಂದೂ ಹೇಳಲಾರೆ. ಅಪ್ಪಾ, ನಿಮಗೆ ಧೈರ್ಯವುಂಟೆ ?"

"ಏತಕ್ಕೆ ಹಾಗೆ ಹೇಳುತ್ತೀಯಮ್ಮ?"

"ಮತ್ತೇನಿಲ್ಲ, ನೀವು ರಹಸ್ಯದಲ್ಲಿ ಏಕಾಂಗಿಗಳಾಗಿ ನನ್ನೊಂದಿಗೆ ಬರುವುದಾದರೆ ನಿಮಗೆ ಅಜ್ಞಾತಾದೇವಿಯ ದರ್ಶನ ಮಾಡಿಸುವೆನು. ಆಗ ನಿಮಗೆ ಎಲ್ಲಾ ಸಾಕ್ಷಾತ್ಕಾರವಾದೀತು. ಆದರೆ ನಿಮ್ಮಂಥ ದೊಡ್ಡ ದೊಡ್ಡ ರಾಜರು ಕಡೆಗೆ ಅಂಗರಕ್ಷಕರಾರೂ ಇಲ್ಲದೆ ಎಲ್ಲಿಗೂ ಹೋಗಲಾರರಷ್ಟೆ? ಅದಕ್ಕೇ ಹಾಗೆ ಕೇಳಿದೆನು."

"ಹಾಗೆಯೇ ಆಗಲಿ" ಎಂದು ರಾಯನು ಒಪ್ಪಿದನು. ಅಂದು ಕಾಲವು ಅತಿಕ್ರಮಿಸಿದುದರಿಂದ ನಾಳೆ ರಾತ್ರಿ ಹೊರಡುವುದಾಗಿ ಗೊತ್ತು ಮಾಡಿಕೊಂಡರು.

ಮರುದಿನ ಮಧ್ಯಾಹ್ನದ ಸಮಯದಲ್ಲಿ, ರಾಯನು ತಿರುಮಲಾಗೆ ರಾಜಭವನಗಳ ವಿಶೇಷವನ್ನು ತೋರಿಸುತ್ತಿದ್ದಾಗ, ಸೇವಕನು ಒಂದು ಪತ್ರವನ್ನು ತಂದು ರಾಯನಿಗೆ ಸಮರ್ಪಿಸಿದನು. ಅದರಲ್ಲಿ ಹೀಗಿತ್ತು:

"ಶ್ರೀಮತ್ಕರ್ಣಾಟಕ ರಾಜ್ಯರಮಣನೆಂದು ಬಿರುದಾಂಕಿತನಾಗಿ, ವಿಜೃಂಭಿಸುವ ಶ್ರೀ ಕೃಷ್ಣದೇವರಾಯನಿಗೆ,

ನೀನು ನನ್ನ ಪ್ರಿಯ ಕುಮಾರಿಯಾದ, ತಿರುಮಲಾ ಎಂಬ ಹದಿನಾಲ್ಕು ವರ್ಷ ಪ್ರಾಯದ ಹುಡುಗಿಯನ್ನು ನಿನ್ನ ಸೌಧದಲ್ಲಿ ನಿರ್ಬಂಧಿಸಿರುವುದಾಗಿ ತಿಳಿದುಬಂದಿದೆ. ಇದೆಂತಹ ಅನ್ಯಾಯ! ರಾಜೇಂದ್ರ, ನನ್ನ ಕುಮಾರಿಯನ್ನು ಇಂದು ರಾತ್ರಿಯಲ್ಲಿ ಅವಳ 'ಚತುರ' ಎಂಬ

ಕುದುರೆಯ ಮೇಲಿರಿಸಿ ಕಳುಹಿಸಿಕೊಡುವಿಯಾದರೆ, ನಿನ್ನ ಮೇಲೆ ನನಗೆ ಕೊಂಚವಾದರೂ ಒಳ್ಳೆಯ ಭಾವನೆಯುಂಟಾದೀತು. ಮತ್ತು ಅವಳೊಂದಿಗೆ ನೀನೂ ಧೈರ್ಯಶಾಲಿಯಾಗಿ ಹೊರಟುಬರಬೇಕೆಂದು ಕೋರಿಕೊಳ್ಳುತ್ತೇನೆ. ಅಪಾಯ, ಶಂಕೆ ಕಿಂಚಿತ್ತೂ ಇಲ್ಲ. ಸುಳ್ಳು ಹೇಳಿ ಮೋಸ ಮಾಡುವವಳು ನಾನಲ್ಲ. ನಿನಗೊಂದು ಮುಖ್ಯವಾದ ಕಾಣಿಕೆಯನ್ನು ಕೊಡಲು ಕಾದಿರುತ್ತೇನೆ.

ಇತಿ ದುಷ್ಟರಾಜಕುಮಾರಿಣಿ,<br>
ರಾಣೀ ಅಜ್ಞಾತಾ."

ಈ ಪತ್ರವನ್ನು ರಾಯನು ಎರಡು ಮೂರು ಬಾರಿ ಓದಿ, "ಆಹಾ! ಚಿನ್ನಾ! ನಿನ್ನ ಪತಿಯನ್ನು ಹೀಗೂ ವಂಚಿಸುವುದೆ?" ಎನ್ನುತ್ತಾ ಪರವಶತೆಯಿಂದ ಆ ಪತ್ರವನ್ನು ತನ್ನೆದೆಗೆ ಒತ್ತಿಕೊಂಡನು. ಬಳಿಕ ಆ ಪತ್ರವನ್ನು ತಂದ ಮನುಷ್ಯನನ್ನು ಬರಮಾಡಿಸಿ "ಮಗೂ, ಇವನನ್ನು ಬಲ್ಲೆಯಾ?" ಎಂದು ಕೇಳಿದನು.

"ಬಲ್ಲೆ" ಎಂದು ತಿರುಮಲಾ ಆತನನ್ನು ಕುರಿತು, "ಮಾರಪ್ಪಾ, ತಾಯಿ ಕ್ಷೇಮವಾಗಿರುವಳೆ?" ಎಂದು ಕೇಳಿದಳು.

"ಇರುವರಮ್ಮಾ" ಎಂದನು ಮಾರಪ್ಪ.

"ಒಳ್ಳೆಯದು ಮಾರಪ್ಪ, ನೀನು ಹೋಗಿ ಇಂದು ರಾತ್ರಿ ಮಹಾರಾಜರೊಂದಿಗೆ ನಾನು ಬರುತ್ತೇನೆಂದು ಅಮ್ಮನಿಗೆ ಹೇಳು" ಎಂದು ತಿರುಮಲಾ ಮಾರಪ್ಪನನ್ನು ಕಳುಹಿಸಿದಳು.

## ೨೧

ಗೊತ್ತುಮಾಡಿದಂತೆ ರಾತ್ರಿ ಮೊದಲನೇ ಯಾಮದಲ್ಲಿ ರಾಯನೂ ತಿರುಮಲಾ ಬಾಲೆಯೂ ಹೊರಪಂಟರು. ತಿರುಮಲೆ ಅವಳ ಪ್ರಿಯ ಚತುರ ಕುದುರೆಯ ಮೇಲೆಯೇ ಆರೂಢಳಾಗಿದ್ದಳು. ರಾಯನು ರಾಜಭೂಷಣವನ್ನು ಬಿಟ್ಟು ಸಾದಾ ಪೋಷಾಕಿನಿಂದ ಉತ್ತಮವಾದ ಕುದುರೆಯ ಮೇಲೆ ಆರೋಹಿಸಿದ್ದನು. ಅರಮನೆಯ ರಕ್ಷಕ ಭಟರ ಮುಖ್ಯಸ್ಥನಿಗೆ, ತಾನು ಹೊರಟಿರುವ ವಿಷಯವನ್ನು ಬಹಿರಂಗಪಡಿಸ ಕೂಡದೆಂತಲೂ, ಯಾರಾದರೂ ಕೇಳಿದರೆ ಒಳಗಿರುವರೆಂಬ ಅರ್ಥವನ್ನು ತೋರಿಸಿ, ಯಾರನ್ನೂ ಒಳಗೆ ಬಿಡಬಾರದೆಂತಲೂ ಕಟ್ಟುಮಾಡಿದ್ದನು. ಹೀಗೆ ತಂದೆಯೂ ಮಗಳೂ ನಾಗಲಾಪುರದ ದ್ವಾರವನ್ನು ದಾಟಿ, ದಕ್ಷಿಣದ ಕಡೆಗೆ ಮಾರ್ಗಕ್ರಮಣ ಮಾಡಿದರು.

ಶುಕ್ಲದ್ವಾದಶಿಯ ಚಂದ್ರನು ಶುಭ್ರಾಭ್ರದಲ್ಲಿ ತೇಲುತ್ತಿದ್ದನು. ಬೆಳುದಿಂಗಳು ಸ್ವಚ್ಛವಾಗಿಯೂ ಸೊಗಸಾಗಿಯೂ ಇತ್ತು. ದೂರ ದೂರದಲ್ಲಿ ಮರಮುಟ್ಟುಗಳು ಪಿಶಾಚಾಕಾರದಿಂದ ನಿಂತಿದ್ದುವು. ಅಲ್ಲಲ್ಲಿ ದೂರದೂರವಾಗಿ ಗುಪ್ಪೆಗುಪ್ಪೆಯಾದ ಗುಡ್ಡಗಳು ಆಕಾಶಕ್ಕೆ ಅಡ್ಡಡ್ಡ ವಾಗಿ ಕಾಣುತ್ತಿದ್ದುವು. ಸ್ವಲ್ಪ ದೂರದಲ್ಲಿ ಪ್ರಕೃತಿಯ ಕೋಟೆಯಂತೆ ಸೊಂಡೂರು ಬೆಟ್ಟಗಳ ಸಾಲು ಕಪ್ಪಾಗಿ ಕಾಣುತ್ತಿತ್ತು.

ದಾರಿಯಲ್ಲಿ ಹತ್ತಿದ ಮೊದಲನೆಯ ಗ್ರಾಮದಲ್ಲಿ ಇನ್ನೊಬ್ಬ

ಅಶ್ವಾರೋಹಿ ಅವರಿಗೆ ಇದಿರಾಗಿ "ಜಯದೇವಿ" ಎಂದನು. "ಜಯ ಕಾಳಿ" ಎಂದು ತಿರುಮಲಾ ಉತ್ತರಿಸಿದಳು. ಅವನು ಅಜ್ಞಾತಾ ದೇವಿಯ ಆಜ್ಞೆಯಿಂದ ಅವರನ್ನು ಕರೆದೊಯ್ಯಲಿಕ್ಕಾಗಿ ಕಾದಿದ್ದನು. ಅವನು ದಾರಿ ತೋರಿಸುತ್ತ ಮುಂದೆ ನಡೆಯಲು, ಇಬ್ಬರೂ ಅವ ನನ್ನು ಅನುಸರಿಸಿದರು. ಅರ್ಧರಾತ್ರಿಯಲ್ಲಿ ಮೂರು ಕುದುರೆಗಳ ಠಣ ಠಣಾತ್ಕಾರವನ್ನು ಕೇಳಿ ಎಲ್ಲಿಯೋ ಕೆಲವು ನಾಯಿಗಳು ಬಕ ಬಕನೆ ಬೊಗಳಿದವು. ಅಲ್ಲಲ್ಲಿ ಹಾವುಹರಣೆಗಳು ಸರಬರನೆ ಹರಿದೋ ಡಿದುವು. ದೂರದ ಗುಡ್ಡಗಾಡುಗಳಲ್ಲಿ ನರಿಗಳು ಊಳಿಡುತ್ತಿದ್ದುವು. ಆದರೆ ಯಾವುದಕ್ಕೂ ಅಂಜದೆ ಅವರು ಕುದುರೆಗಳನ್ನು ಓಡಿಸಿಕೊಂಡು ತಪ್ಪಲ ಹಳ್ಳಿಯನ್ನು ಮುಟ್ಟಿದಾಗ ಮಧ್ಯರಾತ್ರಿ ಮೀರಿತ್ತು ಅಲ್ಲಿ ಇವರ ದಾರಿಯನ್ನು ನಿರೀಕ್ಷಿಸಿಕೊಂಡೇ ಇದ್ದ ಕೆಲವರು, ಇವರನ್ನು ಕಾಣು ತ್ತಲೇ ಒಂದರಮೇಲೊಂದಾಗಿ ಅನೇಕ ದೀವಟಿಗೆಗಳನ್ನು ಬೆಳಗಿಸಿದರು.

ಆಮೇಲೆ ದೀವಟಿಗೆಗಳ ಪ್ರಕಾಶದಲ್ಲಿ ಬೆಟ್ಟಗಳ ನಡುವಣ ಶೈಲಭವನದ ಕಡೆಗೆ ಅವರ ಪ್ರಯಾಣವು ಸಾಗಿತು. ಪರ್ವತದ ತಪ್ಪಲುಗಳ ಬುಡದ ಕಣಿವೆಗಳ ದಾರಿ, ಸುತ್ತುಮುತ್ತಲಿನ ಗಿಡಮರಗಳ ಸಂದುಗಳಿಂದ ಬಿದ್ದ ಚಂದ್ರಕಿರಣಗಳ ಪುಳ್ಳಿಗಳನ್ನಾಂತು ಅಂಧಕಾರ ವನ್ನು ಕಳೆದುಕೊಂಡು, ನಡುವೇ ದೀವಟಿಗೆಗಳ ಜ್ವಾಲಾಪ್ರಕಾಶ ದಿಂದ ಕಾಡುಮೃಗಗಳ ಕಣ್ಣಿಗೊಂದು ಭಯಂಕರ ದೃಶ್ಯವನ್ನುಂಟು ಮಾಡಿತು. ಹೀಗೆ ನಾರೀತೊರೆಯ ದಾರಿಯಲ್ಲಿ ಭೀಮನ ಗಂಡಿ, ಹನುಮನ ಗಂಡಿಗಳನ್ನು ದಾಟಿ, ನೃಸಿಂಹ ಗಂಡಿಯ ಬುಡವನ್ನು ಸೇರಿದರು. ಅಲ್ಲಿ ಹಿಲಾಲುಗಳ ಜಗಜ್ಜಗಾಯಮಾನವಾದ ಬೆಳಕಿನಲ್ಲಿ ಚೋರನಾಯಕ ಮಾದರಸನು, ದೊಡ್ಡ ಸರದಾರನಂತೆ ವೇಷವನ್ನು ಧರಿಸಿಕೊಂಡು, ಅವನಂತೆಯೇ ವಿಭೂಷಿತರಾದ ಅನೇಕಮಂದಿ ಬಂಧುಗಳೊಂದಿಗೆ ನಿಂತಿದ್ದನು. ರಾಯನು ಆಶ್ಚರ್ಯದಿಂದ ಆ ಚಿತ್ರವನ್ನು ನೋಡುತ್ತಿರಲು, "ಮಹಾರಾಣೀ ಅಜ್ಞಾತಾದೇವಿಗೆ ಜಯವಾಗಲಿ!" ಎಂಬ ನೂರಾರು ಕಂಠಗಳ ಜಯ ಘೋಷಣವೆದ್ದು, ಗಂಭೀರ ರಾತ್ರಿಯ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಅಲೆಯಲೆ

ಯಾಗಿ ಬೆಟ್ಟಗಳಮೇಲೆ ಏರಿಕೊಂಡು ಹೋಯಿತು. ಒಡನೆಯೇ ಎಲ್ಲರೂ ಆ ಪಿತಾಪುತ್ರಿಯರ ಮೇಲೆ ಸಳಸಳನೆ ಪುಷ್ಪಾಂಜಲಿಯನ್ನೆರಚಿದರು.

ಮಾದರಸನು ಮುಂದೆ ಬಂದು, ರಾಯನಿಗೆ ಕೈಮುಗಿದು, "ಶ್ರೀಮತ್ಕರ್ಣಾಟಕ ಸಾರ್ವಭೌಮರಿಗೆ ನಮ್ಮ ರಾಣಿ ಸುಸ್ವಾಗತವನ್ನು ಬಯಸುತ್ತಾಳೆ. ದೀನ ರಾಣಿಯ ಬೇಡಿಕೆಯಂತೆ ಬಿಜಯ ಮಾಡಿಸಿದುದನ್ನು ನೋಡಿ ತುಂಬಾ ಸಂತೋಷವಾಯಿತು. ಹೀಗೆ ಚಿತ್ತಯಿಸಬೇಕು" ಎಂದು ಗಂಭೀರವಾಗಿ ನುಡಿದನು.

ಒಡನೆಯೇ ಸೇವಕ ಬಂಧುಗಳು ದಾರಿಯಲ್ಲಿ ರನ್ನಗಂಬಳಿಯನ್ನು ಹಾಸಿದರು. ತಿರುಮಲಾ "ಇಲ್ಲಿ ರಾಯರು ಕುದುರೆಯಿಂದ ಇಳಿಯಬೇಕು" ಎನ್ನುತ್ತಾ ತಾನು ಕೆಳಕ್ಕಿಳಿದಳು. ನಸುನಗುತ್ತಾ ರಾಯನು ಇಳಿದನು. ಕುದುರೆಗಳು ಸೇವಕರ ಸ್ವಾಧೀನವಾದುವು. ಇಬ್ಬರು ಬಂಧುಗಳು ರಾಯ-ಕುಮಾರಿಯರ ಅಕ್ಕಗಳಲ್ಲಿ ಸಿದ್ಧರಾಗಿ ಚಾಮರವನ್ನು ಬೀಸತೊಡಗಿದರು.

ಆಗ ರಾಯನು ಮಾದರಸನನ್ನು ನೋಡಿ "ಈ ಸ್ಥಳದಲ್ಲಿ ಈ ಸಮಯದಲ್ಲಿ ಇಷ್ಟೆಲ್ಲಾ ಆಡಂಬರಿಸುವ ಗುಟ್ಟೇನು? ಬಹಳ ಕಠಿನವಾಗಿ ಆಮಂತ್ರವನ್ನು ಕಳುಹಿಸಿ, ಈಗ ಇಷ್ಟು ದೊಡ್ಡ ಮರ್ಯಾದೆ ತೋರುವುದರ ಮರ್ಮವೇನು?" ಎಂದನು.

"ಪ್ರಭು! ಈ ಮರ್ಯಾದೆಗಳೆಲ್ಲಾ ನಮ್ಮ ಈ ಬಾಲರಾಣಿಯನ್ನು ಕುರಿತಾಗಿವೆ. ಬಾಲರಾಣಿಯೊಂದಿಗೆ ತಾವೂ ಸೇರಿದುದರಿಂದ ತಮಗೂ ಸಂದಂತಾಯಿತು" ಎಂದನು ಮಾದರಸ.

"ನಿಮ್ಮ ಆ ವಿಚಿತ್ರ ರಾಣಿಯನ್ನು ನೋಡಬೇಕಾದರೆ ಇನ್ನೆಲ್ಲಿಗೆ ಹೋಗಬೇಕು?" ಎಂದನು ರಾಯ.

"ಆಹಾ! ರಾಣಿಯನ್ನು ನೋಡಲು ಮಹಾರಾಜರು ಬಹಳ ಕುತೂಹಲಗೊಂಡಿರುವಂತಿದೆ!" ಎಂದು ರಾಯನಿಗೆ ಅತ್ಯಂತ ಪರಿಚಯದ ಕಂಠವೊಂದು ಕೇಳಿಸಿತು. ನೋಡಿದರೆ ತಿಮ್ಮ ಸಂನ್ಯಾಸಿ. "ಸಹಜವಲ್ಲವೆ?" ಎಂದನು ಅವನೊಂದಿಗೇ ಇದ್ದ ರಾಮಕೃಷ್ಣ.

ಒಡನೆಯೇ ಇಬ್ಬರೂ ರಾಯನಿದಿರಿನಲ್ಲಿ ನಿಂತು, "ವಿಜಯೀಭವ! ನೂತನ ಕಲ್ಯಾಣಮಸ್ತು" ಎಂದು ಆಶೀರ್ವದಿಸಿಯೂ ಬಿಟ್ಟರು.

ತಿರುಮಲಾ ಕಾತುರದಿಂದ "ಇವರು ಯಾರು ?" ಎಂದು ಮಾದರಸನ ಮುಖವನ್ನು ನೋಡಿದಳು.

"ಅರರೆ, ನಮ್ಮ ಆಸ್ಥಾನ ಕವಿಗಳು! ಇಲ್ಲಿರುವಿರಲ್ಲಾ!" ರಾಯನು ಅಚ್ಚರಿಯಿಂದ ಕೇಳಿದನು.

"ಹೌದು ಪ್ರಭು. ಕಟಕದಲ್ಲಿ ಘಟಕ ಸಂನ್ಯಾಸವನ್ನು ಕೈಕೊಂಡ ನಾವು, ದೈವಲೀಲೆಯ ಚಕ್ರದಲ್ಲಿ ಸಿಕ್ಕಿಕೊಂಡು ಈ ಬೆಟ್ಟದ ನಡುವಿಗೆ ಉರುಳಿಬಿದ್ದೆವು" ಎಂದನು ತಿಮ್ಮಣ್ಣ.

"ಆದರೂ ನಮ್ಮ ಸಂನ್ಯಾಸವು ವ್ಯರ್ಥವಾಗಲಿಲ್ಲ ಪ್ರಭುವೆ" ಎಂದನು ರಾಮಕೃಷ್ಣ.

"ನಿಮ್ಮ ಮಾತಿನ ಅರ್ಥ ?" ಎಂದನು ರಾಯ.

"ಅರ್ಥವು ಒಳಗಿದೆ ! ರಾಜೇಂದ್ರಾ ! ಅದರ ಬಾಗಿಲು ನಾವು ತೆರೆಯಬಾರದೆಂದು, ಇಲ್ಲಿಯ ರಾಣಿ ನಮ್ಮ ಬಾಯಿಗೆ ಬೀಗಮುದ್ರೆ ಹಾಕಿದ್ದಾಳೆ" ಎಂದನು ರಾಮಕೃಷ್ಣ.

"ಆ ಬೀಗಮುದ್ರೆಯನ್ನೊಡೆದು ಒಳಗಿನ ಅರ್ಥವನ್ನು ಗ್ರಹಿಸಿ, ನಮ್ಮನ್ನು ಕೂಡಾ ಈ ಘಟಕ ಸಂನ್ಯಾಸ ಬಂಧನದಿಂದ ಬಿಡುಗಡೆ ಮಾಡಿಸುವ ಭಾರವು ನಿನಗೇ ಸೇರಿದೆ ಪ್ರಭು. ದಯಮಾಡಿಸು" ಎಂದು ತಿಮ್ಮಣ್ಣನು ಮುಂದೆ ನಡೆದನು.

ತಿರುಮಲೆಯೇ ತಂದೆಯ ಕೈಯನ್ನು ಹಿಡಿದುಕೊಂಡು ಮುಂದಕ್ಕೆ ನಡೆದಳು. ಅವರ ಕಾಲುಗಳು ರನ್ನಗಂಬಳಿಯ ಮೇಲೆಯೇ ಬೀಳುವಂತೆ ಸೇವಕರು ಒಂದರ ನಂತರ ಒಂದಾಗಿ ಬಣ್ಣದ ಕಂಬಳಿಯನ್ನು ಹಾಸಿಕೊಂಡೇ ಹೋದರು. ಹೀಗೆ ರಾಯನನ್ನು ಕರೆದುಕೊಂಡು, ಶೈಲಭವನದೊಳಗೆ ಸುವಿಶೇಷ ರೀತಿಯಿಂದ, ಅಲಂಕರಿಸಲ್ಪಟ್ಟದ್ದೊಂದು ಸುವಿಸ್ತರವಾದ ಕೋಣೆಯೊಳಗೆ ದಿವ್ಯ ಸಿಂಹಾಸನದಲ್ಲಿ ಆರೂಢಗೊಳಿಸಿದರು.

ಬಳಿಕ ಮಾದರಸನು ತಿರುಮಲೆಯ ಕಿವಿಯಲ್ಲಿ ಏನೋ ಪಿಸು

ನುಡಿಯಾಡಿದನು. ಒಡನೆಯೇ ಅವಳು ಆಹ್ಲಾದದಿಂದ “ಅಪ್ಪಾ, ಸ್ವಲ್ಪ ಹೊತ್ತು ಇಲ್ಲಿಯೇ ಇರಬೇಕು. ನಾನೀಗಲೇ ಅಮ್ಮನೊಂದಿಗೆ ಬರುವೆನು” ಎಂದು ಹೇಳಿ ಓಡಿಯೇ ಹೋದಳು. ಆಗ ರಾಯನೂ ಅವಳೊಂದಿಗೇ ಓಡಲು ತವಕಿಸಿದಾಗ, “ನೀವಿಲ್ಲಿಯೇ ಇರಬೇಕು. ಬರಲೇ ಕೂಡದು!” ಎಂದು ತಿರುಮಲಾ ಅವನನ್ನು ಒತ್ತಿ ಕೂಡಿಸಿಯೇ ಹೋದಳು. ರಾಯನಿಗೆ ಮಂಕು ಬಡಿದ ಹಾಗಾಯಿತು. ಅವನು ಅವಳು ಓಡಿಹೋದ ಕಡೆಯನ್ನೇ ನೋಡುತ್ತ, ಈ ರಾತ್ರಿಯಲ್ಲಿ ಇದೆಲ್ಲಾ ಒಂದು ಕನಸಾಗಿರಬೇಕೆಂದು ನೆನೆಯುತ್ತಿರುವಾಗ, ಮಾದರಸನು ಬಂಗಾರದ ತಾಟುಗಳಲ್ಲಿ, ಸುಪಕ್ವವಾದ ಹಣ್ಣು ಹಂಪಲುಗಳನ್ನು ತಂದಿಟ್ಟು “ಪ್ರಭು, ಮಹಾರಾಣಿ ಕಳುಹಿಸಿದ ಈ ಅಲ್ಪಾಹಾರವನ್ನು ಸ್ವೀಕರಿಸಬೇಕೆಂದು, ಮಹಾರಾಣಿ ಪ್ರಾರ್ಥಿಸಿಕೊಳ್ಳುತ್ತಾಳೆ” ಎಂದು ಹೇಳಿ ಹೊರಟು ಹೋದನು. ಅದು ರಾಯನಿಗೆ ಕೇಳಿಸಿತೋ ಇಲ್ಲವೋ?

* * * *

ರಾಯನು ಕುಮಾರಿಯೊಡನೆ ಆಗಮಿಸುವನೆಂದು ಗೊತ್ತಾದಾಗಿನಿಂದ ಅಜ್ಞಾತಾದೇವಿ – ಅಲ್ಲಲ್ಲ – ಚಿನ್ನಾದೇವಿಯ ಹೃದಯದಲ್ಲಿ ಆನಂದದ ಬುಗ್ಗೆಯೊಂದು ಉಕ್ಕಲಾರಂಭಿಸಿತ್ತು. ಆತನನ್ನು ಬಹಳ ಗೌರವದಿಂದ ಇದಿರುಗೊಂಡು ಕರೆತರಲು ತಕ್ಕ ಏರ್ಪಾಡುಗಳನ್ನು ಅವಳೇ ಮಾಡಿದಳು. ಆ ರಾತ್ರಿಯಿಡೀ ಅವಳು ಒಂದು ಕಡೆ ಒರಗಿದವಳಲ್ಲ. ಅತ್ತಿತ್ತ ಓಡಾಡುತ್ತಾ ಕೋಣೆಗಳನ್ನು ಸಿಂಗರಿಸುವುದರಲ್ಲಿಯೂ, ದಿವ್ಯಾಸನಗಳನ್ನು ಕ್ರಮಗೊಳಿಸುವುದರಲ್ಲಿಯೂ ಕಾಲಹರಣ ಮಾಡಿದಳು. ಅವಳ ಹೃದಯಾಧಿದೇವನನ್ನು ಕೈ ಹಿಡಿದುಕೊಂಡು ಪ್ರಿಯ ಕುಮಾರಿಯೇ ಕರೆದುಕೊಂಡು ಬರುವ ಚೆಂದವನ್ನು ಕಿಟಕಿಯಿಂದ ನೋಡಿ ‘ಆಹಾ! ಮೊದಲಿನ ಆ ವಿರೂಪಾಕ್ಷನು ಈಗೆಷ್ಟು ಘನಶಾಲಿಯಾಗಿದ್ದಾನೆ!’ ಎಂದುಕೊಂಡು ಪುಲಕಿತಾಂಗಿನಿಯಾಗುತ್ತ ಕೌತುಕಗೊಳ್ಳುತ್ತಿದ್ದಳು.

ರುಚೀಕುಮಾರಿ ಈ ಸ್ಥಳದಲ್ಲಿರುವ ರಹಸ್ಯವು ಅವನಿಗಿನ್ನೂ ತಿಳಿಯದು. ರುಚೀಕುಮಾರಿಗೂ ಇಂದು ರಾಯನ ಆಗಮನದ ವಿಷಯವು

ತಿಳಿಯದು. ಆದರೆ ಆ ಶೈಲಭವನದ ಗಡಿಬಿಡಿಗಳನ್ನೂ ಚಟುವಟಿಕೆಗಳನ್ನೂ ನೋಡಿ, ಏನು ಕಾರಣವೆಂದು ರುಚೀಕುಮಾರಿ ಕೇಳಿದುದಕ್ಕೆ "ನಾಳೆ ಮುಂಜಾನೆ ನಿನ್ನ ವರನಾದ ವಿರೂಪಾಕ್ಷನು ಇಲ್ಲಿಗೆ ಆಗಮಿಸುತ್ತಾನೆ" ಎಂದಷ್ಟೇ ಉತ್ತರ ದೊರೆತಿತ್ತು.

ರಾಯನಿಗೂ ರುಚೀಕುಮಾರಿಗೂ ಮುಂಜಾನೆಯ ಶುಭ ಮುಹೂರ್ತದಲ್ಲಿ ಪರಸ್ಪರ ಸಂದರ್ಶನಮಾಡಿಸಬೇಕೆಂದು ಚಿನ್ನಾದೇವಿಯು ಏರ್ಪಾಡಾಗಿತ್ತು. ಅನಂತರ ಸಾವಕಾಶವಾಗಿ ತಾನು ರಾಯನನ್ನು ಕಾಣಬೇಕು; ಆದರೆ ಯಾವ ರೀತಿಯಲ್ಲೆಂದು ಅವಳಿಗೆ ತಿಳಿಯದೆ ದೀರ್ಘಾಲೋಚನೆ ಮಾಡುತ್ತಿದ್ದಳು. ಹಿಂದೆ ನಡೆದುದೆಲ್ಲವೂ ಒಂದೊಂದಾಗಿ ಅವಳ ಸ್ಮೃತಿಪಥದಲ್ಲಿ ಮೂಡುತ್ತಿದ್ದುವು. ಅವಳ ಕಣ್ಣಿನಲ್ಲಿ ನೀರು ತುಂಬಿ ತುಳುಕಲಾರಂಭಿಸಿತ್ತು............

"ಅಮ್ಮ........" ಎಂದು ಕರೆಯುತ್ತಾ ತಿರುಮಲಾ ತಾಯಿಯ ಬಳಿಗೆ ಬಂದಳು. ಚಿನ್ನಾದೇವಿ ಆನಂದಾತಿಶಯದಿಂದ ಮುಂಬರಿದು ಬಂದು "ಬಾ, ಬಾರೇ ನನ್ನ ಕಂದ, ಅಪ್ಪನೊಂದಿಗೆ ಸೇರಿ ಬಂದೆಯಲ್ಲೇ ನನ್ನ ಬಂಗಾರ!" ಎಂದು ಲಾಲಿಸುತ್ತ ಮಗಳನ್ನು ಬಾಚಿ ತಬ್ಬಿಕೊಂಡಳು. ಪುತ್ರಿಯ ಸರ್ವಾಂಗಗಳಲ್ಲಿಯೂ ಮುತ್ತುಗಳನ್ನೊತ್ತಿದಳು. ತಿರುಮಲಾ ತಾಯಿಯ ಕಂಬನಿಯನ್ನು ನೋಡಿ ಅದನ್ನು ಒರೆಸುತ್ತ "ನೀನು ಅಳುವುದೇಕಮ್ಮ? ಈ ಕೃಷ್ಣದೇವರಾಯರೇ ನನ್ನ ತಂದೆಯೊ? ಇದು ನಿನಗೂ ಗೊತ್ತಿದೆಯೊ?"

"ಹೌದು ಮಗು. ಮೊನ್ನೆತಾನೇ ನನಗೆ ತಿಳಿಯಿತು. ಈವರೆಗೂ ನಾವು ಭ್ರಾಂತಿಯಲ್ಲಿ ತೊಳಲುತ್ತಿದ್ದೆವು" ಎನ್ನುವಾಗ ಮುಂದೆ ಮಾತಾಡಲಾಗದಂತೆ ಚಿನ್ನಾದೇವಿಯ ಗಂಟಲು ಬಿಗಿಯಿತು. ಮಗಳ ಹೆಗಲಿನ ಮೇಲೆ ಮುಖವನ್ನಿಟ್ಟು ಗಳಗಳನೆ ಅಳತೊಡಗಿದಳು. ಅದರಿಂದ ಮಗಳೂ ತಾಯಿಯ ಎದೆಯಲ್ಲಿ ಮುಖವನ್ನು ಬಚ್ಚಿಟ್ಟುಕೊಂಡು ಅಳಲಾರಂಭಿಸಿದಳು. ಅದೇನೂ ದುಃಖದ ರೋದನವಲ್ಲ. ಆನಂದಾತಿಶಯದ ದುಃಖಪರಿಮಾರ್ಜನೀ ರೋದನವದು.

ಭಾವಾವೇಗವು ತಗ್ಗಿದಮೇಲೆ ಚಿನ್ನಾದೇವಿ ಮಗಳ ಮುಖವ

ನ್ನೊಮ್ಮೆ ಬಲವಾಗಿ ಮುದ್ದಿಸಿ “ಮಗು, ಅವರೇ ನಿನ್ನ ತಂದೆಯೆಂದು ನಿನಗೆ ಹೇಗೆ ಗೊತ್ತಾಯಿತೆ? ಅವರನ್ನು ಕಂಡ ನೆನಪು ನಿನಗಿತ್ತೇನೇ?” ಎಂದು ಕೇಳಿದಳು.

“ಇಲ್ಲಮ್ಮ. ಅವರೇ ನನ್ನನ್ನು ನೋಡಿ ಮಂಕು ಹಿಡಿದವರ ಹಾಗಾದರು. ಮಗಳೇ ಮಗಳೇ ಎಂದು ನನ್ನನ್ನು ಬಾಚಿಕೊಳ್ಳಲಾರಂಭ ಮಾಡಿದರು. ನನ್ನ ಹೆಸರನ್ನು ಕೇಳಿದ್ದೇ ತಡ, ನನ್ನನ್ನು ಸಣ್ಣ ಮಗು ಎಂದೇ ತಿಳಿದು, ಎಳೆಮ ತೊಡೆಯಮೇಲೆ ಕೂಡಿಸಿಕೊಂಡು ಮುದ್ದಿಸಿದರಮ್ಮ. ನಿಜವಾಗಿಯೂ ನಾನು ಆಗ ಸಣ್ಣ ಮಗುವೇ ಆಗಿಬಿಟ್ಟೆ ಬಿಡು. ಆಗ, ಅಮ್ಮಾ, ಅವರು ನಿನ್ನ ಹೆಸರು ಹೇಳಿ ಹೇಳಿ ಎಷ್ಟು ಮರುಗಿದರು ಗೊತ್ತೆ?” ಎಂದ ಮಗಳ ಮಾತನ್ನು ಕೇಳಿ ಮತ್ತೆ ಚಿನ್ನಾದೇವಿಯ ಕಣ್ಣಿನಿಂದ ನೀರುಕ್ಕಲು, ಮಗಳನ್ನು ಮತ್ತೊಮ್ಮೆ ಚುಂಬಿಸಿ “ಆಹಾ! ನನ್ನ ದೇವ!” ಎಂದು ಉದ್ಗರಿಸಿದಳು.

“ಅವರು ಅಮ್ಮ, ನಿನ್ನ ಮದುವೆಯನ್ನೆಲ್ಲಾ ಒಂದು ಕತೆಯ ಹಾಗೆ ಹೇಳಿ, ಇಗೊ, ಈ ನಿನ್ನ ಕತ್ತಿಯನ್ನು ನನ್ನ ಟೊಂಕಕ್ಕೆ ಕಟ್ಟಿದರು. ನಿನಗೂ ಅವರಿಗೂ ಈ ಕತ್ತಿಯಂತೆ ಪ್ರಥಮಸಂಯೋಗ ಮಾಡಿಸಿದ್ದು.”

“ಹೌದು ಹೌದು. ಅವರು ನನ್ನನ್ನು ಎಷ್ಟು ನೆನಪಿಟ್ಟು ಕೊಂಡಿದ್ದಾರೆ!”

“ಇಷ್ಟಿದ್ದೂ ಅವರು ನಿನ್ನನ್ನು ಬಿಟ್ಟು ರಾಜಭೋಗದಲ್ಲಿ ಮೆರೆಯುವುದು ನ್ಯಾಯವೇನಮ್ಮ?”

“ಹಾಗೆನ್ನಬಾರದೇ ನನ್ನ ಕಂದ! ನೀನು ಉತ್ತರ ರಾಮಾಯಣ ವನ್ನು ಓದಿಲ್ಲವೇನೆ? ಸೀತಾದೇವಿಯ ಪಾವಿತ್ರ್ಯವು ಶ್ರೀರಾಮಚಂದ್ರನಿಗೆ ಗೊತ್ತಿದ್ದರೂ, ಲೋಕಾಪವಾದದ ಭೀತಿಯಿಂದ ಅವನು ಸೀತೆಯನ್ನು ಕಾಡಿಗೆ ಅಟ್ಟಿ, ಸಂಕಟಪಟ್ಟುಕೊಂಡಿರಲಿಲ್ಲವೆ? ಹಾಗೆಯೇ ಸಿಂಹಾಸನದ ಪಾವಿತ್ರ್ಯವನ್ನು ಕಾಪಾಡಲಿಕ್ಕಾಗಿ ನನ್ನನ್ನು ತ್ಯಾಗಮಾಡಿದರು ಮಗುವೆ.”

“ಹಾಗಾದರೆ ಇನ್ನು ಶುಭೋದಯವೇ ಆಯಿತೆನ್ನಬೇಕು. ಅಮ್ಮ, ನಾನು ರಾಯಚೂರಿನಿಂದ ಕಳುಹಿಸಿದ ರಾಮಾಯಣ ಗ್ರಂಥವು

ಸಿಕ್ಕಿತಷ್ಟೆ? ಅದು ತಾನೇ ನನ್ನಜ್ಜಿ ಬರೆದ ಗ್ರಂಥ? ಅಮ್ಮ, ನನ್ನನ್ನು ಇಲ್ಲಿಂದ ಅಪಹರಿಸಿಕೊಂಡು ಹೋದವನು ನಮ್ಮ ಬೇಟೆಯೇ ಆದ ರಾಮಯಾಮಾತ್ಯನೇ!" ಎಂದು ತಿರುಮಲಾ, ಆ ಗ್ರಂಥವು ಸಿಕ್ಕಿದ ಬಗೆ, ರಾಮರಾಜನು ಹೇಳಿಕೊಟ್ಟ ಉಪಾಯ, ಅವನ ಪೌರುಷ, ಮಾಲೂಖಾನನ ನಿರ್ಮಲ ಹೃದಯ, ಮುಂತಾದುದನ್ನೆಲ್ಲಾ ಸಂಕ್ಷೇಪಿಸಿ ಹೇಳಿದಳು. ಕುಮಾರಿಯ ವೀರವರ್ತನೆಯನ್ನು ಕೇಳಿ ಚಿನ್ನಾದೇವಿ ಮೆಚ್ಚಿ, ಆ ರಾಮಯಾಮಾತ್ಯನು ಅಲ್ಲಿ ಸಿಕ್ಕಿಬಿದ್ದಿರುವುದನ್ನೂ ಮಗಳಿಗೆ ತಿಳಿಸಿದಳು.

ಸಂತೋಷ ಸಂಭ್ರಮದಲ್ಲಿ ಘಂಟೆ ಕ್ಷಣವಾಗಿ ಹಾರಿಹೋಗುತ್ತಿತ್ತು. ಸುಪ್ರಭಾತವಾಗಲಾರಂಭವಾಯಿತು. ಪಕ್ಷಿಗಳ ಉದಯಗೀತವು ಕೇಳಿಸಲಾರಂಭವಾಯಿತು. ಮುಂಬೆಳಕಿನ ಪಡಿಬೆಳಕು ಮೂಡಲಾರಂಭವಾಯಿತು. ಮೂಡಣಾಗಸದಂಚು ಅರುಣಛಾಯೆಯನ್ನಾಂತು, ಅರುಣೋದಯವಾಗಲಾರಂಭವಾಯಿತು. ಎಲ್ಲೆಲ್ಲಿಯೂ ಉಲ್ಲಾಸದ ಸುಪ್ರಭಾತವಾಗಲಾರಂಭವಾಯಿತು.

"ಆಹಾ! ಶುಭೋದಯವಾಗುತ್ತಿದೆ. ಮುಹೂರ್ತವು ಸಮೀಪಿಸುತ್ತಿದೆ. ಅವರ ದಿವ್ಯ ಸಂದರ್ಶನ ಯೋಗವು ಕೂಡಿರಬಹುದು. ಮಗಳೇ ತಿರುಮಲಾ, ನಾನು ಯಾವ ವೇಷದಿಂದ ನಿನ್ನ ತಂದೆಯ ಕಣ್ಣಿಗೆ ಕಾಣಿಸಲಿ?"

"ಅಮ್ಮ, ಅಗೋ, ಆ ಹಸುರು ಬಣ್ಣದ, ಜರತಾರಿಯ ಅಬ್ಬರ ದಂಚಿನ ಭಾರೀ ಸೀರೆಯನ್ನುಟ್ಟುಕೋ. ಮೈತುಂಬಾ ಚಿನ್ನಾಭರಣಗಳನ್ನು ಧರಿಸಿಕೋ. ಕಿರೀಟವನ್ನಿಟ್ಟುಕೋ ದೊಡ್ಡ ರಾಣಿಯ ಹಾಗೆ ಅಪ್ಪನು ಬೆರಗಾಗುವ ಹಾಗೆ ಕಾಣಿಸಿಕೋ."

"ಜೋರಿದ್ದಿ ನೀನು! ಆದರೆ ಹಾಗೇನೂ ಬೇಡ. ನಾನು ಎಲ್ಲೆಲ್ಲಿಯೂ ಅಜ್ಞಾತಾರಾಣಿಯೆಂದು ಪ್ರಸಿದ್ಧಳಾಗಿರುವುದರಿಂದ ನಾನು ರಾಣಿಯ ಹಾಗಿರುವೆನೆಂದೇ ಅವರು ಭಾವಿಸಿರುತ್ತಾರೆ. ನಾನು ಸತ್ಯವಾದ ಈ ವಿರಕ್ತ ವೇಷದಿಂದಲೇ ಕಾಣಿಸಿ ಅವರ ಭಾವನೆಯನ್ನು ಮೋಸಗೊಳಿಸುತ್ತೇನೆ. ತಿರುಮಲಾ, ನೀನು ಮೆಲ್ಲನೆ ಹೋಗಿ

ಅಪ್ಪನು ಏನು ಮಾಡುವರೆಂದು ನೋಡಿ ಬಾ. ಅವರಿಗೆ ನಾನೊಂದು ಕಾಣಿಕೆಯನ್ನಿಟ್ಟಿದ್ದೆ. ವಾಸನೆ ಹಿಡಿದು ಹೋಗಿ ಅದನ್ನೆತ್ತಿಕೊಂಡರೋ ನೋಡಿ ಬಾ."

ತಿರುಮಲಾ ಹೊರಗೆ ಹೋಗುತ್ತಲೇ ಅಲ್ಲಿದ್ದ ತಿಮ್ಮಣ್ಣ ರಾಮ ಕೃಷ್ಣರು ಅವಳನ್ನು ತಡೆದು, "ಮುಂದೆ ಹೋಗಬಾರದಮ್ಮ"ಎಂದರು. "ಏಕೆ?" ಎಂಬ ಅವಳ ಪ್ರಶ್ನೆಗೆ "ಕೃಷ್ಣದೇವರಾಯ ಕಳ್ಳ. ಹೇಳದೆ ಕೇಳದೆ ಕದ್ದುಕೊಳ್ಳಲಿಕ್ಕಾಗಿ ಹೋಗಿದ್ದಾನೆ. ಆತನನ್ನು ಕಳುವಿನ ಕೈಯೊಂದಿಗೇ ಹಿಡಿಯಬೇಕು. ಬೇಗನೇ ನಿನ್ನ ತಾಯಿಯನ್ನು ಕರೆದುಕೊಂಡು ಬಾ. ಶುಭೋದಯವಾಗುತ್ತಿದೆ" ತಿಮ್ಮಣ್ಣನೆಂದ.

## ೧೨

ಕೋಣೆಯೊಳಗೆ ಸುಮ್ಮನೆ ಕುಳಿತಿದ್ದ ರಾಯನಿಗೆ ಕ್ಷಣವು ಯುಗವಾಗಿ ತೋರುತ್ತಿತ್ತು. ಅವನು ಸುಮ್ಮನೆ ಕುಳಿತುಕೊಳ್ಳಲಾರದವನಾಗಿ ಬಾಗಿಲು ತೆರೆದು ಇಣಿಕಿ ನೋಡಿದಾಗ, ಹೊರಗೆ ಯಾರೂ ಕಾಣಿಸಲಿಲ್ಲ. ಚಂದ್ರಾಸ್ತವಾಗಿ ಕತ್ತಲೆ ಕವಿದುಕೊಂಡಿತ್ತು. ಸುತ್ತುಮುತ್ತು ಉಷಃಕಾಲದ ನಿಶ್ಶಬ್ದತೆ. ಆಶ್ಚರ್ಯಪಡುತ್ತ ಪುತ್ತೆ ಕೋಣೆಯೊಳಗೇ ಹೊಕ್ಕನು. ಅಲ್ಲಿ ನಾಲ್ಕು ಸುತ್ತಲೂ ದೇದೀಪ್ಯಮಾನವಾಗಿ ಬೆಳಗುವ ಸುವರ್ಣದ ಕಾಲುದೀಪಗಳ ಪ್ರಕಾಶದೊಂದಿಗೆ ಪ್ರತಿಫಲಿಸುವ ಸ್ವರ್ಣಸ್ಥಗತವಾದ ಆಸನಾದಿ ಚಿತ್ರ ವಸ್ತುಗಳೊಂದೂ ಅವನಿಗೆ ವಿಶೇಷವೆನಿಸಲಿಲ್ಲ. ಆದರೆ ಬೆಟ್ಟಗಳ ಮಧ್ಯದಲ್ಲಿರುವ ಆ ವೈಭವಗಳನ್ನು ಕಂಡು ಅವನು ಆಶ್ಚರ್ಯಪಡುತ್ತಿದ್ದನು. ಚೋರನಾಯಕಿಯ ನಿವಾಸಸ್ಥಾನವನ್ನು ಕಂಡುಹಿಡಿಯಬೇಕೆಂದು, ಈ ಮೊದಲು ಎಷ್ಟೋ ಪ್ರಯತ್ನಪಟ್ಟರೂ ಕಾಣಸಿಕ್ಕದ ಆ ಪ್ರದೇಶಕ್ಕೇ ಈಗ ಅವನು ಬಂದಿದ್ದಾನೆ. ವಿಚಿತ್ರ ರೀತಿಯಿಂದ ಬಂದಿದ್ದಾನೆ. ಬಂದು ಮಂಕೇ ಹಿಡಿದವನ ಹಾಗಾಗಿದ್ದಾನೆ. ಆ ಪ್ರದೇಶಕ್ಕೂ ಅವನ ಹೃದಯ ಮಂದಿರಕ್ಕೂ ಅಧಿನಾಯಕಿಯಾದ ಆ ವಿಚಿತ್ರ ರಾಣಿ ಈಗೆಲ್ಲಿ ಅಜ್ಞಾತಳಾಗಿರುವಳು ? ಪುನಃ ಕಿಟಕಿಯಿಂದ ಹೊರಗೆ ನೋಡಿದನು. ಬೆಟ್ಟಗಳೂ, ಗುಡ್ಡಗಳೂ, ಬಂಡೆಗಳೂ, ಕಲ್ಲುಗಳೂ, ಮರಗಳೂ,

ಆಗಸವೂ, ಚುಕ್ಕಿಗಳೂ ಸ್ತಬ್ಧವಾಗಿ ಅವನನ್ನೇ ಅಣಕಿಸುವಂತೆ ತೋರಿದುವು. ಒಂದೆರಡು ತುಂಡುಗಾಳಿ ಮೌನವಾಗಿ ಸಾಗಿಬಂದು ಅವನ ವಸ್ತ್ರಗಳನ್ನು ಮುಟ್ಟನೋಡಿಕೊಂಡು ಹೋದುವು. 'ತಾಯಿಯನ್ನು ಕರೆದುಕೊಂಡು ಬರುವೆನೆಂದು ತನ್ನನ್ನು ಮಂತ್ರಮುಗ್ಧಗೊಳಿಸಿಹೋದ ತಿರುಮಲಾ ಮಾಯವೇ ಆದಳಲ್ಲ! ಓಹೊ, ಚಿನ್ನಾದೇವಿಗೆ ನಾನೇ ಅವಳ ಪತಿ ಎಂದು ತಿಳಿಯದಲ್ಲವೆ? ಮಗಳು ಈಗ ಹೇಳುತ್ತಿರಬಹುದು. ಕೇಳುತ್ತಾ ಅವಳ ಮನೋಭಾವವು ಹೇಗೆ ಹೇಗೋ ಆಗುತ್ತಿರಬಹುದು. ಆಹಾ! ಎಲ್ಲಿರುವಳೋ ಕಾಣುವುದಿಲ್ಲ! ಇಲ್ಲದಿದ್ದರೆ ನಾನೇ ಅವಳ ಮುಂದೆ........' ಎಂದು ಮುಂತಾಗಿ ಯೋಚಿಸುತ್ತಿರುವಾಗ ಒಂದು ಗುಡ್ಡದಂತಹ ಯೋಚನೆ ಆತನ ಮುಂದೆ ಅಡ್ಡವಾಗಿ ನಿಂತಿತು. 'ಶ್ರೀಮದ್ವಿದ್ಯಾನಗರದ ಪವಿತ್ರವಾದ ಪುರಾತನ ಪುಣ್ಯಸಿಂಹಾಸನವನ್ನು ಅಧಿರೋಹಿಸಿರುವ ನಾನು, ಆ ಸಿಂಹಾಸನದ ಪಾವಿತ್ರ್ಯವನ್ನು ಕಾಯಲಿಕ್ಕಾಗಿಯೇ, ಈ ಧರ್ಮಪತ್ನಿಯನ್ನು ತ್ಯಾಗಮಾಡಿ ಬಿಟ್ಟಿರುವ ನಾನು, ಈಗ ಮಾತ್ರ ಈ ಅಜ್ಞಾತ ಕುಲೀನೆಯನ್ನು ಸ್ವೀಕರಿಸಿಕೊಳ್ಳಲಾಗುವುದೆ? ಅಯ್ಯೊ! ಈಗ ನಾನು ಬಂದುದು ಅವಳ ದುಃಖವನ್ನೆ ಕೆರಳಿಸಲಿಕ್ಕಾಯಿತು....ಆದರೆ ಅವಳು ನನ್ನ ವಿಷಯವಾಗಿ ಭ್ರಾಂತಿಯನ್ನು ತಾಳಿಕೊಂಡು, ಚೋರರ ಗುಂಪನ್ನು ಕಟ್ಟಿಕೊಂಡು ಪ್ರಜೆಗಳಿಗೆ ಕೇಡು ಬಗೆಯುವವಳಾಗಿದ್ದಾಳೆ. ಸತ್ಯವನ್ನು ಅವಳಿಗೆ ತಿಳಿಸಿ, ಅವಳ ರಾಜಕಾರ್ಯವನ್ನು ಕುರಿತು ಕೂಲಂಕಷವಾಗಿ ವಿಚಾರಿಸಬೇಕು. ನನ್ನ ತಾಯಿಯ ಹತ್ಯದಲ್ಲಿ ಅವಳ ಅಂಗವು ಎಷ್ಟರಮಟ್ಟಿಗೆ ಇರುವುದೆಂದು ಪರೀಕ್ಷಿಸಬೇಕು. ಹೌದು. ಇವೇ ಮುಂತಾದ ಕರ್ತವ್ಯವನ್ನು ನೆರವೇರಿಸಲಿಕ್ಕಾಗಿಯೇ ನಾನು ಬಂದೆನಲ್ಲದೆ, ಹಳೇ ಮೋಹದಿಂದಲ್ಲ' ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡನು.

ಅದರ ಹಿಂದೆಯೇ 'ಅಯ್ಯೊ! ನನ್ನ ಚಿನ್ನಾ ಎಂತಹ ಉತ್ತಮೆ? ಅವಳು ಅನ್ಯಾಯವನ್ನು ಮಾಡುವಳೆಂದರೆ ನಂಬಲಾಗುವುದಿಲ್ಲವಲ್ಲಾ! ಇಂತಹ ಉತ್ತಮ ನಾರೀರತ್ನವನ್ನೂ ಪುತ್ಥಳಿಯಂತಹ

ಮಗಳನ್ನೂ ಹೇಗೆ ಮರೆಯಲಿ ?' ಎಂದು ಪರಿತಾಪ ಪಡಲಾರಂಭಿಸಿದನು.

ಆ ಮೂಲೆಯಲ್ಲಿ ನಿಲ್ಲಿಸಲ್ಪಟ್ಟಿದ್ದ ಒಂದು ಕತ್ತಿ ಅವನ ಕಣ್ಣನ್ನು ಸೆಳೆಯಿತು. ಆ ಕತ್ತಿಯ ಇಬ್ಬದಿಗಳಲ್ಲಿಯೂ ಪುಟ್ಟ ದೀಪಗಳಿದ್ದುವು. ಬುಡದಲ್ಲಿ ಹೂಗಳಿಂದಲಂಕೃತವಾಗಿದ್ದ ಒಂದು ಪುಸ್ತಕವಿತ್ತು. ಧೂಪವೂ ಊದುಬತ್ತಿಗಳೂ ಗಮಗಮಿಸುವ ಹೊಗೆಯನ್ನು ಸುಳಿಸುತ್ತಿದ್ದುವು. ಆ ಕತ್ತಿಗೇಕೆ ಈ ಬಗೆಯ ಪೂಜಾಲಂಕಾರ ? ರಾಯನು ಧಾವಿಸಿ ಹೋಗಿ ಆ ಕತ್ತಿಯನ್ನು ಕೈಗೆತ್ತಿಕೊಂಡು ನೋಡಿದನು. ಅದು ಅವನದೇ ಆದ ಆ ಶಕ್ತೀಖಡ್ಗ ! ಹಿಂದೆ ಓಂಪಲ್ಲಿಯಲ್ಲಿ, ತಿಪ್ಪಾಂಬೆಯ ಘಾತಕ ಜಾಲಕ್ಕೆ ಸಿಕ್ಕದಂತೆ, ವಿರೂಪಾಕ್ಷನೆಂಬ ಹೆಸರಿನಿಂದ ಅವನು ಅಜ್ಞಾತವಾಸ ಮಾಡಿಕೊಂಡಿದ್ದಾಗ ಚಿನ್ನಾ ಕನ್ಯೆಯ ಪ್ರಥಮ ಸಂದರ್ಶನದಲ್ಲಿ, ಅವಳ ಬಾಲಯುದ್ಧ ಕೌಶಲ್ಯಕ್ಕೆ ಮೆಚ್ಚಿ, ಅವಳೊಂದಿಗೆ ರಣಕೇಳಿಯಾಡಿ, ಅವನೇ ಅವಳಿಗೆ ಕೊಟ್ಟ ಶಕ್ತೀಖಡ್ಗವದು. ಆ ಗ್ರಂಥವನ್ನು ಬಿಡಿಸಿ ನೋಡಿದನು. ಅದು ಚಿನ್ನಾದೇವಿಯ ತಾಯಿ ಸಾಧು ಭದ್ರವ್ವನು ಬರೆದು ಕೊಂಡಿದ್ದುದು, ಅರಣ್ಯಕಾಂಡದಿಂದ ತೊಡಗಿದ ರಾಮಾಯಣ. ಅದನ್ನು ಅವನು ಬಲ್ಲನು. ಈಗ ಆ ಶಾಂತಮೂರ್ತಿ ಭದ್ರವ್ವನೆಲ್ಲಿದ್ದಾಳೆ? ಆ ಗ್ರಂಥದ ಅಡಿಯಲ್ಲಿದ್ದ ಇನ್ನೊಂದು ಹಳೆಯ ಪತ್ರವನ್ನು ಎತ್ತಿ ನೋಡಿದನು. ಆಹಾ ! ಅದು ಅವನೇ ಚಿನ್ನಾದೇವಿಗೆ ಬರೆದಿದ್ದ ಆ ಅಂತಿಮ ಪತ್ರ !

ಅಂದು ಸಂಜೆಯಲ್ಲಿ ಅವನು ಅಶ್ವಾರೋಹಿಯಾಗಿ ವಾಯು ವಿಹಾರಕ್ಕೆ ಹೋದಾಗ, ಅನಿರೀಕ್ಷಿತವಾದ ಅಪಾಯಕ್ಕೆ ಸಿಕ್ಕಿಬಿದ್ದು ಬಿಟ್ಟನು. ಆಗ ವಿದ್ಯಾನಗರದಲ್ಲಿ ಅವನ ಅಣ್ಣ ವೀರನರಸಿಂಹನು ರಾಜನಾಗಿದ್ದನು. ಅವನು ಕೃಷ್ಣದೇವನನ್ನು ತನ್ನ ಶತ್ರುವಾಗಿ ಭಾವಿಸಿಕೊಂಡಿದ್ದನು. ಆದುದರಿಂದಲೇ ಕೃಷ್ಣದೇವನು ರಾಜ, ರಾಜಧಾನಿ, ರಾಜಸೇವೆಗಳ ಗೊಡವೆಯನ್ನೇ ತೊರೆದು, ಎಂದೆಂದಿಗೂ ಓಂಪಲ್ಲಿಯಲ್ಲಿಯೇ, ಚಿನ್ನಾದೇವಿಯೊಂದಿಗೆ ಸುಖವಾಗಿ ನಿಶ್ಚಿಂತೆಯಾಗಿ ಇರಬಹುದೆಂದು ಯೋಚಿಸಿದ್ದನು. ಆದರೆ ಆದಿನ ಅವನು ವಾಯು

ವಿಹಾರಕ್ಕೆ ಹೋದಾಗ, ತಿಪ್ಪಾಂಬಿಯ ಗೂಢಚಾರರು ಅವನ ಗುರುತನ್ನು ಹಿಡಿದು ಮುತ್ತಿಕೊಂಡು ಬಿಟ್ಟರು. ತಿಪ್ಪಾಂಬಿಯ ಕಾರ್ಯಭಾರದ ಕೈಯೊಳಗೆ ಸಿಕ್ಕಿಬಿದ್ದಮೇಲೆ, ಮುಕ್ತಿ ಎಲ್ಲಿಯದು? ಜೀವದಾಶೆಯೆಲ್ಲಿಯದು? ಎಂದು ಅವನು ಯೋಚಿಸಿದುದೂ ಆಗಿನ ಸ್ಥಿತಿಗೆ ಸಹಜವಾಗಿತ್ತು. ಚಿನ್ನಾದೇವಿಗೊಂದು ಅಂತಿಮ ಪತ್ರವನ್ನು ಬರೆದು, ಕುದುರೆಯ ಕೊರಳಿಗೆ ಸಿಕ್ಕಿಸಿ ಕಳುಹಿಸಿದ್ದನು. ಆ ಘಾತಕರೊಡನೆ ಪ್ರಾರ್ಥಿಸಿಕೊಂಡು, ಅವರಿಂದಲೇ ಓಲೆಯನ್ನು ಪಡೆದುಕೊಂಡು ಬರೆದಿದ್ದನು. ಅದರಲ್ಲಿ ಅವನು ಬರೆದ ಒಕ್ಕಣೆ ಈಗಲೂ ಮಾಸದೆ ಹಾಗೆಯೇ ಇದೆ. ಓದಿದನು : "ಪ್ರಿಯ ಚಿನ್ನಾ, ಇಂದಿಗೆ ನನ್ನ ನಿನ್ನ ಮಹಾವಿಯೋಗವುಂಟಾಯಿತು. ನಾನು ಯಾವ ಮುಹೂರ್ತದಲ್ಲಿ ಮನೆಯಿಂದ ಹೊರಟೆನೊ! ಚಿನ್ನಾ, ನೀನು ವೀರ ನಾರಿಯಾಗಿರುತ್ತೀ. ದುಃಖವನ್ನು ಸೈರಿಸಿಕೋ. ನಾನು ಮುಕ್ತಿಗೆ ಮಾರ್ಗವಿಲ್ಲದಂತಹ ಮಹಾಶತ್ರುವಿನ ಕೈಗೇ ಸಿಕ್ಕಿ ಬಿದ್ದಿದ್ದೇನೆ. ಇನ್ನು ನನ್ನ ನಿನ್ನ ಯೋಗವೇ ಆಗದು. ವೀರರಮಣಿಯಾದ ನೀನು ದುಃಖದಿಂದ ಪ್ರಾಣಾಪಾಯ ಮಾಡಿಕೊಂಡು ಬಿಡಬೇಡ. ಮುದ್ದು ತಿರುಮಲೆಯನ್ನು ಸಂರಕ್ಷಿಸುವುದು ನಿನ್ನ ಕರ್ತವ್ಯಭಾರ. ಮಾ.ಸ. ಅತ್ತೆಯವರಿಗೂ ನನ್ನ ಅಂತಿಮ ಸಾಷ್ಟಾಂಗ ಪ್ರಣಾಮಗಳು.

ಇತಿ ನಿನ್ನ ಪತಿ ಶ್ರೀವಿರೂಪಾಕ್ಷ"

ಇದನ್ನು ಓದುತಿದ್ದಾಗ, ಹಿಂದೆ ಚಿನ್ನಾದೇವಿಯೊಡನೆ ಸೊಗ ಬಾಳುವೆ ಮಾಡಿಕೊಂಡಿದ್ದಾಗಿನ ಚಿತ್ರಗಳು ಶೋಕಮಯವಾಗಿ ಮಾರ್ಪಟ್ಟು ಅವನ ಕಣ್ಣಿಗೆ ಕಟ್ಟಿದುವು. ಪತಿಯ ಜ್ಞಾಪಕ ಚಿಹ್ನೆಗಳನ್ನಿಟ್ಟುಕೊಂಡು ಪೂಜಿಸುವ ಆ ಸತೀಮಣಿಯ ಭಕ್ತಿ ಎಂತಹುದೋ! ದುಃಖ-ಆನಂದ-ಪಶ್ಚಾತ್ತಾಪಗಳ ಕರಗಿದ ಭಾವಗಳು ಅವನ ಕಣ್ಣುಗಳಲ್ಲಿ ತುಂಬಿ ಬಂದುವು.

ಹೀಗೆ ಅವನು ಗತಜನ್ಮದ ಪ್ರಪಂಚದಲ್ಲಿ ಕನಸಿನ ರಾಜ್ಯದಲ್ಲಿ ತನ್ಮಯನಾಗಿದ್ದಾಗ, ತಿಮ್ಮ ಸಂನ್ಯಾಸಿ ಶಿಷ್ಯನೊಂದಿಗೆ ಮೆಲ್ಲನೆ ಆ ಕೋಣೆಯೊಳಗೆ ಹೊಕ್ಕು ಪರಾಙ್ಮುಖನಾಗಿರುವ ರಾಯನನ್ನು

“ರಾಜೇಂದ್ರ” ಎಂಬ ಸಂಬೋಧನೆಯಿಂದ ಅರಿವಿಗೆ ಬರಿಸಿದನು.

“ಅರೆ! ನೀವು ಇಲ್ಲೆಲ್ಲಿ ನೊಳಕೆಯೊಡೆದಿರಿ? ಅಷ್ಟೂ ಪರಿವಾರವು ಎಲ್ಲಿ ಮಾಯವಾಗಿಹೋಯಿತು? ಇದೇನು ಮಾಯಾಲೋಕವಾಗಿದೆಯಲ್ಲಾ!” ಎಂದು ರಾಯನು ಅಪ್ರಯತ್ನವಾಗಿ ಹೇಳುತ್ತಿರುವಾಗ, ತಿಮ್ಮಣ್ಣನು ತನ್ನ ಬಾಯಿಗೆ ಕೈಯಿಟ್ಟು “ಪ್ರಭು! ಮೆಲ್ಲನೆ ಮಾತಾಡಬೇಕಿಲ್ಲಿ. ಇದು ನಿಗೂಢವಾದ ಚೋರಮಂದಿರವೆಂಬುದನ್ನು ಜ್ಞಾಪಿಸುತ್ತೇನೆ. ನಾವೆಲ್ಲಾ ಪರಾಧೀನರು. ಅಗೋ, ಅತ್ತ ಕಾಣುವ ಆ ಕೋಣೆಯೊಳಗೆ ಒಂದು ವಿಶೇಷರತ್ನವನ್ನು ಅಡಗಿಸಿಟ್ಟದ್ದಾಳೆ. ಅದನ್ನು ತಾವು ಬೇಗನೇ ಕೈವಶ ಪಡಿಸಿಕೊಳ್ಳದಿದ್ದರೆ, ಇನ್ನೊಬ್ಬನ ವಶವಾಗಿಹೋದೀತು. ಈ ಮುಖ್ಯ ರಹಸ್ಯವನ್ನು ಅರಿಕೆ ಮಾಡಲಿಕ್ಕಾಗಿಯೇ ನಾವೀಗ ಬಂದದ್ದು” ಎಂದು ಹೇಳಿ ಇಬ್ಬರೂ ಗೋಡೆಯಲ್ಲಿದ್ದೊಂದು ಬಾಗಿಲನ್ನು ತೆರೆದು, ತಟಕ್ಕನೆ ಹೋಗಿಬಿಟ್ಟರು.

ರಾಯನು ಪರಮ ಸೋಜಿಗದಿಂದ ಅವರು ತೆರೆದು ತೋರಿಸಿದ ಆ ಹೊಸ ಬಾಗಿಲಿನಲ್ಲಿ ಹಣಿಕಿ ನೋಡಿದನು. ಅಲ್ಲಿ ಪ್ರವೇಶಿಸಿದರೆ ದೀಪವಿಲ್ಲದ ಕತ್ತಲೆಯ ಕಿರುಗೋಣೆಯೊಳಗಿನಿಂದಾಗಿ, ಒಂದು ಕತ್ತಲೆಯ ಕಿರುದಾರಿಯ ಮೂಲಕ ಮತ್ತೊಂದು ದೊಡ್ಡ ಕೊಟಡಿಗೆ ಹೋಗಿ ಮುಟ್ಟುವುದೆಂದು ಕಾಣುತ್ತಿತ್ತು. ರಾಯನು ಕೌತುಕದಿಂದ ಬೆಕ್ಕಿನ ಹೆಜ್ಜೆ ಹಾಕಿಕೊಂಡು ಆ ಕಿರುದಾರಿಯ ಕೊನೆಯಲ್ಲಿ ಹೋಗಿ ನಿಂತು, ಆ ಬೆಳಕಿನ ಕೋಣೆಯೊಳಗೆ ದೃಷ್ಟಿ ಪ್ರಸಾರಣೆ ಮಾಡಿ ನೋಡಿದನು.

ಅದೂ ಅತ್ಯಂತ ಸುಂದರವಾಗಿ ಸುಸಜ್ಜಿತವಾಗಿ ಅಲಂಕೃತವಾಗಿದ್ದ ಕೊಟಡಿ. ಒಂದೇ ಒಂದು ಕಾಲುದೀಪವು ಮಾತ್ರ ಉರಿಯುತ್ತಿತ್ತು. ಬೆಳಂದ್ಘಾಪವಾಗುತ್ತಿದ್ದುದರಿಂದ ಆ ಬೆಳಕು ಕಾಂತಿಹೀನವಾಗುತ್ತಿತ್ತು. ಅಲ್ಲಿ ಶ್ರೇಷ್ಠ ತರಗತಿಯ ಮಂಚದ ಮೇಲೆ ಈ ಕಡೆಗೆ ಬೆನ್ನು ಹಾಕಿಕೊಂಡು, ಪುತ್ಥಳಿಯ ಬೊಂಬೆಯ ಹಾಗೆ ರಮಣೀಮಣಿಯೊಬ್ಬಳು ಕುಳಿತಿದ್ದಳು. ಅವಳ ಇದಿರಿನಲ್ಲಿರುವ ಸ್ಫಟಿಕಾಸನದಲ್ಲಿ ದೀಪದ ಪ್ರಭೆಗೆ ಫಳಫಳಿಸುತ್ತಿತ್ತೊಂದು ಕನ್ನಡಿಯ ಚಿತ್ರ. ರಾಯನದೇ ಚಿತ್ರವದು!

ಹಿಂದೆ ತಿಮ್ಮರಸನು ಬಲು ಜಾಣನಾದ ಕಲಾವಿದನಿಂದ ರಾಯನ ತದ್ರೂಪವನ್ನು ಬರೆಯಿಸಿ, ಕವಿ ತಿಮ್ಮಣ್ಣನ ಕೈಯಲ್ಲಿ ಕೊಟ್ಟು, ಜಗನ್ಮೋಹಿನಿಯ ವಶೀಕರಣಕ್ಕಾಗಿ ಕಟಕಪುರಿಗೆ ಕಳುಹಿಸಿದ ಚಿತ್ರವೇ ಅದಾಗಿತ್ತು. ಆ ತಿಮ್ಮಣ್ಣ ರಾಮಕೃಷ್ಣರು ಈ ಪ್ರದೇಶದಲ್ಲಿರುವುದನ್ನೂ ಈ ಚಿತ್ರವನ್ನೂ ನೋಡಿ, ಈ ರಮಣಿ, ಆ ರುಚೀದೇವಿಯೇ ಸರಿಯೆಂದು ತೀರ್ಮಾನಿಸಿಕೊಂಡು ಪರಮ ಕೌತುಕಗೊಂಡನು. 'ಆಹಾ! ಇವಳ ಮುಖವನ್ನು ನೋಡದೆಯೇ ಬರಿಯ ಛಾಯಾದರ್ಶನ ಮಾತ್ರದಿಂದಲೇ ಇವಳ ಜಗನ್ಮೋಹನಾಕಾರವನ್ನು ನೆನೆಯಬಹುದಲ್ಲಾ! ಇವಳು ಇಲ್ಲಿಗೆ ಹೇಗೆ ಬಂದಳು?' ಎಂದು ಯೋಚಿಸುತ್ತ ರಾಯನು ಮುಗ್ಧನಾಗಿ ಸ್ತಂಭದಂತೆ ನಿಂತಿರಲು, ಆ ಜಗನ್ಮೋಹಿನಿ ನೆಲದಲ್ಲಿ ನಿದ್ರಿಸಿದ್ದ ಇನ್ನೊಬ್ಬಳು ಸ್ತ್ರೀಯನ್ನು ನೋಡುತ್ತ "ಬೆಳಗಾಗುತ್ತ ಬರುತ್ತಿದ್ದರೂ ಇನ್ನೂ ಇವಳಿಗೆ ನಿದ್ರೆ ಬಿಟ್ಟಿಲ್ಲ. ಇಡೀ ರಾತ್ರಿ ನನ್ನೊಂದಿಗೆ ಜಾಗರಣೆ ಮಾಡಿದುದರಿಂದಲೋ ಏನೋ!" ಎಂದು ಗೊಣಗಿದುದು ಅಸ್ಪಷ್ಟವಾಗಿ ಕೇಳಿಸಿತು. ಆ ಅಸ್ಪಷ್ಟ ಧ್ವನಿ, ಮೇಘಗಳೆಡೆಯಿಂದ ಕೇಳಿಸಿದ ಅಚ್ಚರಸಿಯ ದನಿಯಂತೆ ಅದೆಷ್ಟು ಮಧುರ!

ಆ ರಮಣಿ ಮಂಚದಿಂದೆದ್ದಳು. ಆ ಭಾವಚಿತ್ರದ ಇದಿರಿನಲ್ಲಿ ನಿಂತಳು. ಕೈಯನ್ನು ಜೋಡಿಸಿಕೊಂಡಳು. ದೀನದೃಷ್ಟಿಯನ್ನು ಆ ಚಿತ್ರದ ಮೇಲೆಯೇ ನೆಟ್ಟಳು. ಆ ದಿನ ಬೆಳಗಾಗುವಾಗ, ಆ ಭಾವ ಚಿತ್ರದ ಸಜೀವ ವ್ಯಕ್ತಿಯಾದ ವಿರೂಪಾಕ್ಷನ ದರ್ಶನವಾಗುವುದೆಂದೂ, ಅದಕ್ಕೆ ಸಿದ್ಧಳಾಗಿರೆಂದೂ ಆ ವಿಚಿತ್ರ ಸ್ತ್ರೀಯಾದ ಅಜ್ಞಾತಾದೇವಿ, ಅವಳಿಗೆ ತಿಳಿಸಿದ್ದಳು. ಅಂತೆಯೇ ಅವಳಿಗೆ ರಾತ್ರಿಯಿಡೀ ನಿದ್ರೆ ಬಂದಿರಲಿಲ್ಲ. ಕೃಷ್ಣದೇವರಾಯನ ಗುಣಗಣಗಳನ್ನೆಲ್ಲಾ ವಿರೂಪಾಕ್ಷನೆಂಬ ಹೆಸರಿಗೆ ಹೊಂದಿಸುತ್ತಿದ್ದಳೇನೋ! ಅಕಸ್ಮಾತ್ ಅವಳ ಬಾಯಿಂದ "ಕೃಷ್ಣದೇವರಾಯನೋ, ವಿರೂಪಾಕ್ಷನೋ? ನನಗೆ ನೀನೇ ಪತಿ!" ಎಂಬ ಶಬ್ದಗಳು ಹೊರಬಿದ್ದುವು. ಒಂದಿಗೇ ಆ ಚಿತ್ರದ ಕನ್ನಡಿಯನ್ನು ತನ್ನೆದೆಗೆ ಅಪ್ಪಿಕೊಂಡು, ಹಿಂದಿನಿಂದೇನೋ

ಶಬ್ದ ಭಾಸವಾಗಲು, ಗಭಕ್ಕನೆ ಕವಿದ ಲಜ್ಜೆಯಿಂದ ಫಕ್ಕನೆ ಚಿತ್ರವನ್ನು ಅಲ್ಲಿಟ್ಟು ಗಕ್ಕನೆ ತಿರುಗಿ ನೋಡಿದಳು.

ಅಯ್ಯೋ! ಅವಳ ಅವಸ್ಥೆಯೆ! ಇವನಾರು? ನೋಡಿ ಬಿಟ್ಟನಲ್ಲ! ಲಜ್ಜೆಯಿಂದ ಅವಳ ಮುಖವು ಕೆಂಪು ಕೆಂಪಾಯಿತು ಚಂದ್ರನ ಮೇಲೆ ಕುಂಕುಮ ಲೇಪನವಾದಂತೆ! ಮ ರುಕ್ಷಣವೇ ತಲೆವಾಗಿತು. ಅವಳ ಆ ನಡುಗುವ ತನುಲತೆಯು ಆಧಾರಕ್ಕೆ ಮಂಚವಿಲ್ಲದಿರುತ್ತಿದ್ದರೆ ಬಿದ್ದೇ ಹೋಗುತ್ತಿದ್ದಳು.

ರಾಯನು ಅವಳ ಅದ್ಭುತ ಸೌಂದರ್ಯವನ್ನು ನೋಡಿ, ಕನಸಿನಲ್ಲಿ ಇಂದ್ರಭವನವನ್ನು ಹೊಕ್ಕೆನೋ, ಇವಳು ರಂಭೆಯೋ, ಊರ್ವಶಿಯೋ ಎಂದು ಒಂದು ನಿಮಿಷ ಮಂತ್ರಮುಗ್ಧನಾಗಿ ನಿಂತನು. 'ವಿರೂಪಾಕ್ಷ'ನೆಂಬ ಅವನ ಪೂರ್ವಜನ್ಮದ ಹೆಸರು ಬೇರೆ ಒಂದೆರಡು ಕಡೆ ಮಿಂಚಿದುದು ಅವನ ಆಶ್ಚರ್ಯಕ್ಕೆ ಕಳಸವಿಟ್ಟಿತ್ತು.

ಒಂದು ನಿಮಿಷದ ಮೇಲೆ ರಾಯನಿಗೆ ಅರಿವುಂಟಾಯಿತು. ಕೂಡಲೇ ರಸಿಕತನವನ್ನಾಂತು "ಅರರೆ! ಜಗನ್ಮೋಹಿನಿ ರುಚೀ ಕುಮಾರಿ! ನೀನು ಇಲ್ಲಿಗೆ ಹೇಗೆ ಬಂದಿ?" ಎನ್ನುತ್ತಾ ಮುಂದೆ ನಡೆದನು. ಇಷ್ಟರಲ್ಲಿ ಅವಳ ನಸು ಬಾಗಿದ ಮುಖದ ಹತ್ತೆಂಟು ವಿದ್ಯುತ್ಕಟಾಕ್ಷಗಳು ಅವನ ಮೇಲೆ ಬಿದ್ದೂ ಆಗಿತ್ತು!

ಅವಳೇನೂ ಮಾತಾಡದೆ ಸುಮ್ಮನಿರುವುದನ್ನು ನೋಡಿ ರಾಯನು "ಗಜಪತಿ ನಂದಿನಿ! ನನ್ನ ಭಾವಚಿತ್ರದ ಮೇಲೆ ತೋರಿಸಿದ ನಿನ್ನ ಭಕ್ತಿ ಶ್ರದ್ಧೆಗಳಿಗೆ ಮೆಚ್ಚಿ ಪ್ರತ್ಯಕ್ಷನಾಗಿದ್ದೇನೆ. ನಿನಗೆ ಬೇಕಾದ ವರವನ್ನುಕೇಳು. ಅಂಜದಿರು, ನಾನು ಇಲ್ಲಿಯ ಚೋರನಾಯಕಿಯನ್ನು ಹುಡುಕಿ ಹಿಡಿಯಲಿಕ್ಕಾಗಿಯೇ ಬಂದಿದ್ದೇನೆ" ಎನ್ನುತ್ತಾ ಅವಳ ತೀರ ಸಮೀಪಕ್ಕೆ ಬಂದು ನಿಂತು ಬಿಟ್ಟನು.

ತಲೆತಗ್ಗಿಸಿಕೊಂಡು ದಿಙ್ಮೂಢಳಾಗಿ ನಿಂತಿದ್ದಳು ರುಚೀ.

"ಹೇಳು. ಇಲ್ಲಿಯ ಅಧಿನಾಯಕಿ ಎಲ್ಲಿರುವಳೆಂದು ನಿನಗೆ ಗೊತ್ತಿದೆಯೆ?" ಎನ್ನುತ್ತಾ ರಾಯನು ಅವಳ ಚೆಂದಮುದಮುಟಗಳು

ನಡುಗುತ್ತಿರುವ ಆ ಸೊಬಗನ್ನೇ ನೋಡುತ್ತಿದ್ದ ಅನಿಮಿಷ ನೇತ್ರನಾಗಿ !

"ಆಹಾ! ಇದೊಳ್ಳೇ ಅತ್ಯಾಚಾರ!" ಎಂಬ ಗಂಭೀರ ಸ್ತ್ರೀ ಕಂಠವೊಂದು ಹಿಂದಿನಿಂದ ಕೇಳಿಸಿತು.

ಇಬ್ಬರೂ ಮೆಟ್ಟಿ ಬಿದ್ದು ಅತ್ತ ನೋಡಿದರು. ಅಲ್ಲಿ ಚಿನ್ನಾ ದೇವಿ ನಿಂತಿದ್ದಳು. ಅವಳಿಂದ ಹೊರಟಿತ್ತು ಆ ಸ್ವರ. ಅವಳು ಮುಗುಳ್ನಗುತ್ತಿದ್ದಳು. ಅವಳ ಬಳಿಯಲ್ಲಿಯೇ ನಗುಮೊಗದಿಂದ ತಿರುಮಲೆಯೂ, ತಿಮ್ಮಣ್ಣ ರಾಮಕೃಷ್ಣರೂ ನಿಂತಿದ್ದರು.

"ಶ್ರೀ ವಿರೂಪಾಕ್ಷನಿಗಾಗಿ ಕಾದಿಟ್ಟ ಅನರ್ಘ ರತ್ನವನ್ನು ಈ ಕಳ್ಳ ಕೃಷ್ಣದೇವನು ಅಪಹರಿಸಲಿಚ್ಛಿಸುತ್ತಾನಲ್ಲ! ಅನ್ಯಾಯ!" ಎಂದನು ರಾಮಕೃಷ್ಣ. ಅದಕ್ಕೆ ತಿಮ್ಮಣ್ಣ "ಈ ಬಗೆಯ ಅನ್ಯಾಯಗಳ ಸೂತ್ರ ಧಾರಿಣಿ ಚತುರಮತಿ ಅಜ್ಞಾತಾದೇವಿಯಾಗಿರುವಾಗ ನಮ್ಮ ರಾಯನೇನು ಮಾಡ್ಯಾನು ಪಾಪ?" ಎಂದ.

ಒಡನೆಯೇ ತಿರುಮಲಾ ಕುಮಾರಿ ನಕ್ಕ ನಗುವಿನ ಕಲಕಲ ರವವು, ತರಂಗ ತರಂಗವಾಗಿ ಉಲಿದೆದ್ದು ಹೋಗಿ ಅಲ್ಲಿ ಮಲಗಿರುವ ಗೌರಿಯ ಕಿವಿಯಲ್ಲಿ ಸೇರಿ, ಅವಳನ್ನು ಗಡಿಬಿಡಿಯಿಂದ ಎಬ್ಬಿಸಿತು !

೨೩

ಹೊರಗೆ ಪಸರಿಸುತ್ತಿದ್ದ ಅರುಣರಾಗವು ಕಿಟಕಿ ಖಿಂಡಿಗಳ ದ್ವಾರಾ ಆ ಮಂದಿರದೊಳಗೆ ಪ್ರವೇಶಮಾಡಿತು. ಪಕ್ಷಿ ಸಂಕುಲವು ಶುಭರವ ಕಲ್ಲೋಲದಿಂದ ಉದಯ ಭಾನುವಿಗೆ ಸುಸ್ವಾಗತವನ್ನು ಪಾಡಿದುವು.

ರಾಯನು ನೋಡುತ್ತಲೇ ಇದ್ದನು. ಚಿನ್ನಾದೇವಿಯ ಮೇಲೆಯೇ ನೆಟ್ಟಿತ್ತು ಅವನ ದೃಷ್ಟಿ. ಅವಳು ಉಟ್ಟಿರುವ ಸಾದಾ ಬಿಳಿಯ ಸೀರೆಯನ್ನೂ, ನಿರಾಭರಣವಾದ ಕಾಂಚನವರ್ಣದ ಅವಳ ದೇಹವನ್ನೂ, ಶಾಂತ ಗಂಭೀರವಾದ ಮುಖಭಾವನನ್ನೂ ನೋಡಿದನು. ತನ್ನ ಪ್ರೇಮರಾಣಿ ಚಿನ್ನಾದೇವಿಯನ್ನು ನೋಡಿದನು. ಅಜ್ಞಾತಾ ರಾಣಿ ಈ ಬಗೆಯ ವಿರಕ್ತ ವೇಷದಲ್ಲಿರುವಳೆಂದು ಅವನು ಊಹಿಸಿರಲಿಲ್ಲ. ಅಂತೆಯೇ ವಿಸ್ಮಯವು ಅವನ ದೃಷ್ಟಿಯಲ್ಲಿ ತೇಲಾಡುತ್ತಿತ್ತು. ಅವಾಕ್ಕಾಗಿಯೇ ನೋಡಿದನು. ಆ ನೋಟವೇ ಅವಳೊಡನೆ ಏನೇನೋ ಮಾತಾಡಿಕೊಂಡಿತು. ನೋಡುತ್ತಿದ್ದಂತೆಯೇ ಆ ಧೀರಪ್ರವರನ ಕಣ್ಣುಗಳು ಆರ್ದ್ರವಾದುವು.

........ಚಿನ್ನಾದೇವಿಯೂ ನೋಡಿದಳು. ಬಹುಕಾಲ ಅಗಲಿದ ನೋಟಗಳು ಒಂದನ್ನೊಂದು ಕಲೆತುವು. ಕ್ಷಣದೊಳಗೆ ನೂರಾರು ಮಾತುಗಳನ್ನು ಆಡಿಕೊಂಡಂತಾಯಿತು. ರಾಯನ ದೃಷ್ಟಿ ನೆನೆ

ಯುತ್ತಲೇ ಅವಳ ಕಣ್ಣುಗಳೂ ತುಂಬಿದುವು. ಒಡನೆಯೇ ಅವಳ ಗಂಭೀರಭಾವವು ಅದೆತ್ತ ಹೋಯಿತೊ? ನಸುಲಜ್ಜೆಯಿಂದ ರಾಯನ ಪಾದ ಪ್ರದೇಶಕ್ಕೆ ಮಾಲಿತು ಅವಳ ದೃಷ್ಟಿ. ಈ ಸುಂದರ ಸಂದರ್ಶನ ವನ್ನು ಹೊಂದಿಸಿದವರಾದ ತಿಮ್ಮಣ್ಣ ರಾಮಕೃಷ್ಣರು ಇನ್ನು ತಮ್ಮ ಕೆಲಸವಾಯಿತೆಂದು ಜಾರಿ ಹೋದರು.

ತಂದೆ ತಾಯಿಗಳು ನಿಷ್ಪಂದ ನೀರವರಾಗಿ ನಿಂತಿರುವುದನ್ನು ಕಂಡು, ಕುಮಾರಿ ತಿರುಮಲಾ ತಾಯಿಯ ಕೈಯನ್ನು ಹಿಡಿದು ರಾಯನ ಬಳಿಗೆ ಎಳೆಯುತ್ತ ಗಿಳಿನುಡಿಯಿಂದ "ಶ್ರೀಮದ್ರಾಜಾಧಿರಾಜ ಕೃಷ್ಣದೇವ ಮಹಾರಾಜರೆ, ಇವಳೇ ನಿಮ್ಮ ರಾಣೀ ಅಜ್ಞಾತಾ! ಚೋರನಾಯಕಿ!" ಎಂದಳು.

ಒಡನೆಯೇ ಚಿನ್ನಾದೇವಿ ಅರಿವಿಗೆ ಬಂದು ರಾಯನ ಕಾಲಿಗೆ ಮಾಲಿ "ಸ್ವಾಮಿ, ನನ್ನ ಸರ್ವಾಪರಾಧವನ್ನೂ ಕ್ಷಮಿಸಬೇಕು" ಎಂದು ಗದ್ಗದ ಕಂಠದಿಂದ ನುಡಿದಳು. ಆಗ ಅವಳ ಕಣ್ಣಿಂದುಕ್ಕಿದ ನೀರಿಷ್ಟು ಅವನ ಪಾದದ ಮೇಲೆ ಬಿತ್ತು.

"ಚಿನ್ನಾ! ಪ್ರಿಯ ಚಿನ್ನಾ!" ಎಂದು ರಾಯನು ಅವಳ ಭುಜ ಗಳನ್ನು ಹಿಡಿದೆತ್ತಿ, ಗಂಟಲನ್ನು ಕೆನೆದು ಸರಿಮಾಡಿಕೊಂಡು, "ನನ್ನ ಧರ್ಮಪತ್ನಿಯಾದ ನಿನ್ನನ್ನು ಈ ಬಗೆಯ ಸಂನ್ಯಾಸಿನಿಯನ್ನಾಗಿ ಮಾಡಿಸಿದ ನನ್ನನ್ನೆ ನೀನು ಕ್ಷಮಿಸಬೇಕು" ಎಂದನು.

ರಾಯನ ಮುಖಮಂಡಲವನ್ನು ಈಗ ನೋಡಿದ ಚಿನ್ನಾದೇವಿಯ ದೃಷ್ಟಿಯಲ್ಲಿ ಪ್ರೇಮಮಾರ್ದವತೆ ಹೊಳೆಯುತ್ತಿತ್ತು. ರಾಯನು ತನ್ನ ಸೌಹಾರ್ದ್ರ ದೃಷ್ಟಿಯನ್ನು ಅದರೊಂದಿಗೆ ಬೆರೆಸಿಕೊಂಡನು. ಆ ದೃಷ್ಟಿಗಳು ಏನೇನೋ ಮಾತಾಡಿಕೊಂಡು ಸಮರಸವಾದುವು. ಇಬ್ಬರ ಹೃದಯಗಳೂ ಹಗುರಾದಂತೆ ಇಬ್ಬರ ಮೂಗಿನಿಂದಲೂ ನಿಟ್ಟುಸಿ ರೊಂದು ಮೇಲೆದ್ದಿತು. ಇಬ್ಬರ ತುಟಿಗಳಲ್ಲಿಯೂ ಮುಗುಳ್ನಗು ಮೂಡಿತು. ಕಂಬನಿ ಆರಿತು.

ಮೆಲ್ಲನೆ ಚಿನ್ನಾದೇವಿಯ ದೃಷ್ಟಿ ರುಚೀದೇವಿಯ ಕಡೆಗೆ ತಿರು ಗಿತು. ಅವಳೂ ಒಂದು ಗೊಂಬೆಯಂತೆ ನಿಂತಿದ್ದಳು.

ಗೌರಿ, ಹಾಸಿಗೆ ವಸ್ತ್ರಗಳನ್ನು ಮಡಿಸಿಡುವ ಕೆಲಸಗಳಲ್ಲಿ ನಿರತಳಾದಂತಿದ್ದರೂ ಅವಳ ಲಕ್ಷ್ಯವೆಲ್ಲ ಈ ಕಡೆಗೇ ಇತ್ತು. ರುಚೀದೇವಿಗೆ ಈ ವ್ಯವಹಾರವೊಂದೂ ಅರ್ಥವಾಗದೆ ಎರಡು ಮೂರು ಸಂದೇಹಗಳು ಹೃದಯವನ್ನು ಕಲಕುತ್ತಿರಲು ನಾಚಿದವಳಾಗಿ ತನ್ನೊಳಗೆ, 'ಈ ಗಂಡಹೆಂಡಿರ ವಿಚಿತ್ರಲೀಲೆಯಲ್ಲಿ ನಾನು ಚಟ್ನಿಯಾಗುತ್ತಿರುವೆನಲ್ಲ! ನನ್ನಾಣ್ಮನಾದ ವಿರೂಪಾಕ್ಷನು ಇವನಲ್ಲವೇನೊ?' ಎಂದು ತಳ್ಳಂಕಪಡುತ್ತ, ಮೆಲ್ಲನೆ ಅಲ್ಲಿಂದ ಪಾರಾಗಲು ಯತ್ನಿಸುತ್ತಿದ್ದಳು.

ಇದನ್ನರಿತ ಚಿನ್ನಾದೇವಿ ಸರಸರನೆ ಅವಳ ಬಳಿಗೆ ಸಾರಿ, "ಇತ್ತ ಬಾರೇ ರುಚೀ. ನೋಡೇ ಇವರಾರೆಂದು? ಎಲ್ಲಿ ಆ ಭಾವಚಿತ್ರ?" ಎಂದು ಒಂದು ಕೈಯಿಂದ ಆ ಚಿತ್ರದ ಕನ್ನಡಿಯನ್ನೂ, ಇನ್ನೊಂದು ಕೈಯಿಂದ ಬೊಂಬೆಯಂತಹ ರುಚೀದೇವಿಯನ್ನೂ ಹಿಡಿದೆಳೆದುಕೊಂಡು ರಾಯನ ಪಕ್ಕಕ್ಕೆ ಬಂದು, "ತಂಗೀ ನಿನ್ನ ಮನಸ್ಸು ಸಂದೇಹದಿಂದ ತೂಗಾಡುತ್ತಿರುವ ಚೆಂದವನ್ನು ನಾನು ಬಲ್ಲೆ. ಈಗ ನೋಡೇ ಈ ಪ್ರತ್ಯಕ್ಷಮೂರ್ತಿ ಈ ಭಾವಚಿತ್ರದ ಹಾಗೆಯೇ ಉಂಟಲ್ಲವೆ? ನಾನು ಹೇಳಿದ ವಿರೂಪಾಕ್ಷರಾಯರು ಇವರೇ. ಆದರೆ ಹೊರಗಿನಿಂದ ಮಾತ್ರ ಕೃಷ್ಣದೇವರಾಯರು! ನಿನ್ನ ಮನೋಭೀಷ್ಟವು ಹೇಗೆ ಸಿದ್ಧಿಸಿತು ನೋಡಿದಿಯಾ? ತಂಗಿ, ಇನ್ನು ಚಿಂತೆಯನ್ನು ಬಿಡು. ನಮ್ಮ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷರಾದ ದೇವರನ್ನು ಉಪಚರಿಸಬೇಕಲ್ಲವೆ? ಗೌರಿ, ನೀನು ಹೋಗಿ ಮಜ್ಜನಶಾಲೆಯಲ್ಲಿ ಎಲ್ಲಾ ಅಣಿ ಮಾಡು. ತಿರುಮಲಾ, ನೀನು ಹೋಗಿ ನಿನ್ನ ತಂದೆಗೆ ಬೇಕಾದ ಉಪಾಹಾರಗಳನ್ನು ತೆಗೆದುಕೊಂಡು ಬಾ. ಅಪ್ಪನಿಗೆ ಏನು ಬೇಕೆಂದು ನೀನು ಅವರೊಂದಿಗಿದ್ದು ತಿಳಿದುಕೊಂಡಿರುವಿಯಷ್ಟೆ?" ಎಂದಳು.

"ಓಹೊ! ನನಗೆಲ್ಲ ಗೊತ್ತಿದೆಯಮ್ಮ" ಎಂದು ತಿರುಮಲಾಬಾಲೆ ಜಿಂಕೆಯಂತೆ ಹಾರಿ ಹಾರಿ ಓಡಿಹೋದಳು.

ಗೌರಿ ರುಚೀದೇವಿಯ ಮೇಲೊಂದು ಪ್ರಫುಲ್ಲ ಕಟಾಕ್ಷವನ್ನೆಸೆದು ತಲೆ ತಗ್ಗಿಸಿಕೊಂಡು ಹೊರಗೆ ಹೋದಳು.

ಚಿನ್ನಾದೇವಿಯೆಂದಳು: "ತಂಗಿ, ರುಚೀ, ನಿನ್ನ ಮನಸ್ಸೀಗ

ಬಹಳ ಅಲೆದಾಟದಲ್ಲಿ ಸಿಕ್ಕಿರುವುದೆಂದು ನಾನು ಬಲ್ಲೆ. ಸ್ವಲ್ಪ ಸೈರಿಸು. ಎಲ್ಲವೂ ತಿಳಿಯುವುದು. ಆಹಾ! ಎಂತಹ ವಿಚಿತ್ರ ದೈವಲೀಲೆಯಿದು. ನಾನೆಷ್ಟು ಮೋಸಹೋದೆನು! ನಾಥಾ, ಸುಖಾಸೀನರಾಗಬೇಕು. ಈ ದೀನೆಯ ಬಡಮನೆಗೆ ದಯಮಾಡಿಸಿದ ತಾವು ಒಂದಿಷ್ಟು ನನ್ನ ಪೂಜೋಪಚಾರವನ್ನು ಸ್ವೀಕರಿಸಬೇಕು. ನನ್ನ ಆತಿಥ್ಯವನ್ನು ಸ್ವೀಕರಿಸಿದರೆ ತಮ್ಮ ಸಿಂಹಾಸನದ ಪಾವಿತ್ರ್ಯಕ್ಕೆ ಭಂಗವಾಗಲಿಕ್ಕಿಲ್ಲ ವಷ್ಟೆ?"

ಚಿನ್ನಾದೇವಿ ರಾಯನ ಕೈಯನ್ನು ಹಿಡಿದು, ಗದ್ದುಗೆಯ ಕಡೆಗೆ ಕರೆದೊಯ್ಯಲು, ಅವನು ಅವಳಿಗೆ ಅಧೀನನಾದವನಂತೆ ನಡೆದು, ಆಸೀನನಾಗಿ ಮುಗುಳ್ನಗುತ್ತಾ, "ಅದಿರಲಿ ಚಿನ್ನಾ, ನಾನೀಗ ನಾನಾ ಸಂದೇಹಗಳಿಂದ ತೂಗಾಡುತ್ತಿದ್ದೇನೆ. ನೀನು ಚೋರನಾಯಕಿ ಯಾಗಲೇಕೆ? ನನ್ನ ಮೇಲೆ ವೈರಸಾಧನೆ ಮಾಡಿದಿಯೇಕೆ? ಇಲ್ಲಿ ಈ ಗಜರಾಜ ನಂದಿನಿ ಹೇಗೆ ಬಂದಳು? ಇವನ್ನೆಲ್ಲಾ ವಿವರಿಸಿ ಹೇಳಿ ನನ್ನ ಸಂದೇಹವನ್ನು ತೊಲಗಿಸು" ಎಂದನು.

"ಕೊಂಚ ತಾಳಿರಿ. ಮಹಾರಾಜರೆ, ಈ ನೂತನವಾದ ನಾಮವೇಷಗಳನ್ನು ಧರಿಸಿಕೊಂಡು ನನ್ನನ್ನು ಭ್ರಾಂತಿಯಲ್ಲಿ ತೊಳಲಿ ಸಿದ ನಿಮ್ಮನ್ನು ನಾನು ಸುಮ್ಮನೆ ಬಿಡುವೆನೆಂದು ಭಾವಿಸಿದಿರಾ? ಮೊದಲು ನಿಮ್ಮನ್ನು ದಂಡಿಸಿ ನನ್ನ ಹಗೆಯನ್ನು ತೀರಿಸಿಕೊಳ್ಳುವೆನು" ಎಂದು ಚಿನ್ನಾದೇವಿ ರುಚೀದೇವಿಯನ್ನು ದರದರನೆ ಎಳೆದು ತಂದು, "ಹೀಗೆ ದಂಡಿಸುತ್ತೇನೆ. ಇವಳ ಕೈಗಳಿಂದ ನಿಮ್ಮ ಕೈಗಳು ಬಂಧಿತ ವಾಗಲಿ!" ಎಂದು ರುಚೀದೇವಿಯ ಕರಪಲ್ಲವವನ್ನು ರಾಯನ ಹಸ್ತ ದಲ್ಲಿಟ್ಟು ಅವಳನ್ನು ರಾಯನ ಬಲಭಾಗದಲ್ಲಿ ಬಲವಂತದಿಂದ ಒತ್ತಿ ಗೂಡಿಸಿ "ರಾಜೇಂದ್ರ, ಇವಳೇ ಕನ್ನಡಾಂಧ್ರದ ಐಕಮತ್ಯವನ್ನು ಹೊಂದಿಸಬಲ್ಲವಳಾದ ನಿಮ್ಮ ವಿಜಯವಧು!" ಎಂದಳು.

"ನೀನು ನನ್ನ ಪ್ರೇಮವಧು ಚಿನ್ನಾ" ಎನ್ನುತ್ತಾ ರಾಯನು ಚಿನ್ನಾದೇವಿಯನ್ನು ಎಳೆದು ಇನ್ನೊಂದು ಬದಿಯಲ್ಲಿ ಕೂಡಿಸಿಕೊಂಡು "ಈಗ ಹೇಳು ಚಿನ್ನಾ" ಎಂದನು.

ಚಿನ್ನಾದೇವಿ ಹೇಳತೊಡಗಿದಳು : "ನಾಥಾ, ಎಲ್ಲವನ್ನೂ ವಿವರವಾಗಿ ಹೇಳಬೇಕಾದರೆ ತುಂಬಾ ವೇಳೆ ಬೇಕಾದೀತು. ಈಗ ಸಂಕ್ಷೇಪವಾಗಿ ಹೇಳುತ್ತೇನೆ. ಅಂದು ಓಂಪಲ್ಲಿಯಿಂದ ನೀವು ನನ್ನನ್ನು ಅಗಲಿ ಹೋದ ಮೇಲೆ ನಿಮ್ಮ ವಿಷಯವಾಗಿ ದುರ್ವಾರ್ತೆಯನ್ನು ಕೇಳಿದೆನು. ನೀವು ನನ್ನ ಪತಿಯನ್ನು ಶೂಲಕ್ಕೇರಿಸಿದಿರೆಂದು ಭ್ರಾಂತಿಯನ್ನು ತಾಳಿದೆನು. ನೀವು ನನ್ನನ್ನು ಅಗಲುವಾಗಲೇ ನನ್ನ ತಾಯಿ ರುಜಾಗ್ರಸ್ತೆಯಾಗಿ ಮಲಗಿದ್ದಳಷ್ಟೆ? ನಿಮ್ಮ ವಿಯೋಗ, ದುಃಖದ ಪರಿಣಾಮವಾಗಿ ಅವಳ ರೋಗವು ಅಂತಿಮಾವಸ್ಥೆಗೆ ಮುಟ್ಟಿತು. ಮೊದಲೇ ಮನೋವ್ಯಾಧಿಯಿಂದ ಸಂಕಟಪಡುತ್ತಿದ್ದವಳು, ಕಟ್ಟಕಡೆಗೆ ಸಾಯುವ ಮೊದಲು ಅವಳ ವಂಶದ ರಹಸ್ಯಗಳನ್ನು ನನಗೆ ತಿಳಿಸಿದಳು. ಅವಳ ಕೊರಳಿನಲ್ಲಿದ್ದ ನನ್ನ ತಂದೆಯ ಹೆಸರಿರುವ ಪದಕವನ್ನು ಬಿಚ್ಚಿ ನನಗೆ ಕೊಟ್ಟಳು. ನಾನು ವೀರ ಕ್ಷತ್ರಿಯಕುಮಾರಿಯೆಂದು ಸ್ಪಷ್ಟವಾಗಿ ನನ್ನ ತಾಯಿಯ ಬಾಯಿಯಿಂದ ಕೇಳಿದೆನು. ತನ್ನ ವಂಶ ರಹಸ್ಯಗಳನ್ನು ಒಡೆದು ಅವಳ ಮೇಲೆ ಬಂದ ದುಷ್ಕಳಂಕವನ್ನು ನಾನು ತೊಡೆದು ಹಾಕಿದರೆ ತಾನು ಪರಲೋಕದಲ್ಲಿ ಸಂತೋಷಪಡುವೆನೆಂದೂ ಹೇಳಿದಳು. ಆದರೆ ಹಾಗೆ ಆದೀತೆಂಬ ನಂಬುಗೆಯೇ ಅವಳಿಗಿರಲಿಲ್ಲ. ಹಾಗೆ ಅವಳು ಪರಲೋಕವಾಸಿನಿಯಾದ ಮೇಲೆ ನನಗಿನ್ನಾರು ದಿಕ್ಕು? ಮಹಾ ವೈರಾಗ್ಯದಿಂದ ನೀವು ನನಗಾಗಿ ಕೊಡಿಸಿಟ್ಟ ಸ್ಥಿರಚರ ಸೊತ್ತುಗಳನ್ನೆಲ್ಲಾ ಧರ್ಮಕರ್ಮಗಳಿಗೆ ವಿನಿಯೋಗಿಸಿ ನನ್ನ ಕುಮಾರಿಯೊಂದಿಗೆ ತೀರ್ಥಯಾತ್ರೆಗೆ ಹೊರಟೆನು........"

ಆಗ ಕೃಷ್ಣದೇವನು ನಡುವೇ ಬಾಯಿ ಹಾಕಿ, "ಹೌದು. ಆಗ ನಾನು ದಕ್ಷಿಣ ದಿಗ್ವಿಜಯಕ್ಕಾಗಿ ಶ್ರೀರಂಗಪ್ರಾಂತಕ್ಕೆ ಬಂದಿದ್ದೆ. ಆಗ ನಿನ್ನ ನೆನಪು ಬಂದು ಮನಸ್ಸು ಕೇಳದೆ, ಒಂದು ದಿನ ಓಂಪಲ್ಲಿಗೆ ಬಂದಿದ್ದೆ. ಆಗ ನೀನು ಸಂನ್ಯಾಸಿನಿಯಾಗಿ ಹೋಗಿರುವ ವೃತ್ತಾಂತವು ನನಗೆ ತಿಳಿಯಿತು. ನಾನು ನಿನ್ನನ್ನು ಕಂಡು ಹಿಡಿಯುವ ಉದ್ದೇಶದಿಂದ ಕಂಡ ಕಂಡ ಭಿಕ್ಷುಕ ಸಂನ್ಯಾಸಿ, ಸಂನ್ಯಾಸಿನಿಯರನ್ನೆಲ್ಲಾ ಹಿಡಿದು ತರಿಸುವ ಅಪ್ಪಣೆಯನ್ನು ಹೊರಡಿಸಿದೆ...."

"ಆ ನಿಮ್ಮ ಅಪ್ಪಣೆಯೇ ನನಗೆ ನಿಮ್ಮ ಮೇಲೆ ದ್ವೇಷವನ್ನು ಹೆಚ್ಚಿಸಿತು. ನಾನು ಆಗ ವೇಷಾಂತರದಿಂದ ಶ್ರೀರಂಗದಲ್ಲಿದ್ದೆನು. ನನ್ನಿದಿರೇ ರಾಜಭಟರು ಭಿಕ್ಷುಕ ಸಂನ್ಯಾಸಿಗಳನ್ನು ಎಳೆದುಕೊಂಡು ಹೋಗುತ್ತಿದ್ದರು. ನಾನು ಜನರನ್ನು ಕೆರಳಿಸಿ ಆ ರಾಜಕರ್ಮಚಾರಿಗಳನ್ನು ಓಡಿಸಿಬಿಟ್ಟೆ. ಆ ಸಂದರ್ಭವೇ ನನಗೆ ಚೋರನಾಯಕನ ಸಂದರ್ಭವನ್ನೊದಗಿಸಿತು. ದೈವಯೋಗದಿಂದ ನಾನು ಚೋರರೆಲ್ಲರಿಗೂ ಅಧಿನಾಯಕಿಯಾಗಿ ಹೀಗೆ ಪ್ರಖ್ಯಾತಳಾದೆನು. ಈಗ ಭಗವಂತನ ಕಟಾಕ್ಷದಿಂದ ನನ್ನ ತಾಯಿಯ ಕೋರಿಕೆ ಈಡೇರುವಂತಾಯಿತು. ನನ್ನ ವಂಶವನ್ನು ಆಚ್ಛಾದನೆ ಮಾಡಿದ ಮೂಲ ಘಾತಕನನ್ನು ಬಂಧಿಸಿರುತ್ತೇನೆ. ಕ್ಷತ್ರಿಯ ಕುಲತಿಲಕರಾದ ನನ್ನ ತಂದೆಯನ್ನೂ ಇಲ್ಲಿಯೇ ಈಗಲೇ ನಿಮಗೆ ದರ್ಶನ ಮಾಡಿಸುವೆನು, ನಾಥಾ, ನೀವೇ ನನ್ನ ಪತಿ ಎಂಬ ರಹಸ್ಯವು ಮೊನ್ನೆ ತಾನೇ ನಿಮ್ಮ ಘಟಕ ಸಂನ್ಯಾಸಿಗಳಿಂದ ನನಗೆ ತಿಳಿಯಿತು........"

"ಚಿನ್ನಾ, ಎಂತಹ ಅಮೃತವಾರ್ತೆಯನ್ನು ಕೇಳಿದೆನು! ಮುಖ್ಯವಾಗಿ ನೀನು ಉತ್ತಮ ಕ್ಷತ್ರಿಯ ಕುಲೋತ್ಪನ್ನಳೆಂಬ ದಿವ್ಯವಾಕ್ಯವು ನನ್ನ ಚಿಂತೆಯ ಬೆಟ್ಟವನ್ನೆಲ್ಲಾ ಪುಡಿಪುಡಿ ಮಾಡಿ ಹಾಕಿತು. ತಡಮಾಡದೆ ನಿನ್ನ ತಂದೆಯ ದಿವ್ಯನಾಮವನ್ನು ಹೇಳಿ ನನ್ನನ್ನು ಧನ್ಯನನ್ನಾಗಿಸು!"

"ಇದೋ, ನನ್ನ ತಾಯಿಯ ಕೊರಳಲ್ಲಿದ್ದ ಈ ಪದಕವನ್ನು ನೋಡಿರಿ."

ರಾಯನು ಅದರಲ್ಲಿರುವ ಪುಟ್ಟ ಅಕ್ಷರಗಳನ್ನು ಓದಿದನು: "ವೀರರುದ್ರ ಗಜಪತಿ!" ರಾಯನ ಕಣ್ಣು ಇಷ್ಟಗಲವಾಯಿತು.

ರುಚೀದೇವಿಯೂ ವಿಸ್ಮಯ ವಿಸ್ಫಾರಿತ ನೇತ್ರಳಾಗಿ ಚಿನ್ನಾದೇವಿಯನ್ನು ನೋಡಿದಳು.

"ನಾಥಾ! ಉದಯಗಿರಿಯ ರಾಜಾ ವೀರರುದ್ರ ಗಜಪತಿಯೇ ನನ್ನ ತಂದೆ!" ಚಿನ್ನಾ ಹೇಳಿದಳು.

"ನೀನೂ ಗಜಪತಿ ಸಂದಿನಿಯೆ?"

"ಹೌದು. ಉದಯಗಿರಿಯ ಹಿರಿಯ ರಾಣಿಯಾದ ಸುಭದ್ರಾ ದೇವಿಯೇ ದುಃಖಮಯಿಯಾಗಿ ಕಾಲಗತಳಾದ ನನ್ನ ತಾಯಿ ಭದ್ರವ್ವ!"

ಆಗಲೇ ಬಂಗಾರದ ತಾಟಿನಲ್ಲಿ ಬಗೆಬಗೆಯ ಹಣ್ಣು ಹಂಪಲು ಗಳನ್ನು ತೆಗೆದುಕೊಂಡು ಪ್ರವೇಶಿಸಿದ ತಿರುಮಲಾ ಕುಮಾರಿ, ಇಬ್ಬರು ರಾಣಿಯವರ ನಡುವಿನಲ್ಲಿ ರಾರಾಜಿಸುವ ರಾಯನನ್ನು ಕಂಡು ಅಟ್ಟ ಹಾಸದ ಕುಲುಕು ದನಿಯಿಂದ, "ಓಹೋಹೊ! ಶ್ರೀದೇವೀ ಭೂದೇವಿ ಸಮೇತ ಶ್ರೀಮನ್ನಾರಾಯಣ ಮೂರ್ತಿಯೇ ಪ್ರತ್ಯಕ್ಷವಾದ ಹಾಗಿದೆ ಯಲ್ಲಾ!" ಎಂದು ಕೂಗಿ ತಾಟನ್ನು ಕೆಳಗಿಟ್ಟು ಓಡಿಬಂದು ತಂದೆ ತಾಯಿಗಳ ಅಡಿಗಳಿಗೆ ವಂದಿಸಿದಳು.

ರಾಯನು ಸಂಭ್ರಮದಿಂದ ಕುಮಾರಿಯನ್ನೆತ್ತಿ ಮಡಿಲಲ್ಲಿ ಕೂಡಿಸಿಕೊಂಡು "ಇಂದು ನಿನ್ನಿಂದಲೇ ಈ ಸುಯೋಗವು ಕೂಡಿತಮ್ಮ" ಎಂದು ಅವಳನ್ನು ಮುದ್ದಿಸಿದನು.

ಚಿನ್ನಾದೇವಿ ರುಚೀದೇವಿಯನ್ನು ತಿರುಮಲಾಗೆ ತೋರಿಸುತ್ತ, "ಇವಳಾರು ಗೊತ್ತೇ, ಉತ್ಕಲರಾಜ ನಂದಿನಿ ರುಚೀದೇವಿ–ನಿನ್ನ ಚಿಕ್ಕಮ್ಮ!" ಎಂದಳು.

"ಓಹೊ! ನಾನು ನನ್ನ ಚಿಕ್ಕಮ್ಮನನ್ನು ಅರಿತುಕೊಳ್ಳದೆ ಹೋದೆನು. ಮಾತಾಡಿಸದೆ ಗೌರವಿಸದೆ ಹೋದೆನು. ಚಿಕ್ಕಮ್ಮ, ನನ್ನ ತಪ್ಪನ್ನು ಕ್ಷಮಿಸಮ್ಮ" ಎಂದು ತಿರುಮಲಾ ರುಚೀದೇವಿಯ ಕಡೆಗೆ ತಿರುಗಲು, ರುಚೀದೇವಿ ಅವಳನ್ನು ಬಾಚಿ ತಬ್ಬಿಕೊಂಡು "ತಾಯಿ ಮಗುವನ್ನು ಕ್ಷಮಿಸುವುದೆಂದರೇನೆ!" ಎಂದು ನಕ್ಕಳು.

ಅನಂತರ ಅವರೆಲ್ಲರೂ ಸೇರಿ ರಾಯನನ್ನು ಮಜ್ಜನಶಾಲೆಗೆ ಕರೆದೊಯ್ದರು. ಮಾತು ಕತೆಯಾಡುತ್ತಾ ಉಪಾಹಾರವು ತೀರಿತು. ಹನ್ನೊಂದು ವರ್ಷದಿಂದ ನಡೆದುದೆಲ್ಲವನ್ನೂ ಚಿನ್ನಾದೇವಿ ವಿವರಿಸಿ ದಳು. ಭದ್ರವ್ವನ ಮರಣ, ಉದಯಗಿರಿಯ ಮುತ್ತಿಗೆಯಲ್ಲಿ ಚಿನ್ನಾ ದೇವಿಯ ಅಂಗ, ಅವಳು ವೀರರುದ್ರ ಗಜಪತಿಯನ್ನು ಅಲ್ಲಿಂದ ಅಪಹರಿಸಿದ್ದು, ರುಚೀಹರಣ, ನಾಗಲಾದೇವಿಯ ಹತ್ಯಾವೃತ್ತ, ತಿಮ್ಮಾಂ

ಬೆಯ ಘಾತಕತನ, ರಾಮರಾಜನ ಸಹೃದಯತೆ, ಮೊದಲಾದೆಲ್ಲವೂ ರಾಯನಿಗೆ ವಿಶದವಾಯಿತು. ರುಚೀದೇವಿಯೂ ಭಿಡೆ-ಭಾವವನ್ನು ಬದಿಗಿಟ್ಟು ಸಂಭಾಷಣೆಯಲ್ಲಿ ಸಮಭಾಗಿನಿಯಾದಳು.

ಹಾಗೆಯೇ ವೀರರುದ್ರ ಗಜಪತಿಯೂ ರಾಯನೂ ಸಂಧಿಸಲ್ಪಟ್ಟರು. ಮೈತ್ರಿಯಿಂದಲೇ ಅವರ ಮಾತುಕತೆ ನಡೆಯಿತು. ಇನ್ನು ದೇಶಕಲ್ಯಾಣಕ್ಕೆ ಬೇಕಾದುದು ಪ್ರತಾಪರುದ್ರನ ಮೈತ್ರೀಯೋಗ ಒಂದೇ. ಅಧಿಕ ತೂಕವಾಗಿ ನಿಂತಿರುವ ಈ ಆನಂದದ ಯೋಗದಿಂದ, ನಿರ್ಬಲವಾಗಿ ಅಲ್ಪ ತೂಕವಾಗಿರುವ ಆತನ ಹಟವು ಇನ್ನು ಲಘುವಾಗಿ ಹಾರಿಹೋಗುವುದರಲ್ಲೇನೂ ಸಂದೇಹವಿರಲಿಲ್ಲ.

ಅನಂತರ ರಾಯನು, ಕೆಲವು ಮಂದಿ ನಗರ ಪ್ರಮುಖರನ್ನೂ ಮುಖ್ಯಾಧಿಕಾರಿಗಳನ್ನೂ, ಅಚ್ಯುತರಾಯನೇ ಮೊದಲಾದ ಬಂಧುಗಳನ್ನೂ ಕರೆದುಕೊಂಡು ಆ ಶೈಲಭವನಕ್ಕೆ ಬರುವಂತೆ, ತಿಮ್ಮರಸ ಮಂತ್ರೀಶನಿಗೆ ಆ ಆಜ್ಞಾಪತ್ರವನ್ನು ಕಳುಹಿಸಿದನು.

೨೪

ಕೆಲವು ದಿನಗಳ ಕೆಳಗೆ, ಪ್ರತಾಪರುದ್ರ ಗಜಪತಿಗೆ ಪತ್ರವನ್ನು ಬಗೆಯಿಸಿದಮೇಲೆ, ರಾಮುಯಾಮಾತ್ಯನು ಕೋಣೆಯೊಳಗೆ ಬಂದೀವಾನನಾಗಿ ಹೋದನಲ್ಲವೇ? ಆಮೇಲೆ ಇದುವರೆಗೆ ಚಿನ್ನಾದೇವಿಯಾಗಲೀ ವೀರರುದ್ರನಾಗಲೀ ಅವನ ದರ್ಶನಕ್ಕೇ ಹೋಗಿರಲಿಲ್ಲ. ಸೇವಕರ ಮುಖಾಂತರವಾಗಿಯೇ ಆ ತಂತ್ರಕೋವಿದನನ್ನು ಎಚ್ಚರಿಕೆಯಿಂದ ಕಾದಿರಿಸಲ್ಪಟ್ಟಿತ್ತು. ರಾಮುಯಾಮಾತ್ಯನ ಬುದ್ಧಿಯೇ ಮಂಕಾಗಿ ಏನೂ ತೋರದೆ ಬಹುಕಷ್ಟದಿಂದ ದಿನಗಳನ್ನು ದೂಡುತ್ತಿದ್ದನು.

ಅಪರಾಹ್ನದ ಸಮಯದಲ್ಲಿ ರಾಮುಯಾಮಾತ್ಯನು ಹೊತ್ತು ಹೋಗದೆ, ಶಿಲಾಸನದ ಮೇಲೆ ಕುಳಿತುಕೊಂಡು ಮೇಲೆ ನೋಡುತ್ತಾ, ಭಗವದ್ಗೀತೆಯ ಹನ್ನೊಂದನೇ ಅಧ್ಯಾಯದ, ಪರಮಾತ್ಮನ ವಿಶ್ವರೂಪ ವರ್ಣನೆಯ ಶ್ಲೋಕಗಳನ್ನು ರಾಗದಿಂದ ಉಚ್ಚರಿಸುತ್ತಿದ್ದನು.

ಬಾಗಿಲುತೆರೆದುಕೊಂಡು ಅದೇ ವಿರಕ್ತವೇಷ ಧಾರಿಣಿಯಾದ ಅಜ್ಞಾತಾ. ಅಲ್ಲ ಅಲ್ಲ, ಚಿನ್ನಾದೇವಿ ಒಳಹೊಕ್ಕು ನಸುನಗುತ್ತ- "ಓಹೋ! ಅಮಾತ್ಯಶ್ರೇಷ್ಠರು ಒಳ್ಳೇ ಆನಂದದಲ್ಲಿರುವಹಾಗಿದೆ. ಶ್ರೀಕೃಷ್ಣನು ನಿಮಗೆ ವಿಶ್ವರೂಪವನ್ನು ತೋರಿಸುತ್ತಿರುವ ಸಮಯವಿದು. ನಿಮ್ಮೊಳಗೆ ಅಡಗಿರುವ ಗಭೀರವಾದ ಇನ್ನೊಂದು ವಿಶ್ವರೂಪವು

ಈಗ ಗೋಚರವಾದಿತೆಂದು ತೋರುತ್ತದೆ" ಎನ್ನುತ್ತಾ ಒಂದು ಶಿಲಾಸನದಮೇಲೆ ಮಂಡಿಸಿದಳು.

ರಾಮಯಾಮಾತ್ಯನು ಭ್ರೂಭಂಗಮಾಡಿಕೊಂಡು, ಚಿನ್ನಾದೇವಿಯನ್ನು ತೀಕ್ಷ್ಣ ದೃಷ್ಟಿಯಿಂದ ನೋಡುತ್ತಾ-"ಚೋರನಾಯಕಿ! ನಿನ್ನ ಈ ಮರ್ಮ ವಾಕ್ಚಾತುರ್ಯವನ್ನು ನನ್ನ ಮುಂದೆ ತೋರಬೇಡ. ನನ್ನನ್ನು ಯಾವ ಉದ್ದೇಶದಿಂದ ಹೀಗೆ ಬಂದೀ ಮಾಡಿರುವೆ? ಮೊದಲು ಹೇಳು" ಎಂದನು.

"ಅವಸರ ಪಡಬೇಡಿ. ನೀವೀಗ ಆಶ್ಚರ್ಯತರಂಗಗಳಲ್ಲಿ ತೇಲಾಡಲಿಕ್ಕಿದೆ. ಅದಕ್ಕೆ ಸಿದ್ಧರಾಗಬೇಕು!" ಹೀಗೆಂದು ಚಿನ್ನಾದೇವಿ "ತಿರುಮಲಾ?" ಎಂದು ಕರೆದಳು.

"ಇದೋ ಬಂದೆ ಅಮ್ಮಾ" ಎನ್ನುತ್ತಾ ತಿರುಮಲಾ ಕುಮಾರಿ ಒಳಗೆ ಪ್ರವೇಶಿಸಿದಳು. ರಾಮಯಾಮಾತ್ಯನು ಬೆಟ್ಟಬಿದ್ದನು.

"ತಿರುಮಲಾ, ನಿನ್ನನ್ನು ಮುಸಲ್ಮಾನರ ಅಂತಃಪುರಕ್ಕೆ ಕೊಂಡೊಯ್ದವರಲ್ಲಿ ಈ ಬ್ರಾಹ್ಮಣಶ್ರೇಷ್ಠರೂ ಇದ್ದರೊ?" ಕೇಳಿದಳು ಚಿನ್ನಾ.

ತಿರುಮಲಾ ರಾಮಯಾಮಾತ್ಯನ ಮುಖದ ಸಮೀಪಕ್ಕೆ ತನ್ನ ಮುಖವನ್ನೊಯ್ದು ದಿಟ್ಟಿಸಿ "ಇದ್ದರಮ್ಮ. ಹೌದು. ಇವರೇ ಆಗ ದೊಡ್ಡ ಮುಂಡಾಸನ್ನು ಕಟ್ಟಿಕೊಂಡು ಬೇರೆ ವೇಷದಲ್ಲಿದ್ದರು. ಅಲ್ಲವೇ ಸ್ವಾಮಿ? ತಮಗೆ ನನ್ನ ಪರಿಚಯವಿದೆಯೇ?" ಎಂದು ಕೇಳಿದಳು.

ಏನು ಹೇಳುವುದೆಂದು ರಾಮಯಾಮಾತ್ಯನು ಸಪ್ಪಗಿರಲು ಚಿನ್ನಾದೇವಿ-"ಏಕೆ ಮೌನ? ಇವಳ ಗುರುತು ಹತ್ತಲಿಲ್ಲವೆ?" ಎಂದಳು.

"ಹೌದು, ತಪ್ಪೇನಾಯಿತು? ಚೋರನಾಯಕಿ! ನಿನ್ನ ಮಗಳು ರಾಣಿಯಾಗುವುದು ನಿನಗಿಷ್ಟವಿಲ್ಲ?" ರಾಮಯಾಮಾತ್ಯನೆಂದ.

ಚಿನ್ನಾ: "ಯಾರ ರಾಣಿ?"

ರಾಮ: "ಯವನ ಪಟ್ಟದರಾಣಿ!

ಚಿನ್ನಾ: "ಯವನ ಪಟ್ಟದ ರಾಣಿ! ಆಹಾ! ಹಿಂದೂ ಕನ್ಯೆಯೊಬ್ಬಳು, ಒಬ್ಬ ಬ್ರಾಹ್ಮಣೋತ್ತಮನ ದಿವ್ಯ ಘಟನೆಯಿಂದ ಯವನ

ರಾಣಿಯಾಗುವುದು ಅಲ್ಲವೆ ?"

ರಾಮು : "ಏಕಾಗಬಾರದು ? ನಿನ್ನ ಮಗಳು ಹಿಂದೂ ಕನ್ಯೆಯಾದರೂ ಕಳಂಕವತಿಯಾದ ಚೋರನಾಯಕಿಯ ಮಗಳು !"

ಚಿನ್ನಾ : "ಸ್ವಲ್ಪ ಎಚ್ಚರದಿಂದ ಮಾತನಾಡಬೇಕು ನೀವು."

ರಾಮು : "ನಿನ್ನ ಮಗಳು ರಾಣಿಯಾಗುವುದು ನಿನಗೆ ಸಂತೋಷಪ್ರದವೆಂದೇ ನನ್ನ ನಂಬುಗೆಯಿತ್ತು. ಅಲ್ಲದೆ ಮೊದಲೇ ನಿನಗೆ ತಿಳಿಸಿ ನಿನ್ನ ಸಮ್ಮತಿಯಿಂದಲೇ ಕರೆದೊಯ್ಯಬೇಕೆಂದೂ ಇತ್ತು. ಆದರೆ ಆಗ ನೀನು ವಿಜಯನಗರದ ಬಂದೀಖಾನೆಯೊಳಗೆ ಸಿಕ್ಕಿಬಿದ್ದಿದ್ದಿಯಾದ್ದರಿಂದ ಹಾಗೆ ಅಪಹಾರಮಾಡಬೇಕಾಯಿತು. ವಧೂವರರು ಪರಸ್ಪರ ನೋಡಿ ಮಾತಾಡಿ ಮೆಚ್ಚಿಕೊಂಡ ಮೇಲೆ ನಿನ್ನ ಸಮ್ಮತಿಯನ್ನು ಪಡೆದರಾಯಿತೆಂದುಕೊಂಡು ಸುಮ್ಮನಿದ್ದೆನು. ನಾನು ಇಲ್ಲಿಗೆ ಬಂದದ್ದಾದರೂ ಆ ವಿಷಯವನ್ನು ಮಾತಾಡಲಿಕ್ಕೇ ಆಗಿತ್ತು."

ಚಿನ್ನಾ : "ಹಾಗಾದರೆ ಈವರೆಗೂ ಸುಮ್ಮನಿದ್ದಿರಲ್ಲಾ."

ರಾಮು: "ನೀನು ನನ್ನನ್ನು ನಂಬುವಿಯೆಂದು ನನಗೆ ನಂಬುಗೆಯಾಗಬೇಕಷ್ಟೆ ?"

ಚಿನ್ನಾ : "ಸ್ವಾಮಿ. ತಾವು ನಾಲಿಗೆಯನ್ನು ತಿರುಗಿಸುವುದರಲ್ಲಿ ಬಹಳ ಗಟ್ಟಿಗರು. ಎಲ್ಲಿ, ಹೇಳಿ ನೋಡೋಣ. ನನ್ನ ಇತಿವೃತ್ತ ನಿಮಗೆ ಗೊತ್ತೆ ? ನಾನು ಯಾರು ?"

ರಾಮು : "ನೀನೊಬ್ಬಳು ಗೋಮುಖವ್ಯಾಘ್ರಿಣಿಯೆಂದು ಚೆನ್ನಾಗಿ ಅರಿತೆ. ಅಂದು ಹುಲ್ಲಿನವಳ ವೇಷದಲ್ಲಿ ನೀನು ಮೊದಲು ನನ್ನ ಕಣ್ಣಿಗೆ ಬಿದ್ದಾಗಲೇ ನಿನ್ನ ಗುಟ್ಟನ್ನು ಹೇಳಿಬಿಡುತ್ತಿದ್ದೆ. ಆದರೆ ನೀನು ಏನೋ ಚಾಕುಪೋಕು ಹೇಳಿ ನಮಗೆ ಸಹಾಯ ಮಾಡುವವಳ ಹಾಗೆ ಭಾರೀ ನಟನೆ ಮಾಡಿದಿ. ನಾನು ನಿನ್ನ ಆ ಸಹಾಯ ಭರವಸೆಗಳಲ್ಲಿ ನಂಬುಗೆ ಇಡದೇನೇ ಇದ್ದದ್ದು ಈಗ ಸರಿಹೋಯಿತು. ನೀನು ನಮಗೆ ಸಹಾಯ ಮಾಡುವೆನೆಂದು ಏನೇನು ಮಾಡಿದಿಯೋ ಅವೆಲ್ಲವೂ ನಿನ್ನ ನಲ್ಲನ ಕಡೆಗೇ ಸಹಾಯವಾಗಿರುವುದನ್ನು ನಾನು ಕಾಣೆನೆ ? ಆಹಾ ! ವಿದ್ಯಾನಗರದ ಶತ್ರುಗಳೆಲ್ಲರನ್ನೂ ಇಲ್ಲಿ ಸೇರಿ

ಹಾಕಿರುವೆ. ಇನ್ನು ನಮ್ಮೆಲ್ಲರನ್ನೂ ನಿನ್ನ ಪ್ರಿಯನಾದ ಕೃಷ್ಣದೇವನ ವಶಕ್ಕೆ ಒಪ್ಪಿಸಿ ಯಮಯಾತನೆಗೆ ಗುರಿಪಡಿಸುತ್ತೀ ಎಂಬ ಭವಿಷ್ಯ ವನ್ನು ಈಗಲೇ ಹೇಳಿಬಿಡುತ್ತೇನೆ. ಚಂಡಾಲಿನಿ! ನೀನು ನಮ್ಮ ಕೈಯಿಂದ ಪುಸಲಾಯಿಸಿ ಬರೆಯಿಸಿದ ಆ ಪತ್ರವನ್ನು ನಂಬಿಕೊಂಡು ಪ್ರತಾಪರುದ್ರರೂ ನಿನ್ನ ಈ ಗೂಡಿನೊಳಗೆ ಸಿಕ್ಕಿ ಬೀಳಲು ಓಡಿ ಬರು ತ್ತಿರಬಹುದು. ಮಹಾ ಮಾಯಾವಿನಿಯಾದ ನೀನು ವೀರರುದ್ರ ಪ್ರಭುಗಳನ್ನೂ, ರುಚೀಕುಮಾರಿಯನ್ನೂ ಏನೋ ಮಂಕುಮಾಡಿ ಮೋಸಗೊಳಿಸಿರುತ್ತೀ. ಅಮ್ಮ, ಆಗದು! ಇಂತಹ ಘಾತಕವಾದ ಮೋಸವು ಕೂಡದು. ಮಂತ್ರ ತಂತ್ರಗಳೇ ಮೊದಲಾದ ಮತಿಚಾತುರ್ಯ ಗಳಲ್ಲಿ ನೀನು 'ನಭೂತೋ ನಭವಿಷ್ಯತಿ'ಯಾಗಿರುವಿ. ಅಬಲ ಹೆಂಗಸಾದ ನಿನ್ನ ಇದಿರಿಗೆ ನಮ್ಮಂತಹ ಮೀಸೆ ಮೋರೆಯ ಮಂತ್ರಿ ಶಿಖಾಮಣಿಗಳನ್ನು ಸುಡಬೇಕು. ಮಹಾತಾಯೆ! ಈಗ ನಾವೆಲ್ಲಾ ನಿನ್ನ ಕೈಯೊಳಗೆ ಸಿಕ್ಕಿಬಿದ್ದಿರುವೆವೆಂಬುದು ನಿಜ. ಆದರೆ ನಾನು ಪೂರ್ವೋತ್ತರ ಗಜರಾಜ್ಯಗಳ ಏಕನಿಷ್ಠ ಮಂತ್ರಿ. ಆದ್ದರಿಂದ ನೀನು ನನ್ನನ್ನು ಬೇಕು ಬೇಕಾದ ಹಾಗೆ ದಂಡಿಸು. ನನ್ನ ಸ್ವಾಮಿಗಳಾದ ವೀರರುದ್ರ, ಪ್ರತಾಪರುದ್ರ ಗಜಪತಿಗಳನ್ನೂ ಅವರ ಕುಟುಂಬಗಳನ್ನೂ ಮಾತ್ರ ಶತ್ರುವಿನ ಕೈಗೊಪ್ಪಿಸಿ ನರಳಿಸಬೇಡ. ಇದೇ ನಿನ್ನಲ್ಲಿ ನನ್ನ ಪ್ರಾರ್ಥನೆ!"

ಹೀಗೆ ಸಂತಾಪದಲ್ಲಿ ತೊಡಗಿದ ಮಾತು ದೈನ್ಯರಸದಲ್ಲಿ ಕೊನೆ ಗಂಡಿತು. ಚಿನ್ನಾದೇವಿ ದೃಢಗಾಂಭೀರ್ಯದಿಂದ ಕೇಳುತ್ತಾ ತಲೆದೂಗಿ ಹೇಳನೆಯ ನಗುವೊಂದನ್ನು ಸೂಸಿ, "ಆಹಾ! ರಾಮಯಾಮಾತ್ಯರೆ, ನಿಮ್ಮ ಸ್ವಾಮಿನಿಷ್ಠೆಯ ಪರಾಕಾಷ್ಠೆಯನ್ನು ಕುರಿತು ನನ್ನ ಮುಂದೆ ಜಂಬ ಹೊಡೆದುಕೊಳ್ಳಬೇಡಿ. ನಾನು ಯಾರೆಂಬ ಸರಿಯಾದ ಜ್ಞಾನವೇ ನಿಮಗಿನ್ನೂ ಆಗಿಲ್ಲ. ಅದು ತಿಳಿದಿದ್ದರೆ ನೀವೀಗ ಬೇರೆ ವಿಧವಾದ ವೇದನೆಯನ್ನು ಅನುಭವಿಸುತ್ತಿದ್ದಿರಿ!" ಎಂದಳು.

ರಾಮು: "ಹಾಗೆಂದರೆ?"

ಚಿನ್ನಾ: "ಕೃಷ್ಣದೇವರಾಯರ ಅದೊಂದು ಉಂಗುರವು ನನ್ನ

ಬೆರಳಿನಲ್ಲಿದ್ದ ಕಾರಣದಿಂದ ನನಗೂ ಅವರಿಗೂ ಏನೋ ಸಂಬಂಧವಿರಬೇಕೆಂದು ನೀವು ಊಹಿಸಿದ್ದೇನೂ ಸುಳ್ಳಲ್ಲ. ಅದು ಪವಿತ್ರವಾದ ವಿವಾಹ ಸಂಬಂಧ. ನಾನು ಅವರ ಧರ್ಮಪತ್ನಿ !"

ರಾಮು : " ಧ–ರ್ಮ–ಪ–ತ್ನಿ !"

ಚಿನ್ನಾ : "ಹೌದು. ಇವಳು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಸಾಕ್ಷಾತ್ ಕನ್ನಡ ಸಾರ್ವಭೌಮರ ಪುತ್ರಿ. ಈಗ ತಿಳಿಯಿತೇ ನೀವು ಯಾವ ಕನ್ಯೆಯನ್ನೊಯ್ದು ಯವನರಿಗೊಪ್ಪಿಸಿ ಗಜರಾಜರ ಹಿತವನ್ನು ಸಾಧಿಸಲಿದ್ದಿರೆಂದು ?"

ರಾಮು : "ಓಹೊ ! ಕೃಷ್ಣದೇವರಾಯನಿಗೆ ಒಬ್ಬಳು ಧರ್ಮಪತ್ನಿಯಿರುವುದೂ, ಅವಳು ಚೋರನಾಯಕಿಯಾಗಿರುವುದೂ ಆಹಾ !"

ಚಿನ್ನಾ : "ಇದಕ್ಕೆಲ್ಲಾ ಉತ್ತರವಾದಿಗಳು ಬ್ರಾಹ್ಮಣೋತ್ತಮರೊಬ್ಬರಿದ್ದಾರೆ. ನಾನು ನನ್ನ ಪತಿಯೊಡನೆ ವೈರಸಾಧನೆ ಮಾಡಲಿಕ್ಕೂ ನನ್ನ ಇಡಿಯ ಅಜ್ಞಾತ ಜೀವನಕ್ಕೂ ಆ ಮಹಾನುಭಾವರೇ ಕಾರಣರು !"

ರಾಮು : "ಆಹಾ ! ಮತ್ತೇನೋ ಇಂದ್ರಜಾಲವನ್ನು ಹರಡಿ ನನ್ನನ್ನು ಸಿಕ್ಕಿಸಲು ನೋಡುವಿಯಾ? ಅಯ್ಯೋ ! ನನ್ನ ಪ್ರಭು !–ವೀರರುದ್ರರು, ಉದಯಗಿರಿಯಿಂದ ತಪ್ಪಿಸಿಕೊಂಡ ಅವರು, ನಿನ್ನ ಬಲೆಯಲ್ಲಿ ಹೇಗೆ ಬಿದ್ದರೊ ?"

ಚಿನ್ನಾ : "ಅವರು ಉದಯಗಿರಿಯಿಂದ ತಪ್ಪಿಸಿಕೊಳ್ಳಲೂ ಇಲ್ಲ. ನನ್ನ ಬಲೆಯಲ್ಲಿ ಸಿಕ್ಕಿಬೀಳಲೂ ಇಲ್ಲ. ನಾನೇ ಅವರನ್ನು ಮಾದರಸನ ಮೂಲಕವಾಗಿ ಇಲ್ಲಿಗೆ ಹಿಡಿದು ತರಿಸಿದೆನು ಗೊತ್ತೆ ?"

ರಾಮು : ಹಾಗನ್ನು. ರಾಣಿಯನ್ನೂ, ಕುಮಾರಿಯನ್ನೂ, ಅಪಾಯದಲ್ಲಿ ಸಿಕ್ಕಿಸಿ ಅವರು ಮಾತ್ರ ಹೇಗೆ ತಪ್ಪಿಸಿಕೊಂಡರೋ ಎಂಬ ಸಂದೇಹವಿತ್ತು ನನಗೆ. ಉದಯಗಿರಿಯನ್ನು ಕೃಷ್ಣದೇವನ ಕೈಗೆ ಸಿಕ್ಕಿಸಿದವಳೂ ನೀನೇ ಎಂಬುದು ನಿಜ. ಆಹಾ ! ನಿನ್ನನ್ನು ನಂಬಿ, ನಾನು ಜೋಯಿಸನ ವೇಷದಲ್ಲಿದ್ದು ನಿನಗೆ ಆ ದುರ್ಗದ ರಹಸ್ಯಗಳನ್ನು ತಿಳಿಸಿದೆನಲ್ಲ. ಛೀಃ ! ರಾಮಯಾಮಾತ್ಯ ! ಧಿಕ್ಕಾರ ನಿನಗೆ !"

ಜಿನ್ನಾದೇವಿ ನಗುತ್ತ "ಹೌದು ಅಮಾತ್ಯವರ್ಯರೆ, ಒಬ್ಬ ಬ್ರಾಹ್ಮಣೋತ್ತಮರು ಅಂಧಕಾರದಲ್ಲಿ ಅಡಗಿಸಿಟ್ಟ ಸತ್ಯವನ್ನು ಹೊರ ತೆಗೆಯಲಿಕ್ಕಾಗಿಯೇ ನಾನು ಹಾಗೆಲ್ಲಾ ಮಾಡಬೇಕಾಯಿತು. ಇನ್ನು ಬಹುಹೊತ್ತು ನಿಮ್ಮನ್ನು ಸಂದೇಹದಲ್ಲಿ ಕೆಡಹುವುದಿಲ್ಲ. ಮೊತ್ತ ಮೊದಲು ನಾನು ಮಾಡಿದ ಕೆಲಸವು ವೀರರುದ್ರರನ್ನು ಹಿಡಿದು ತರಿಸಿದ್ದು. ನನ್ನ ವೀರಬಂಧು ಮಾದರಸನು ತನ್ನ ಬಂಧು ಸಮೂಹದೊಂದಿಗೆ, ಉದಯಗಿರಿಯ ನಿಮ್ಮ ರಹಸ್ಯ ಸುರಂಗವನ್ನು ಕಂಡು ಹಿಡಿದು, ಆ ಕಟ್ಟ ಕಡೆಯ ದಿನ, ಕಟಕದಿಂದ ಬಂದಿದ್ದ ನೂರು ಮಂದಿ ಸೈನಿಕರನ್ನು ದುರ್ಗಕ್ಕೆ ಕೊಂಡೊಯ್ಯಲಿಕ್ಕಾಗಿ ನೀವು ಆ ರಹಸ್ಯ ಮಾರ್ಗದಿಂದ ಹೊರಗೆ ಹೋದಿರಲ್ಲವೆ? ಅದನ್ನರಿತ ಮಾದರಸನು ನೀವು ಕಳುಹಿಸಿದಂತೆ ನಟಿಸಿ ನೂರು ಮಂದಿ ತನ್ನವರೊಂದಿಗೆ, ಗಜಪತಿ ಸೈನಿಕರಂತೆ ದುರ್ಗವನ್ನು ಸೇರಿದನು. ನೀವು ಕೃಷ್ಣದೇವರಾಯರನ್ನು ಸೆರೆ ಹಿಡಿದುಕೊಂಡು ಬರುವಿರೆಂದು ವೀರರುದ್ರರೊಡನೆ ಸುಳ್ಳು ಹೇಳಿ, ಅವರನ್ನು ಉಪಾಯದಿಂದ ಕೋಟೆಯ ಗೋಡೆಯ ಬಳಿಗೆ ಕರೆದು ತಂದು ಒಮ್ಮೆಲೆ ತನ್ನ ಕೆಲವರೊಂದಿಗೆ ಅವರ ಮೇಲೆ ಬಿದ್ದು ಕೈಕಾಲು ಕಟ್ಟಿ ಹಗ್ಗದ ಮೂಲಕ ಕೆಳಗಿಳಿಸಿ ಇಲ್ಲಿಗೆ ಕಳುಹಿಸಿಬಿಟ್ಟನು. ಮಾದರಸನು ದುರ್ಗದಲ್ಲಿ ಗಲಿಬಿಲಿ ಹುಟ್ಟಿಸಿ, ದುರ್ಗದ್ವಾರಗಳನ್ನು ಕದಲಿಸಿ ಬೆಳಂಝಾವವಾಗುವಷ್ಟರಲ್ಲಿ ದುರ್ಗವು ರಾಯನ ಕೈಗೆ ಸಿಕ್ಕುವಂತೆ ಮಾಡಿದನು. ಹೀಗೆ ದುರ್ಗವನ್ನು ಸಾಧಿಸಿಕೊಟ್ಟರೆ ತಾನು ಕೇಳುವ ಪ್ರತಿಫಲವನ್ನು ಕೊಡಬೇಕೆಂದು ಅವನು ಮೊದಲೇ ತಿಮ್ಮರಸರಿಂದ ಮಾತು ಪಡೆದಿದ್ದನು. ಅವನು ನನ್ನ ಉಪದೇಶದಂತೆ ಉದಯಗಿರಿಯ ರಾಣಿಯನ್ನೂ ಕುಮಾರಿಯನ್ನೂ ತನ್ನ ವಶಪಡಿಸಬೇಕೆಂದು ಕೇಳುತ್ತಲೇ ಕೃಷ್ಣದೇವರಾಯರು ಅವನನ್ನು ಅಲ್ಲಿ ಸೆರೆ ಹಾಕಿದರು. ಇತ್ತ ವೀರರುದ್ರರು ನನ್ನ ಗುಪ್ತಸ್ಥಾನಕ್ಕೆ ತಲಪುವಾಗ ಅವರಿಗೆ ಬೋಧವಿರಲಿಲ್ಲ. ಆಮೇಲೆ ಅವರು ನನ್ನೊಡನೆ ಸರಿಯಾಗಿ ಮುಖಕೊಟ್ಟು ಮಾತೂ ಆಡಲಿಲ್ಲ. ಅನಂತರ ನಾನು ಯಾರೆಂಬ ಗುರುತನ್ನು ತಿಳಿಸಿ ಖಚಿತಪಡಿಸಿದ ಮೇಲೆ ನನ್ನನ್ನು ನಂಬಿ ಮಮತೆಯನ್ನು ತೋರಿದರು.

ಅಂತಃಕರಣ ಪಟ್ಟರು. ನಾನು ಅವರ ಪಾದವನ್ನು ಹಿಡಿದು ಕ್ಷಮೆಯನ್ನು ಕೇಳುತ್ತ–'ನಿಮ್ಮ ನಮ್ಮ ಸಂಬಂಧವನ್ನು ನಾವು ಅರಿತುಕೊಂಡರೂ ಲೋಕವು ಅರಿತುಕೊಳ್ಳುವವರೆಗೆ ಸಂಬಂಧದ ಹೆಸರಿನಿಂದ ಸಂಬೋಧಿಸಿಕೊಳ್ಳಕೂಡದು' ಎಂದು ನಮ್ಮೊಳಗೆ ಕಟ್ಟು ಹಾಕಿಕೊಂಡೆವು. ಅಮಾತ್ಯರೆ, ಈಗ ಆ ದಿವ್ಯ ಮುಹೂರ್ತವು ಸನ್ನಿಹಿತವಾಯಿತು. ಇದುವರೆಗೆ ಯಾರು ನನ್ನನ್ನು ದೇವಿಯೆಂದು ಸಂಬೋಧಿಸಿದರೊ, ನಾನು ಯಾರನ್ನು ಆರ್ಯರೆ ಎಂದು ಸಂಬೋಧಿಸಿದೆನೋ ಅವರು ಪರಸ್ಪರ ಸತ್ಯವಾದ ಸಂಬಂಧ ಸೂಚಕವನ್ನು ಹೇಳಿಕೊಳ್ಳುವ ಸನ್ಮುಹೂರ್ತವು, ಆ ಬ್ರಾಹ್ಮಣೋತ್ತಮರ ಸನ್ನಿಧಿಯಲ್ಲಿಯೇ ಪ್ರಾಪ್ತವಾಯಿತು."

ಹೀಗೆಂದು ಚಿನ್ನಾದೇವಿ ಮುಖವನ್ನು ಬಾಗಿಲಿನ ಕಡೆಗೆ ತಿರುವಿ, "ಆರ್ಯರೆ, ಈಗ ಒಳಗೆ ಬನ್ನಿರಿ" ಎಂದಳು.

ಕೂಡಲೇ ವೀರರುದ್ರ ಗಜಪತಿ ಒಳಗೆ ಬಂದನು.

ರಾಮಯಾಮಾತ್ಯನ ಇದಿರಿನಲ್ಲಿ ವೀರರುದ್ರನು ಕುಳಿತುಕೊಂಡನು. ರಾಮಯಾಮಾತ್ಯನು ತನ್ನನ್ನು ಸಾಂಬಾಳಿಸಿಕೊಂಡು "ಪ್ರಭು! ಈ ಹೆಂಗಸು ಬಹಳ ಮಾಯಾವಿನಿಯಾಗಿದ್ದಾಳೆ. ಇವಳ ವಿಷಯದಲ್ಲಿ ತಾವು ಬಹಳ ಜಾಗ........" ಎನ್ನುವಾಗ ವೀರರುದ್ರನು ತಡೆದು "ಅಲ್ಲಲ್ಲ. ಈಕೆ ಮಾಯಾವಿನಿಯಲ್ಲ. ಇವಳಲ್ಲಿ ಸತ್ಯವು ತುಂಬಿದೆ. ಇವಳನ್ನು ಯಾರೆಂದು ತಿಳಿದಿರುತ್ತೀರಿ! ಸಾಕ್ಷಾತ್ ನನ್ನ ಮಗಳು!...." ಎಂದನು.

ರಾಮಯಾಮಾತ್ಯನು ಬೆಚ್ಚಿಬಿದ್ದನು.

"ನನ್ನ ಹಿರಿಯ ರಾಣಿ ಸುಭದ್ರಾದೇವಿಯ ಹೊಟ್ಟೆಯಲ್ಲಿ ಹುಟ್ಟಿದ ನನ್ನ ಹಿರೇ ಮಗಳು. ನೋಡಿರಿದನ್ನು" ಎಂದು ಚಿನ್ನಾದೇವಿಯ ಕೊರಳಿನ ತುಲಸೀಮಾಲೆಯಲ್ಲಿದ್ದ ಪದಕವನ್ನು ತೆಗೆದು ಅದರಲ್ಲಿದ್ದ ಹೆಸರನ್ನು ತೋರಿಸುತ್ತ–"ಇದು ನಾನು ಸುಭದ್ರಾದೇವಿಯ ಕೊರಳಿಗೆ ಕಟ್ಟಿದ್ದ ಕರಿಮಣಿ ತಾಳಿಯಲ್ಲಿದ್ದ ಪದಕ. ಇದನ್ನು ಅವಳು ಸಾಯುವಾಗ ಮಗಳ ಕೈಯಲ್ಲಿ ಕೊಟ್ಟಿದ್ದಾಳೆ."

ಭಯವಿಸ್ಮಯಗಳಿಂದ ಸ್ತಬ್ಧನಾದ ರಾಮಯ್ಯಾಮಾತ್ಯನು. "ಏನಾಶ್ಚರ್ಯ! ಇದೆಲ್ಲಾ ತಮಗೆ ಹೇಗೆ ಗೊತ್ತಾಯಿತು? ಇದರಲ್ಲೇನೂ ಮೋಸವಿಲ್ಲವೆಂದು ಹೇಳುವುದು ಹೇಗೆ?" ಎಂದನು.

ವೀರ: "ಈ ಪ್ರಶ್ನೆಗೆ ಉತ್ತರವನ್ನು ತಯಾರಿಸಲಿಕ್ಕಾಗಿಯೇ ಇಷ್ಟು ಕಾಲ ವಿಳಂಬ ಮಾಡಬೇಕಾಯಿತು. ರಾಮಯ್ಯಾಮಾತ್ಯರೆ, ಇದರಲ್ಲಿ ನಿಮಗೆ ತೋರುವ ಸಂದೇಹವೇನೊ?"

ರಾಮ: "ನನಗೆ ತೋರುತ್ತದೆ ಈ ಚೋರನಾಯಕಿ ಜಾತಿ ಭ್ರಷ್ಟಳಾದ ಸುಭದ್ರಾದೇವಿಯ ಪದಕವನ್ನು ಹೇಗೋ ಸಂಗ್ರಹಿಸಿ ಕೊಂಡು...."

ಚೆನ್ನಾದೇವಿ ಕೋಪದಿಂದ ಕಿಡಿಕಿಡಿಯಾಗಿ, "ಜಾಗ್ರತೆ! ನನ್ನ ಜನನಿಯನ್ನು ತಿಳಿತಿಳಿದೂ, ನನ್ನ ತಂದೆಯ ಇದಿರಿನಲ್ಲಿಯೇ ನಿಂದಿಸು ವಿರಾ? ಇನ್ನೊಮ್ಮೆ ಹೀಗೆಂದರೆ ನೀವು ಬ್ರಾಹ್ಮಣರೆಂಬುದನ್ನೂ ನಾನು ಮರೆಯಬೇಕಾದೀತು" ಎಂದು ಗರ್ಜಿಸಿ ತಿರುಮಲೆಯನ್ನು ಕುರಿತು, "ಮಗು ತಿರುಮಲಾ! ಈ ಮೇಧಾವಿಗಳು ಸುಲಭದಲ್ಲಿ ಒಪ್ಪಿಕೊಳ್ಳುವ ಲಕ್ಷಣವು ಕಾಣುವುದಿಲ್ಲ. ನೀನು ಹೋಗಿ ಆ ವಸ್ತುಗಳನ್ನು ತೆಗೆದು ಕೊಂಡು ಬಾ" ಎಂದು ಕಳುಹಿಸಿದಳು.

ತಿರುಮಲಾ ಹೋಗುವುದನ್ನು ನೋಡಿ, 'ಅದೇನು ಬರುವುದೋ' ಎಂದು ದಿಗಿಲುಬಿದ್ದನು ರಾಮಯ್ಯ.

ವೀರ: "ಅಮಾತ್ಯರೆ, ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ ನನ್ನ ರಾಣಿ ಸುಭದ್ರಾದೇವಿಯನ್ನು ಗರ್ಭಿಣಿಯ ದೆಸೆಯಲ್ಲಿ ಕೆಟ್ಟ ಕಾರಣದಿಂದ ನಾನು ತ್ಯಜಿಸಿದೆನಲ್ಲವೆ? ಆ ಸುಭದ್ರಾದೇವಿ ಮಹಾ ಸಾಧ್ವೀಶಿರೋಮಣಿಯೆಂದು ಈಗ ಅವಳ ಈ ಮಗಳು ಖಚಿತ ಪಡಿಸಿರುತ್ತಾಳೆ. ಆ ಪರಮಸಾಧ್ವಿಯನ್ನು ದುರಂತ ದುಃಖಕ್ಕೀಡು ಮಾಡಿ ನಾವು ಮಹಾ ಪಾಪಿಗಳಾಗಿದ್ದೇವೆ...."

ವೀರರುದ್ರನ ದುಃಖತಾಡಿತವಾದ ಆ ವಚನವನ್ನಾಲಿಸಿ ರಾಮಯ್ಯನು ನಾಲಗೆಯಿಂದ ತುಟಿಯನ್ನು ಸವರಿಕೊಂಡು "ಅಂ....ದರೆ....?" ಎಂದು ತೊದಲಿದನು.

ವೀರ: "ನಾನು ಅವಳ ಮೇಲೆ ಸಂದೇಹಗೊಂಡು ಅವಳನ್ನು ತ್ಯಜಿಸುವಂತೆ ಮಾಡಿದವರು ನೀವು. ಇದನ್ನು ಒಂದೇ ಮಾತಿಗೆ ಒಪ್ಪಿಕೊಳ್ಳುವಿರಾ?"

ರಾಮು: "ನಾನೆ? ನಾನೇನು ಮಾಡಿದೆ? ತಮ್ಮ ರಾಣಿಯ ಕೋಣೆಯಲ್ಲಿ ಅನ್ಯನ ಪತ್ರವನ್ನು ಕಂಡೆತ್ತಿಕೊಂಡವರು ತಾವು. ಸುಭದ್ರಾದೇವಿ ಪರಪುರುಷನಿಗೆ ಬರೆದ ಪ್ರತ್ಯುತ್ತರವನ್ನು ದಾಸಿಯ ಮೂಲಕವಾಗಿ ಕಂಡು ಹಿಡಿದವರು ತಾವು. ಇದನ್ನೆಲ್ಲಾ ನೀವು ನನ್ನೊಡನೆ ಹೇಳಿಕೊಂಡಾಗ, ನಾನು ಇಷ್ಟು ಬಲವಾದ ಸಾಕ್ಷಿಗಳು ನಿಮ್ಮ ಕೈಗೆ ಸಿಕ್ಕಿರುವಾಗ, ನೀವು ಅವಳನ್ನು ತ್ಯಾಗ ಮಾಡುವ ವಿಷಯದಲ್ಲಿ ಅನುಮೋದನೆ ಕೊಟ್ಟಿದ್ದೇನೆ ನಿಜ...."

ವೀರ: "ಅದೆಲ್ಲಾ ನಿಮ್ಮ ದುಸ್ತಂತ್ರದಿಂದಲೇ ಜರುಗಿದ್ದೆಂದು ಈಗ ಗೊತ್ತಾಗಿದೆ. ನನ್ನ ಕೈಗೆ ಸಿಕ್ಕಿದ ಆ ಎರಡು ಪತ್ರಗಳೂ ಕೃತ್ರಿಮಗಳು. ಮತ್ತು ಸುಭದ್ರಾದೇವಿ ಒಂದು ರಾಮಾಯಣವನ್ನು ಅಯೋಧ್ಯಾಕಾಂಡದವರೆಗೆ ಬರೆದು ಮುಗಿಸಿದ್ದಳು. ಆ ಎರಡನೆಯ ಪ್ರತ್ಯುತ್ತರ ಪತ್ರವನ್ನು ಪರೀಕ್ಷೆ ಮಾಡಲು ಆಧಾರ ಸಿಕ್ಕದಂತೆ, ಆ ರಾಮಾಯಣ ಗ್ರಂಥಾರ್ಧವನ್ನು ನೀವೇ ಅಡಗಿಸಿರುತ್ತೀರಿ. ಹೌದೆ? ಸ್ವಲ್ಪ ಚೆನ್ನಾಗಿ ನೆನಪು ಮಾಡಿಕೊಂಡು ಹೇಳಿ ನೋಡೋಣ."

ರಾಮಯಾಮಾತ್ಯನು ಎದೆಯೊಳಗೆ ಕಂಪನವನ್ನಿಟ್ಟುಕೊಂಡು, "ತಮ್ಮ ಮಾತುಗಳೆಲ್ಲಾ ತುಂಬಾ ವಿಲಕ್ಷಣವಾಗಿವೆ. ತಾವು ಸಾವಿರ ಹೇಳಿದರೂ ಈ ಚೋರನಾಯಕಿ ತಮ್ಮ ಮಗಳೆಂಬುದನ್ನು ನಾನು ನಂಬಲಾರೆ" ಎಂದು ನುಡಿದನು.

ವೀರ: "ನಿಮ್ಮೆದಿರಲ್ಲಿ ನಂಬಿಸಿಕೊಳ್ಳಬೇಕೆಂತಲೇ ಇಂದಿನವರೆಗೂ ಇವಳು ನನ್ನನ್ನು ಅಪ್ಪಾ ಎಂದು ಕರೆಯಲಿಲ್ಲ. ನಾನೂ ಮಗಳೇ ಎನ್ನಲಿಲ್ಲ. ಈಗ ನಿಮ್ಮ ಒಪ್ಪಿಗೆಯಿಂದಲೇ ಹಾಗೆ ಸಂಬೋಧಿಸಿಕೊಳ್ಳಬೇಕೆಂದಿದ್ದೇವೆ."

ರಾಮು: "ನಾನೆಂದೂ ನಂಬಲಾರೆ ಪ್ರಭು. ಈ ಧೂರ್ತ ಸ್ತ್ರೀ ಸುಭದ್ರಾದೇವಿಯ ಕತೆಯನ್ನು ಕೇಳಿ, ಅದಕ್ಕೆ ಸರಿಯಾಗಿ ಜೋಡಿಸಿ

ಸತ್ಯದಂತೆ ಚಿತ್ರಿಸಿ ತಮ್ಮ ಮಿದುಳನ್ನು ಕೆಡಿಸಿ, ನನಗೂ ತಮಗೂ ವಿರೋಧವನ್ನು...."

ಚಿನ್ನಾದೇವಿ ಅವನನ್ನು ಅಲ್ಲಿಗೇ ತಡೆದು, "ಧೂರ್ತಶಿಖಾಮಣಿಗಳೆ! ನಾನು ಇವರ ಮಗಳಲ್ಲವಿದ್ದರೆ ಹೋಗಲಿ. ನನ್ನ ತಾಯಿ ಯಾರೆಂಬುದು ನನ್ನ ಪತಿರಾಯರಿಗೆ ಗೊತ್ತು. ಅದೂ ಹಾಗಿರಲಿ ನಿಮ್ಮ ಹೃದಯದ ಮೇಲೆ ಹಸ್ತವನ್ನಿಟ್ಟು ಪರಮಾತ್ಮನನ್ನು ಸ್ಮರಿಸುತ್ತ ಹೇಳಿರಿ ನೋಡೋಣ. ನಿಮ್ಮ ಇದುವರೆಗಿನ ಜೀವನ ಕಾಲದಲ್ಲಿ ನಿಮ್ಮ ಆತ್ಮಕ್ಕೆ ವಿರೋಧವಾದೊಂದು ದೊಡ್ಡ ಅಪರಾಧವನ್ನು ಮಾಡಿ ಮುಚ್ಚಿಟ್ಟುಕೊಂಡುದುಂಟೆ?...." ಎಂದು ಪ್ರಶ್ನಿಸಿದಳು.

"ಹಾಗೆಂದರೆ?" ರಾಮಯ್ಯನ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು.

ಚಿನ್ನಾದೇವಿ ತೀಕ್ಷ್ಣದೃಷ್ಟಿಯಿಂದ ಅವನ ಮುಖವನ್ನು ನೋಡುತ್ತಿದ್ದಳು. ಒಡನೆಯೇ ರಾಮಯ್ಯನು ನಾಲಗೆಯನ್ನು ಬಿಗಿಪಡಿಸಿಕೊಂಡು, "ಓಹೊ! ನಿನ್ನ ರಮಣ ರಾಯರ ಪಕ್ಷಕ್ಕೆ ನಾನು ಮಾಡಿದುದೆಲ್ಲಾ ಮಹದಪರಾಧವೇ ನಿಜ" ಎಂದನು.

ಚಿನ್ನಾ: "ಅದು ಹೇಗೆ?. ಅದು ಅವರವರ ಕರ್ತವ್ಯ ಧರ್ಮ. ನಾನು ಕೇಳುವುದು ನಿನ್ನ ಸ್ವಾಮಿಗೇ ನೀವು ಮಾಡಿದ ದ್ರೋಹ, ಸ್ವಾಮಿದ್ರೋಹ?"

ರಾಮು: "ಸ್ವಾಮಿದ್ರೋಹ! ನಾನು?"

ಚಿನ್ನಾ: "ಹೌದು. ನೀವೀಗ ದೊಡ್ಡ ಸ್ವಾಮಿನಿಷ್ಠರಾಗಿದ್ದೀರಿ. ಇದರ ಬುಡದಲ್ಲಿ ದೊಡ್ಡದೊಂದು ಸ್ವಾಮಿದ್ರೋಹವು ಮರೆಯಾಗಿದೆ. ಅಂದು ನೀವು ಪಾತಪಲ್ಲಿಯಲ್ಲಿ ತೋಪಲ್‌ಖಾನನೊಡನೆ ಆ ರಹಸ್ಯವನ್ನು ವಿವರಿಸಿದ್ದಿರಲ್ಲ?"

ರಾಮು: "ಏನೇನು?"

ಚಿನ್ನಾ: "ಅದನ್ನೆಲ್ಲಾ ಈಗ ನಿಮ್ಮ ಈ ಪ್ರಭುಗಳ ಮುಂದೆ ವಿವರಿಸಿರಿ. ಪ್ರಭುವಿಗೆ ಮಾಡಿದ ಮಹಾದ್ರೋಹವನ್ನು ಪ್ರಭುವಿನ ಮುಂದೆ ಒಪ್ಪಿಸದೆ ನೀವು ಆತ್ಮವಂಚನೆಯಿಂದ ಕಾಲಹರಣ ಮಾಡ

ತ್ತಿದ್ದೀರಿ. ನಿಮಗೆ ನಿಜವಾಗಿ ಪಶ್ಚಾತ್ತಾಪವಿರುವುದಾದರೆ ಆ ರಹಸ್ಯವನ್ನು ನೀವೇ ಬಾಯಿಯಿಂದ ಹೇಳಬೇಕು. ಇಲ್ಲದಿದ್ದರೆ ನಾವೇ ನಿಮ್ಮ ಬಾಯಿಯನ್ನು ಒಡೆಯುಬಲ್ಲೆವು."

ರಾಮು : ನನ್ನ ಮಿತ್ರ ತೋಪಲ್‌ಖಾನನೊಡನೆ ನಾನು ಬೇಕಾದ ಮಾತುಗಳನ್ನಾಡಿರಬಹುದು. ಅವಕ್ಕೆ ನೀನು ನನ್ನ ಬಾಯಿಯನ್ನು ಒಡೆಯುವುದೆಂದರೇನು ಅರ್ಥವೋ! ಗಜರಾಜ ಪ್ರಭುಗಳೆ! ನಾನು ಸಾರಿ ಹೇಳುವೆನು. ವಂಚಕಿಯನ್ನು ಎಷ್ಟು ಮಾತ್ರಕ್ಕೂ ನಂಬಕೂಡದು. ನನ್ನ ಸ್ವಾಮಿನಿಷ್ಠೆಯ ತೂಕವನ್ನು ತಾವು ಬಲ್ಲರಿ...."

ವೀರರುದ್ರನು ಏನೋ ಹೇಳಲಿಕ್ಕಿರಲು, ಚಿನ್ನಾದೇವಿ "ಆಹಾ! ಇನ್ನೂ ನಾನಾರೆಂಬ ಅರಿವು ನಿಮಗಾಗಿಲ್ಲವೆ? ನನ್ನ ತಾಯಿಯ ಸಂತಪ್ತ ಹೃದಯಕ್ಕೆ–ಆತ್ಮಕ್ಕೆ ಶಾಂತಿ ಮಾಡಿಸುವವಳು ನಾನು. ಧೂರ್ತರೆ, ನೀವು ಬರಿಯ ಬಾಯಿಮಾತುಗಳನ್ನೆಲ್ಲಾ ಖಂಡಿಸಿ ಆತ್ಮವಿರೋಧವಾಗಿಯೇ ಸಾಧಿಸುವಿರೆಂದು ಭಾವಿಸಿಯೇ ಇದುವರೆಗೆ ಸುಮ್ಮನೆ ಬಿಟ್ಟದ್ದಾಗಿದೆ. ಇಲ್ಲದಿದ್ದರೆ ಮೊದಲ ದರ್ಶನದಲ್ಲಿಯೇ ನಿಮ್ಮನ್ನು ಹಿಡಿದು ಹಾಕುತ್ತಿದ್ದೆನು. ಇರಲಿ. ತಿರುಮಲಾ, ಅವನ್ನು ತಂದಿರುವಿಯಾ?" ಎಂದು ತಿರುಗಿ ನೋಡಿದಳು.

"ಇಗೋ ಅಮ್ಮ" ಎಂದು ಬಾಗಿಲ ಬಳಿಯಲ್ಲಿ ಸಿದ್ಧಳಾಗಿಯೇ ನಿಂತಿದ್ದ ತಿರುಮಲಾ ಸರಕ್ಕನೆ ಒಳಗೆ ಬಂದು ಒಂದು ರೇಷ್ಮೆಯ ಬಟ್ಟೆಯ ಕಟ್ಟನ್ನು ತಾಯಿಯ ಕೈಗೆ ಕೊಟ್ಟಳು. ಅದರೊಳಗಿದ್ದ ಪತ್ರಗಳನ್ನೂ ಎರಡು ಗ್ರಂಥಗಳನ್ನೂ ಕಾಣುತ್ತಲೇ ರಾಮಾಯಾಮಾತ್ಯನ ಸರ್ವಾಂಗವೂ ವಿದ್ಯುತ್‌ಸ್ಪರ್ಶವಾದಂತೆ ಜುಂ ಜುಂ ಎಂದಿತು.

"ವಂಚಕ ಶಿಖಾಮಣಿ ರಾಮಾಯಾಮಾತ್ಯರೆ, ಸುಳ್ಳು ಕೃತ್ರಿಮತನವೂ ಎಷ್ಟು ವರ್ಷಗಳಾದರೂ ಒಂದು ದಿನ ಬಯಲಿಗೆ ಬಿದ್ದೇ ತೀರುವುದೆಂಬ ಸತ್ಯವನ್ನು ಇಂದು ಪ್ರತ್ಯಕ್ಷವಾಗಿ ಕಾಣಿರಿ. ನೀವು ನಲವತ್ತು ವರ್ಷಗಳ ಹಿಂದೆ ರಚನೆಮಾಡಿ ಮುಚ್ಚಿಟ್ಟ ಕೃತ್ರಿಮಗಳು ಇಂದು ಬೆಳಕಿಗೆ ಬೀಳುತ್ತಿವೆ. ಇದೊ, ಅಂದು ನೀವು ನಿಮ್ಮ ಮಿತ್ರನಾದ ತೋಪಲ್‌ಖಾನನ ಮೂಲಕವಾಗಿ ಸೃಷ್ಟಿಮಾಡಿದ ಮೋಸವನ್ನು ಈಗ

ನೋಡಿರಿ. ಈ ಪತ್ರಗಳನ್ನು ಸಂಪಾದಿಸಲಿಕ್ಕಾಗಿಯೇ ನಾನು ಹು
ನವಳ ವೇಷದಲ್ಲಿ ಮೊದಲು ನಿಮ್ಮನ್ನು ಕಂಡೆನು. ಯಾರಾದರೂ ನನ
ತಾಯಿಯ ಪರವಾಗಿ ಮಾತಾಡಲಿಕ್ಕೆ ಬಂದರೆ ಅವರ ಮುಖಕ್ಕೆ ಹ
ಯಲು ಬೇಕಾದೀತೆಂದುಕೊಂಡು ನನ್ನ ತಂದೆ ಈ ಪತ್ರಗಳನ್ನು ಉದ
ಗಿರಿಯ ಬೊಕ್ಕಸದ ಕೋಣೆಯೊಳಗೆ ಭದ್ರಪಡಿಸಿಟ್ಟಿರುವುದಾಗಿ ನನ
ಹೇಳಿದರು. ನಿಮ್ಮ ಚಹರೆಗಳನ್ನು ನನಗೆ ತಿಳಿಸಿ ಸತ್ಯಶೋಧನೆಯ
ನನ್ನ ಕಾರ್ಯಗಳಿಗೆ ಸಹಾಯಮಾಡಿದರು. ನಾನು ಲಾಡ್
ಲೂಯಿಸ್ ಎಂಬ ವೇಷದಲ್ಲಿ ಕಾರ್ಯವನ್ನು ಸಾಧಿಸಿಕೊಂಡದ
ನಿಮಗೆ ಗೊತ್ತಿದೆ. ಈಗ ಈ ಪತ್ರಗಳನ್ನು ಓದಿನೋಡಿ ಉತ್ತರಕೊಡಿರಿ.

ಹೀಗೆಂದು ಚಿನ್ನಾದೇವಿ ರಾಮಾಯಾಮಾತ್ಯನ ಕೈಗೆ ಮೊದಲ
ಒಂದು ಪತ್ರವನ್ನು ಕೊಡುತ್ತ—"ಇದು ನನ್ನ ತಾಯಿಯ ಕೋಣೆಯ
ತಂದೆಯ ಕೈಗೆ ಸಿಕ್ಕಿದ ಒಂದನೆಯ ಪತ್ರ. ಅಲ್ಲವೇ ಅಪ್ಪ?" ಎನ್ನ
ವೀರರುದ್ರನು "ಹೌದು" ಎಂದನು.

ಪ್ರಭುವಿನ ಅಪ್ಪಣೆಯಾದುದರಿಂದ ರಾಮಯಾಮಾತ್ಯನ
ಓದಲೇಬೇಕಾಯಿತು. ನಡುಗುವ ಕೈಗಳಿಂದ ಅದನ್ನು ತೆಗೆದುಕೊಂ
ಓದುವವನಂತೆ ಕಾಣಿಸಿದನು. ಅದರಲ್ಲಿ ಹೀಗಿತ್ತು :

"ಪ್ರಾಣಪ್ರಿಯಳಾದ ಸುಭದ್ರಾದೇವಿಗೆ, ನಿನ್ನ ಪ್ರೇಮಪಾತ್ರ
ಹೃತ್ಪೂರ್ವಕವಾದ ಅನೇಕ ಮುತ್ತುಗಳು. ಪ್ರಿಯೆ, ನೀನೀಗ ಪತಿಗೃ
ವನ್ನು ಹೊಕ್ಕಮೇಲೆ ನಿನ್ನ ಈ ನಿರ್ಭಾಗ್ಯ ಸ್ನೇಹಿತನನ್ನು ಮರೆ
ಹೋದಹಾಗಿದೆ. ನೀನು ರಾಣೀ ಪದವಿಗೆ ಏರಿದುದರಿಂದ ಹಾ
ಮರೆಯುವದು ಸಹಜ. ಆದರೆ ನಾನು ನಿನ್ನ ಸುರಸುಂದರವಾದ ರೂ
ರಾಶಿಯನ್ನೂ, ನೀನು ನನ್ನ ಮೇಲಿಟ್ಟಿರುವ ಪ್ರೇಮವನ್ನೂ, ಕೊ
ದಿವ್ಯಾನಂದ ಸುಖಗಳನ್ನೂ ನಾನೆಂದಿಗೂ ಮರೆಯುವಂತಿಲ್ಲ. ಪ್ರಾ
ಶ್ವರಿ! ಇನ್ನು ನಮ್ಮ ಯೋಗವು ಯಾವಾಗಲೊ ಏನೊ. ನಾವಿಬ್ಬರ
ರಹಸ್ಯವಾಗಿ ಸಂಧಿಸಲು ತಕ್ಕ ಅನುಕೂಲಗಳನ್ನು ಬೇಗದಲ್ಲಿಯೆ
ಒದಗಿಸುವೆನೆಂದು ನೀನು ನನಗೆ ಭರವಸೆ ಕೊಟ್ಟಿರುವುದರಿಂದಲೇ ನ
ಜೀವ ನಿಂತಿದೆ. ನೀನು ಹೇಗಾದರೂ ಬೇಗದಲ್ಲಿಯೇ ನನಗೆ ದರ್ಶ

ವೀಯದಿದ್ದರೆ ನನ್ನ ಪ್ರಾಣ ನಿಲ್ಲದು. ಇದಕ್ಕಿಂತ ಹೆಚ್ಚಿಗೆ ಬರೆಯುಲಾರೆ. ನನ್ನ ಹೃದಯವನ್ನು ನೀನು ಚೆನ್ನಾಗಿ ಬಲ್ಲೆ. ಈ ಪತ್ರವನ್ನು ಬಹಳ ತಂತ್ರದಿಂದ ನಿನಗೆ ಕಳುಹಿಸಿದ್ದೇನೆ. ಹಾಗೇ ನೀನೂ ಪ್ರತ್ಯುತ್ತರವನ್ನು ಕಳುಹಿಸುತ್ತೀ ಎಂದು ನಿರೀಕ್ಷಿಸುತ್ತಿದ್ದೇನೆ. ಇತಿ—

ನಿನ್ನನ್ನೇ ಜೀವವಾಗಿ ನಂಬಿರುವ ನಿನ್ನ ಪ್ರೇಮಪಾತ್ರ, ರಘುಪತಿ"

ಪತ್ರವು ರಾಮಯಾಮಾತ್ಯನ ಕೈಯಿಂದ ಜಾರಿ ಕೆಳಕ್ಕೆ ಬಿತ್ತು. ಚೆನ್ನಾದೇವಿ ಇನ್ನೊಂದು ಪತ್ರವನ್ನು ಅವನ ಕೈಯಲ್ಲಿಟ್ಟು ಓದಲು ಹೇಳಿದಳು. ರಾಮಯಾಮಾತ್ಯನು ನಡುಗುವ ದನಿಯನ್ನು ಬಲಪಡಿಸಿಕೊಂಡು "ಈ ಹಳೆಯ ಕುಪ್ಪೆಗಳು ಈಗೇಕೆ" ಎನ್ನುತ್ತಿರಲು, ವೀರಭದ್ರನು, "ಬೇಕು. ನೀವು ಓದಿ ನೋಡಲೇಬೇಕು. ಇದಕ್ಕೆ ತಕ್ಕ ಪ್ರತ್ಯುತ್ತರ ಕೊಡುವ ಜವಾಬ್ದಾರಿಕೆ ಈಗ ನಿಮಗೆ ಬಂದಿರುವುದೆಂದು ಲಕ್ಷ್ಯದಲ್ಲಿಡಿ" ಎಂದುದನ್ನು ಕೇಳಿ ರಾಮಯಾಮಾತ್ಯನು ನಿರ್ವಾಹವಿಲ್ಲದೆ ಅದರ ಮೇಲೆ ಕಣ್ಣೋಟವನ್ನು ಓಡಿಸಲೇ ಬೇಕಾಯಿತು.

"ನನ್ನ ಅಂತರಂಗದ ಪ್ರೇಮಪಾತ್ರನಿಗೆ, ಸುಭದ್ರಾದೇವಿಯ ಗಾಢಾಲಿಂಗನ ಪೂರ್ವಕವಾದ ಪ್ರತ್ಯುತ್ತರವೇನೆಂದರೆ. ಪ್ರಿಯಕರ, ನೀನು ಬರೆದ ಪತ್ರವು ಸಿಕ್ಕಿತು. ಓದಿ ನನ್ನ ಹೃದಯ ಹೇಗಾಯಿತೆಂದು ಹೇಳಲಿ ? ನಾನು ನಿನ್ನನ್ನು ಮರೆತಿರುವೆನೆ ? ಅದು ನನ್ನಿಂದ ಸಾಧ್ಯವೆ? ಆದರೆ ನಾನೇನು ಮಾಡಲಿ ? ಈ ಉದಯಗಿರಿ ಅಂತಃಪುರದಲ್ಲಿ ಸೆರೆ ಬಿದ್ದಿರುವ ನಾನು, ನಿನ್ನನ್ನು ಸಂಧಿಸಲು ಮಾರ್ಗವಿಲ್ಲದೆ ಪರಿತಪಿಸುತ್ತಿದ್ದೇನೆ. ಪ್ರಿಯಾ, ಸ್ವಲ್ಪ ಸೈರಣೆಯಿಂದಿರು. ಬೇಗದಲ್ಲಿಯೇ ತಕ್ಕ ಎಡೆಯನ್ನು ಕಲ್ಪಿಸಿಕೊಂಡು ನಿನ್ನನ್ನು ಸಂಧಿಸುತ್ತೇನೆ. ಇದು ನಿಶ್ಚಯ. ಹೆಚ್ಚಿಗೆ ಬರೆಯಲಾರೆ. ಇತಿ,

ನಿನ್ನನ್ನು ಕಾಣದೆ ಪರಿತಪಿಸುತ್ತಿರುವ ನಿನ್ನ ಪ್ರಿಯಳಾದ,
ಸುಭದ್ರಾದೇವಿ"

ರಾಮಯಾಮಾತ್ಯನು ಉದ್ದವಾದ ಉಸಿರನ್ನು ಬಿಡುತ್ತಾ ಪತ್ರವನ್ನು ಕೆಳಗಿಟ್ಟನು.

"ಈಗೇನು ಹೇಳುವಿರಿ ರಾಮಯಾಮಾತ್ಯರೇ ?" ಎಂದನು ವೀರರುದ್ರ.

ರಾಮಯಾಮಾತ್ಯನು ಸುಮ್ಮನಿರುವುದನ್ನು ನೋಡಿ, ಚೆನ್ನಾದೇವಿ "ಏಕೆ ಮಾತಾಡುವುದಿಲ್ಲ? ಸಾಧ್ವೀ ಸುಭದ್ರಾದೇವಿಯ ನಿಜವಾದ ಹಸ್ತಾಕ್ಷರವು ಈ ಎರಡೂ ಗ್ರಂಥಗಳಲ್ಲಿರುವುದನ್ನು ನೋಡಿರಿ. ಇದೋ, ಇದು ನನ್ನ ತಾಯಿ ಉದಯಗಿರಿಯಲ್ಲಿದ್ದಾಗ ಬರೆಯಲು ಪ್ರಾರಂಭಿಸಿ, ಅಯೋಧ್ಯಾಕಾಂಡದ ವರೆಗೆ ಬರೆದು ಮುಗಿಸಿದ ರಾಮಾಯಣ ಗ್ರಂಥ. ನೀವು ಮಾಯ ಮಾಡಿದ ಗ್ರಂಥ. ಇದು ಅವಳ ಹಸ್ತಾಕ್ಷರ ಅಲ್ಲವೆನ್ನು ವಿರಾ? ಹಾಗಿದ್ದರೆ ಅದರ ಮುಂದಿನ ಕಾಂಡಗಳನ್ನೆಲ್ಲಾ ಅವಳೇ ಬರೆದು ಮುಗಿಸಿದ ಗ್ರಂಥವೂ ಇಲ್ಲಿದೆ. ಇದನ್ನು ಅವಳು ಬರೆಯು ವಾಗ ನೋಡಿದವರು ಮುಖ್ಯವಾಗಿ, ಗೋಪಾಲ ನಾಯಕರೂ ನನ್ನ ಪತಿಯೂ ಇಲ್ಲಿಯೇ ಇದ್ದಾರೆ. ನಿಮ್ಮ ಸೃಷ್ಟನೆಯ ಪತ್ರಗಳನ್ನು ನಂಬಲು ಬಾಧಕವಾಗಿರುವ ಈ ಮೊದಲನೇ ಗ್ರಂಥವನ್ನು ನೀವು ಅಪಹರಿಸಿ, ನಿಮ್ಮ ಪ್ರಾಣಮಿತ್ರನಾದ ತೋಪಲ್‌ಖಾನನ ವಶಕ್ಕೆ ಕೊಟ್ಟು ಅಡಗಿಸಲು ಹೇಳಿದಿರಿ. ರಾಯಚೂರಿನಲ್ಲಿದ್ದ ಈ ಗ್ರಂಥವನ್ನು ನನ್ನ ವೀರಕುಮಾರಿಯೇ ಸಂಪಾದಿಸಿಕೊಂಡು ಬಂದಳು. ನೀವು ನನ್ನ ಕುಮಾರಿಯನ್ನು ರಾಯಚೂರಿಗೆ ಕದ್ದೊಯ್ದುದರಿಂದ ನಿಮ್ಮ ಗತಕರ್ಮ ವನ್ನು ನೀವೇ ನಿಮ್ಮ ಕಡೆಗೆ ಎಳೆದುಕೊಂಡಹಾಗಾಯಿತು. ಈ ಎರಡು ಸತ್ಯ ಗ್ರಂಥಗಳ ಮುಂದೆ ಸೂರ್ಯಪ್ರಕಾಶದಲ್ಲಿ ಸ್ಪಷ್ಟವಾಗಿ ಕಾಣುವ ಕೊಳಕಿನ ಹಾಗೆ ನಿಮ್ಮ ಸೃಷ್ಟನೆಯ ಪತ್ರಗಳು ಕಾಣುತ್ತಿವೆ ನೋಡಿ." ಎಂದಳು.

ರಾಮಯಾಮಾತ್ಯನು ಮೌನವಾಗಿಯೇ ಇನ್ನೂ ಯೋಚನೆ ಮಾಡುತ್ತಿದ್ದನು. ತಪ್ಪಿಸಿಕೊಳ್ಳಲು ಉಪಾಯವಿದೆಯೇ ಎಂದು ಇನ್ನೂ ಅವನ ಬುದ್ಧಿ ಉಪಾಯವನ್ನು ಹುಡುಕುತ್ತಿತ್ತು. ಆಗ ವೀರರುದ್ರನು "ಈ ಪತ್ರಗಳನ್ನೂ ಈ ಗ್ರಂಥಗಳನ್ನೂ ನೋಡುವಾಗ ಸುಭದ್ರಾದೇವಿ ನಿರಪರಾಧಿನಿಯೂ ನಿರಪವಾದಿನಿಯೂ ಎಂದು ಬೋಧವಾಗುವು ದಿಲ್ಲವೆ?" ಎಂದು ಪ್ರಶ್ನಿಸಿದನು.

ರಾಮು: "ಹೌ....ದು. ಅದು........ನಿಜ. ಆದರೆ ಇದಕ್ಕೆಲ್ಲಾ ನಾನು ಸಂಬಂಧಪಟ್ಟಿರುವುದು ಹೇಗೆಂಬುದೇ ನನಗೆ ತಿಳಿಯಲಿಲ್ಲವಲ್ಲ?"

ಚಿನ್ನಾ : "ತಿಳಿಯಲಿಲ್ಲವೆ? ರಾಯಚೂರಿನ ತೋಪಲ್ ಖಾನನು ನಿಮ್ಮ ಸ್ನೇಹಿತನಷ್ಟೆ?"

ರಾಮು: "ಅದು ಪ್ರಭುಗಳಿಗೂ ಗೊತ್ತಿದೆ."

ಚಿನ್ನಾ : "ಈ ಸೃಷ್ಟನೆಯ ಕಾಗದಗಳನ್ನು ಅವನೇ ಸೃಷ್ಟಿಮಾಡಿ ನಿಮ್ಮ ಕೈಗೆ ಕೊಟ್ಟಿದ್ದಾನೆ."

ರಾಮು: ನನ್ನ........ಕೈಗೆ?"

ಚಿನ್ನಾ : "ಹೌದು."

ರಾಮು: "ಸುಳ್ಳು!"

ಚಿನ್ನಾ : "ನಿಮ್ಮ ನಾಲಗೆಯೇ ಹೇಳಿದ್ದಿದು. ಪಾತಪಲ್ಲಿಯಲ್ಲಿ ತೋಪಲ್ ಖಾನನೇ ನಿಮ್ಮೊಂದಿಗೆ ಹೇಳಿಕೊಂಡಿದ್ದಾನೆ. ಒಳ್ಳೇದು, ಅವನನ್ನೇ ಬರಮಾಡಿ ಅದನ್ನು ಇತ್ಯರ್ಥಿಸೋಣ. ಆತನು ಬ್ರಾಹ್ಮಣಾಧಮರಾದ ನಿಮ್ಮಷ್ಟು ಆತ್ಮವಂಚಕನಾಗಲಾರನು. ಈಗ ಇದನ್ನು ನೋಡಿರಿ, ನನ್ನ ತಾಯಿ ಸ್ವಹಸ್ತದಿಂದ ಬರೆದು, ಸಾಯುವ ಕಾಲದಲ್ಲಿ ನನ್ನ ಕೈಗೆ ಒಪ್ಪಿಸಿ ಹೋದ ಈ ಪತ್ರವನ್ನು ನೋಡಿರಿ."

ರಾಮು : "ನಿನ್ನ ತಾಯಿಯ ವಿಷಯ ನನಗೇನೂ ಗೊತ್ತಿಲ್ಲ. ನಾನು ಹೇಳಿದ್ದು ಸುಭದ್ರಾದೇವಿಯನ್ನು ಕುರಿತು."

ಚಿನ್ನಾ: "ಆ ಸುಭದ್ರಾದೇವಿಯೇ ಬರೆದದ್ದಿದು. ಇದಕ್ಕೂ ನೀವು ಒಪ್ಪದಿದ್ದರೆ ನಿಮ್ಮನ್ನು ಪ್ರಸಿದ್ಧ ನ್ಯಾಯಸಭೆಯ ಮುಂದೆ ನಿಲ್ಲಿಸಿ ವಿಚಾರಿಸಬೇಕಾಗುತ್ತದೆ. ಇಷ್ಟರವರೆಗೆ ಸಾಧಿಸಿದ ನಾನು ಅಷ್ಟರವರೆಗೂ ಸಾಧಿಸುವವಳೇ. ಅಪ್ಪಾ, ನನ್ನ ತಾಯಿಯ ದುಃಖಾಂತ ಆತ್ಮ ಚರಿತ್ರೆಯನ್ನು ನೀವೆ ಓದಿಹೇಳಿರಿ. ತನ್ನ ಪ್ರಭುಗಳ ಬಾಯಿಯಿಂದಲೇ ಇವರು ಇವರ ಅಸಹ್ಯ ಕತೆಯನ್ನು ಕೇಳಿಕೊಳ್ಳಲಿ" ಎಂದೆಂದು ಅರಣ್ಯ ಕಾಂಡದಿಂದ ತೊಡಗಿದ್ದ ಆ ರಾಮಾಯಣ ಗ್ರಂಥವನ್ನು ವೀರರುದ್ರನ ಕೈಗೆ ಕೊಟ್ಟಳು.

ಮೊದಲು ವೀರರುದ್ರನು ಆ ಗ್ರಂಥದ ಹೊದಿಕೆಯ ಮೇಲಿರುವ

ಎರಡು ಪಙ್ಕ್ತಿಗಳನ್ನು ಹೀಗೆಂದು ಓದಿದನು: "ಈ ಗ್ರಂಥದ ಹೊದಿಕೆಯೊಳಗೆ ಭದ್ರವಾಗಿಟ್ಟಿರುವ ನನ್ನ ಆತ್ಮ ಚರಿತ್ರೆಯ ಪತ್ರವಿದೆ. ಪರಮಾತ್ಮ ಸಾಕ್ಷಿಯಾಗಿ ಅದೆಲ್ಲವೂ ಸತ್ಯವೆಂದು ಈ ಮರಣ ಕಾಲದಲ್ಲಿ ನಾನು ಬರೆಯುತ್ತೇನೆ. ಸುಭದ್ರಾದೇವಿ"

"ಆಹಾ! ಅವಳು ತಾನು ಸಾಯುವುದು ನಿಶ್ಚಯವೆಂದು ತಿಳಿದು, ಅವಳ ಆತ್ಮಚರಿತ್ರೆಯೆಲ್ಲವನ್ನೂ ನನಗೆ ಹೇಳಿ, ಈ ಗ್ರಂಥದ ಹೊದಿಕೆಯೊಳಗೆ ಅದೆಲ್ಲಾ ಬರೆದಿಟ್ಟಿರುವುದಾಗಿಯೂ ತಿಳಿಸಿದಳು. ಹಾಗೆಯೇ ನನ್ನಿಂದ ಲೇಖನಿಯನ್ನು ತರಿಸಿಕೊಂಡು, ನಡುಗುವ ಕೈಯಿಂದ, ಇದರೊಳಗಿರುವ ವೃತ್ತಾಂತವೆಲ್ಲಾ ಸತ್ಯವೆಂದು ಬರೆದು ಆಮೇಲೆ ಪ್ರಾಣವನ್ನು ಬಿಟ್ಟಿದ್ದಾಳೆ" ಎಂದಳು ಚಿನ್ನಾದೇವಿ. ಆಗ ಅವಳ ಕಣ್ಣುಗಳು ತೇವವಾದುವು.

ಅನಂತರ ವೀರರುದ್ರನು ಆ ಗ್ರಂಥದ ಹೊದಿಕೆಯೊಳಗಿದ್ದ ಪತ್ರವನ್ನು ತೆಗೆದು ದುಃಖಗದ್ಗದಿತವಾದ ಕಂಠದಿಂದ ಓದಲಾರಂಭಿಸಿದನು:

"ಮಗು ಚಿನ್ನಾ, ಈ ವೃತ್ತಾಂತವನ್ನು ಬರೆಯುವ ನಾನು ನಿನ್ನನ್ನು ಹೆತ್ತ ತಾಯಿಯಾದ ಸುಭದ್ರಾದೇವಿ. ಇದನ್ನು ಬರೆಯುವ ಈ ಸಮಯದಲ್ಲಿ ನೀನು ಎಳೆಗೂಸಾಗಿರುತ್ತೀ. ನೀನು ದೊಡ್ಡವಳಾದ ಮೇಲೆ ಈ ಪತ್ರವು ನಿನಗೆ ಸಿಕ್ಕೀತು; ಅರ್ಥವಾದೀತು. ಆಗ ನಿನ್ನ ತಾಯಿಯ ಚರಿತ್ರೆ ನಿನಗೆ ತಿಳಿಯಬೇಕೆಂತಲೇ ಈಗಾಗಲೇ ಬರೆದಿಡಲಾರಂಭಿಸಿದ್ದೇನೆ. ಏಕೆಂದರೆ, ದುಃಖಿನಿಯಾದ ನನಗೆ ಬೇಗನೇ ಮರಣವುಂಟಾದೀತೆಂಬ ಸಂದೇಹವಿದೆ. ನಾನು ದಿನೇ ದಿನೇ ಕ್ಷೀಣಿಸುತ್ತಾ ಬರುತ್ತಿದ್ದೇನೆ.

"ಕಂದಾ, ನಾನು ಉದಯಗಿರಿಯ ರಾಜಾ ವೀರರುದ್ರ ಗಜರಾಜೇಂದ್ರರ ಧರ್ಮಪತ್ನಿ. ವೇಟೂರು ಬಲಭದ್ರರಾಜರ ಕುಮಾರಿ. ನಾನು ವೀರರುದ್ರ ಗಜರಾಜರನ್ನು ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ, ಗಜಪತಿಗಳ ಬ್ರಾಹ್ಮಣ ಮಂತ್ರಿಯಾದ ರಾಮಯ್ಯನೂ ನನ್ನನ್ನು ವರಿಸಬೇಕೆಂದು ಗುಪ್ತವಾಗಿ ಬಹಳ ಪ್ರಯತ್ನ ಮಾಡಿ ವಿಫಲನಾಗಿದ್ದನು. ಬಳಿಕ ನಾನು ಅವನ ಪ್ರಭುವಿನ ಪತ್ನಿಯಾಗಿ ಪತಿಗೃಹವನ್ನು

ಸೇರಿದೆನು. ಆಗ ಮೋಹಾನ್ವಿತನಾದ ರಾಮಯ್ಯನು ನನ್ನನ್ನು ತನ್ನ ನೀಚ ಅಭಿಲಾಷೆಗೆ ಒಪ್ಪಿಸಲು ತುಂಬಾ ಪ್ರಯತ್ನಪಟ್ಟನು. ನಾನು ಹೇಳಿದ ನಾನಾ ರೀತಿಯ ನಯ-ಭಯವಾದ ನೀತಿರೀತಿಗಳೆಲ್ಲವೂ ವ್ಯರ್ಥವಾದುವು.

"ಒಂದು ದಿನ ನನ್ನ ಪತಿ ಬೇಟೆಗೆ ಹೋದಾಗ ನಾನು ಏಕಾಂಗಿನಿಯಾಗಿ ಪೂಜಾಗೃಹದಲ್ಲಿದ್ದ ಸಂದರ್ಭದಲ್ಲಿ, ಆ ರಾಮಯಾಮಾತ್ಯನು ನನ್ನನ್ನು ಸಂಧಿಸಿ, ಅಸಹ್ಯವಾದ ಹಾವಭಾವಗಳನ್ನು ಅಭಿನಯಿಸ ತೊಡಗಿದನು. ನಾನು ಅವನನ್ನು ತುಚ್ಛೀಕಾರವಾಗಿ ಬೈದು, ನಿಂದಿಸಿ ಕಳುಹಿಸಿಬಿಟ್ಟೆನು. ಆಗ ಆತನು ನನ್ನನ್ನು ಕೆಟ್ಟ ಕಣ್ಣಿನಿಂದ ನೋಡುತ್ತ 'ಸುಭದ್ರಾ, ನಿನ್ನನ್ನು ದಾರಿಗೀಡು ಮಾಡದಿದ್ದರೆ ನಾನು ರಾಮಯಾಮಾತ್ಯನೇ ಅಲ್ಲ!' ಎಂದು ಶಪಥ ಹಾಕಿಕೊಂಡು ಹೋದನು.

"ಮುಂದೆ ಕೆಲವು ದಿನಗಳಲ್ಲಿಯೇ ಆ ಬ್ರಾಹ್ಮಣಾಧಮನು ತನ್ನ ಶಪಥವನ್ನು ಈಡೇರಿಸಿಯೇಬಿಟ್ಟನು. ನನ್ನ ಪತಿಯ ಕೈಗೆ ನನ್ನ ಹಾಸಿಗೆಯ ಎಡೆಯಲ್ಲಿ ಒಂದು ದುಷ್ಟಪತ್ರವು ಸಿಕ್ಕಿತು. ಅದು ಯಾವನೊ ರಘುಪತಿ ಎಂಬವನು ನನಗೆ ಬರೆದ ಪ್ರೇಮಪತ್ರದ ಹಾಗೆ ಸೃಷ್ಟಿಸಲ್ಪಟ್ಟಿತ್ತು. ಇದರ ಮೇಲೆ ಆ ಪತ್ರಕ್ಕೆ ನಾನು ಬರೆದಂತಹ ಪ್ರತ್ಯುತ್ತರ ರೂಪದಲ್ಲಿದ್ದ ಇನ್ನೊಂದು ಪತ್ರವೂ ಒಬ್ಬಳು ದಾಸಿಯ ಮೂಲಕವಾಗಿ ಅವರ ಕೈಗೆ ಸಿಕ್ಕಿತ್ತು. ಕೇಳಬೇಕೆ? ನನ್ನ ಮೇಲೆ ಎಷ್ಟೋ ಪ್ರೇಮದಿಂದಿದ್ದ ನನ್ನ ಪತಿ ಒಂದೇ ನಿಮಿಷದೊಳಗೆ ಕಠೋರರಾದರು. ಭಯಂಕರವಾದ ಅವರ ಕೋಪಾಗ್ನಿಗೆ ಸಿಕ್ಕಿಬಿದ್ದೆನು. ಆ ಪತ್ರಗಳಿಗೂ ನನಗೂ ಯಾವುದೊಂದು ಸಂಬಂಧವೂ ಇಲ್ಲವೆಂದು ನಾನು ಎಷ್ಟು ಮೊರೆಯಿಟ್ಟುಕೊಂಡರೂ ವ್ಯರ್ಥವಾಯಿತು. ನಾನು ಅಯೋಧ್ಯಾ ಕಾಂಡದವರೆಗೆ ಬರೆದು ಮುಗಿಸಿದ್ದ ಒಂದು ರಾಮಾಯಣ ಗ್ರಂಥವನ್ನು ತೋರಿಸಿ, ಪತಿಯ ಸಂದೇಹವನ್ನು ತೀರಿಸೋಣವೆಂದು ಹುಡುಕಿದಾಗ ಆ ಗ್ರಂಥವೂ ಸಿಕ್ಕದೆ ಹೋಯಿತು. 'ನನ್ನ ಅಕ್ಷರಗಳನ್ನು ಬರೆದು ತೋರಿಸುತ್ತೇನೆ. ಪರೀಕ್ಷೆ ಮಾಡಿರಿ' ಎಂದು ನಾನು ಎಷ್ಟು ಬೇಡಿಕೊಂಡರೂ ನನ್ನಮೇಲೆ ಖಂಡಿತ ತಪ್ಪು ಅಭಿಪ್ರಾಯ ತಾಳಿದ ನನ್ನ

ಪತಿ 'ಇನ್ನೇಕೆ ಪರೀಕ್ಷೆ? ಇದನ್ನು ನೀನು ಬರೆಯದಿದ್ದರೆ ನಿನ್ನ ಕೈಯಾಳುಗಳಾರಿಂದಲಾದರೂ ಬರೆಸಿದ್ದೀ' ಎಂದೇ ಸಾಧಿಸಿ, ನನ್ನನ್ನು ಮನೆಯಿಂದಲೂ ರಾಜ್ಯದಿಂದಲೂ ಹೊರಗೆ ದೂಡಿಸಿಬಿಟ್ಟರು. ಮಗು ಆಗ ನಾನು ನಿನ್ನನ್ನು ಗರ್ಭದಲ್ಲಿ ಧರಿಸಿ ನಾಲ್ಕು ತಿಂಗಳಾಗಿತ್ತು.

"ಸರ್ವಶೂನ್ಯಳಾಗಿ ನಾನು ದುಃಖಿಸುತ್ತಿರುವಾಗ, ಆ ನೀಚ ರಾಮಯಾಮಾತ್ಯನು ನನ್ನ ಬಳಿಗೆ ಬಂದು, ಅವನೇ ನನ್ನನ್ನು ಆ ಗತಿಗೆ ತಂದವನೆಂದು ಬಾಯಿಬಿಟ್ಟು ಹೇಳಿ 'ಈಗಾದರೂ ನನಗೆ ಅನುಕೂಲೆಯಾಗುವಿಯಾ? ನೀನು ಸಕಲ ಸೌಭಾಗ್ಯಗಳನ್ನೂ ಅನುಭವಿಸುವಂತೆ ಮಾಡಬಲ್ಲೆ' ಎಂದು ಒತ್ತಾಯಿಸಲಾರಂಭಿಸಿದನು. ನಾನು ಆ ಪಾಪಿಯ ಮುಖವನ್ನೇ ನೋಡಲಾರದೆ ಓಡಿಹೋದೆನು.

"ಚಿನ್ನಾ, ಗಂಡನಿಂದ ತ್ಯಜಿಸಲ್ಪಟ್ಟ ನಾನು, ನನ್ನ ಕರಾಳ ಭವಿಷ್ಯವನ್ನು ನೆನೆನೆನೆದು ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಎಷ್ಟೋ ಬಾರಿ ನಿಶ್ಚಯಿಸಿದೆನು. ಆದರೆ ಹಣೆಯಲ್ಲಿ ಬರೆದ ಬವಣೆಗಳನ್ನು ಅನುಭವಿಸಿ ತೀರಿಸದೆ ಈಶ್ವರೇಚ್ಛೆಗೆ ವಿರುದ್ಧವಾಗಿ ಪ್ರಾಣಘಾತ ಮಾಡಿಕೊಳ್ಳುವುದು ಮಹಾ ಪಾಪ, ಈ ಪಾಪದ ಮೇಲೆ ಭ್ರೂಣಹತ್ಯೆಯ ಘನವು ಬೇರೆ. ಈ ಭಯಂಕರ ಹತ್ಯಾದೋಷಣೆಗೆ ಅಂಜಿಕೊಂಡೇ ನಾನು ಜೀವವನ್ನು ಬಿಗಿದಿಟ್ಟುಕೊಂಡು ಅಲ್ಲಲ್ಲಿ ಭಿಕ್ಷೆಬೇಡುತ್ತಾ ಚಂದ್ರಗಿರಿ ಪ್ರಾಂತದ ಓಂಪಲ್ಲಿ ಎಂಬ ಗ್ರಾಮಕ್ಕೆ ಬಂದೆನು. ಇಲ್ಲಿಯ ಜಮಿನಾನುದಾರರಾದ ಶ್ರೀ ಗೋಪಾಲ ನಾಯಕರು ನನ್ನನ್ನು ಕಂಡು ಏನೋ ಕನಿಕರಗೊಂಡು, ನನ್ನನ್ನು ಅವರ ನಿರ್ಭಾಗ್ಯ ಸಹೋದರಿಯನ್ನಾಗಿ ಭಾವಿಸಿ, ತಿರುಕತನದ ಬನ್ನದಿಂದ ನನ್ನನ್ನು ಪಾರುಮಾಡಿದರು. ಅವರು ಕಟ್ಟಿಕೊಟ್ಟ ಪ್ರತ್ಯೇಕವಾದ ಗುಡಿಸಲಿನಲ್ಲಿಯೇ ನಾನು ನಿನ್ನನ್ನು ಹೆತ್ತೆ.

"ನನಗೆ ಬೇಕಾದ ಸಹಾಯಾನುಕೂಲತೆಗಳೆಲ್ಲವನ್ನೂ ನನ್ನ ಬಂಧುವಾದ ಗೋಪಾಲನಾಯಕರೇ ಒದಗಿಸಿಕೊಟ್ಟರು. ನಾನು ಭದ್ರವ್ವನೆಂಬ ನಾಮಾಂತರದಿಂದ ಅನಾಥ ಸ್ತ್ರೀ ಎಂದಷ್ಟೇ ಪರಿಚಿತಳಾಗಿ ಓಂಪಲ್ಲಿಯಲ್ಲಿಯೇ ವಾಸವಾಗಿರುತ್ತೇನೆ. ನೂಲು ನೂತು ಆ ಮೂಲಕವಾಗಿಯೇ, ಜೀವನವನ್ನು ಸಾಗಿಸುತ್ತಿದ್ದೇನೆ. ಈ ನೂತನ ಜನ್ಮಕ್ಕೆ ನನ್ನ ತಂದೆ

ಯಾದವರು ಮಹಾನುಭಾವರಾದ ಗೋಪಾಲ ನಾಯಕರು. ನಿನ್ನನ್ನು ಸ್ವಂತ ಮಗಳಂತೆ ನೋಡಿಕೊಳ್ಳುತ್ತ ವಿದ್ಯಾಬುದ್ಧಿಗಳನ್ನು ಕಲಿಸಿ ನಿನ್ನನ್ನು ದೊಡ್ಡವಳನ್ನಾಗಿ ಮಾಡುತ್ತಿರುವ ಗೋಪಾಲನಾಯಕರಿಗೆ ನೀನು ಆಜನ್ಮ ಕೃತಜ್ಞಳಾಗಿರಲಿಕ್ಕೆ ಮರೆಯಬಾರದು. ತಿಳಿಯಿತೆ?

"ಮಗುವೆ, ದುರಪವಾದವೆಂಬ ದುರ್ಭರವಾದ ದುಃಖವು ನಿರಂತರ ನನ್ನ ಹೃದಯವನ್ನು ಕೊರೆಯುತ್ತಲೇ ಇರುವುದರಿಂದ ಎಳೆಗೂಸಾದ ನೀನು ದೊಡ್ಡವಳಾಗುವ ಮೊದಲೇ ನಾನು ನಿನ್ನನ್ನು ನಡುನೀರಲ್ಲಿ ಬಿಟ್ಟಹಾಗೆ ಬಿಟ್ಟು ತೆರಳಬೇಕಾದೀತು. ಹಾಗೇನಾದರೂ ಆದರೆ, ನಿನ್ನ ತಾಯಿಯ ದುರಂತ ಚರಿತ್ರೆ ನಿನಗೂ ತಿಳಿಯಬೇಕು, ನಿನ್ನ ತಂದೆ ಯಾರೆಂದು ನಿನಗೂ ಗೊತ್ತಾಗಬೇಕು, ರಾಮಯಾಮಾತ್ಯನಂತಹ ಗೋಮುಖವ್ಯಾಘ್ರರು ಲೋಕದಲ್ಲಿರುವರೆಂದು ನೀನೂ ಅರಿಯಬೇಕು ಎಂದು ದೀರ್ಘಾಲೋಚನೆ ಮಾಡಿಯೇ ಈ ಆತ್ಮವೃತ್ತವನ್ನು ಬರೆದಿಟ್ಟಿದ್ದೇನೆ. ಮಗಳೆ, ನೀನು ಭವಿಷ್ಯತ್ಕಾಲದಲ್ಲಿ ಸಾಮ್ರಾಜ್ಞಿಯಾಗುವಿಯೆಂದು ಸಾಮುದ್ರಿಕಾ ಶಾಸ್ತ್ರಜ್ಞರೂ, ಪ್ರಸಿದ್ಧ ಜೋತಿಷ್ಕರೂ ಹೇಳಿದ್ದಾರೆ. ಗೋಪಾಲ ನಾಯಕರು ನಿನ್ನನ್ನು ವೀರಕನ್ಯೆಯನ್ನಾಗಿಸಿ, ಸಾಮ್ರಾಜ್ಞಿಗೆ ತಕ್ಕ ಪಾತ್ರಳನ್ನಾಗಿ ಮಾಡುವೆನೆಂದು ನನಗೆ ಭರವಸೆ ಕೊಟ್ಟಿರುತ್ತಾರೆ. ವೀರ ಕ್ಷತ್ರಿಯರಾದ ವೀರರುದ್ರ ಗಜಪತಿಗಳ ಕುಮಾರಿಯಾದ ನೀನು ಅಘಟಿತ ಘಟನಾಪಟುವಾದ ಶ್ರೀ ಪರಮಾತ್ಮನ ಕರುಣಾ ವಿಲಾಸದಿಂದ, ನಿನ್ನ ತಾಯಿಗೆ ವೃಥಾ ಪ್ರಾಪ್ತವಾದ ಈ ದುಷ್ಕಳಂಕವನ್ನು ಹೋಗಲಾಡಿಸಿಕೊಂಡು, ಬೆಳಗಿ, ರಾಜೇಶ್ವರಿಯಾಗಿ ಸೊಗಬಾಳುವೆ ಮಾಡಿಕೊಳ್ಳುವಂತಾದರೆ, ಆ ನಿನ್ನ ಸೌಭಾಗ್ಯವನ್ನು ಕಂಡು, ಪರಲೋಕದಲ್ಲಿರುವ ನಾನು ತುಂಬಾ ಆನಂದಪಡುತ್ತೇನೆಂದು ದೃಢವಾಗಿ ನಂಬು. ದಯಾಮಯನಾದ ದೇವನು ಹಾಗಾಗಿಸಲೆಂದು ನನ್ನ ಆಶೀರ್ವಾದಗಳು.

ಇತಿ ನಿನ್ನ ನಿರ್ಭಾಗ್ಯ ಜನನಿ, ವೀರರುದ್ರ ಗಜರಾಜ ಪತ್ನಿ,
ಸುಭದ್ರಾದೇವಿ."

ಓದಿ ಮುಗಿಸಿದ ವೀರರುದ್ರನು ಕಣ್ಣೀರನ್ನೊರೆಸಿಕೊಳ್ಳುತ್ತಾ ರಾಮಯಾಮಾತ್ಯನ ಮುಖವನ್ನು ನೋಡಿದನು. ಅವನ ಕಣ್ಣುಗಳಿಂದ ಧಾರೆ ಧಾರೆಯಾಗಿ ನೀರಿಳಿಯುತ್ತಿತ್ತು. ಗಡಗಡನೆ ನಡುಗುತ್ತಿದ್ದನು. ನಲವತ್ತು ವರ್ಷಗಳ ಹಿಂದಣ ಅವನ ಅನ್ಯಾಯದ ಚಿತ್ರಗಳು ಅವನ ಕಣ್ಣೆದಿರಲ್ಲಿ ಮೂರ್ತಿಮಂತವಾಗಿ ಕುಣಿಯುತ್ತಿರುವಾಗ ಅವನು ಎಷ್ಟು ಹೊತ್ತು ಸೈರಿಸಿಯಾನು ? ವೀರರುದ್ರನ ದೃಷ್ಟಿ ಅವನ ಮೇಲೆ ಬೀಳುತ್ತಲೇ ಆತನು ಕುಳಿತಲ್ಲಿಯೇ ಮುಂಬಾಗಿ ದಢನ್ನನೆ ವೀರರುದ್ರನ ಪಾದದಮೇಲೆ ಬಿದ್ದು, ಗದ್ಗದ ಕಂಠದಿಂದ "ಹಾ ! ಪ್ರಭು! ಸೈರಿಸಲಾರೆನು! ನಾನು ಮಾಡಿದ ಆ ಮಹಾಪಾಪವನ್ನು ನೆನೆದು ಸಾಯುತ್ತೇನೆ! ದಂಡಿಸಿರಿ! ಈ ಮಹಾ ದ್ರೋಹಿಯನ್ನು ದಂಡಿಸಿರಿ! ತಾಯೆ! ನನ್ನಮ್ಮ! ಎಲ್ಲಿರುವಿಯೊ! ಸುಭದ್ರಾಮಾತೇ! ನಿನ್ನ ಸಂಕಟ ಜೀವನಕ್ಕೆ ಮೂಲ ಕಾರಣನು ನಾನೇ. ಪ್ರಭೋ! ದಂಡಿಸಿರಿ ಈ ಚಾಂಡಾಲನನ್ನು !" ಎಂದು ಪ್ರಲಾಪಿಸಿದನು.

ಆಗ ಕೃಷ್ಣದೇವರಾಯ, ತಿಮ್ಮಣ್ಣ, ರಾಮಕೃಷ್ಣ, ತಿಮ್ಮರಸ ಮೊದಲಾದವರು ಒಳಗೆ ಬಂದರು.

ವೀರರುದ್ರನು ರಾಮಯಾಮಾತ್ಯನನ್ನು ಎಬ್ಬಿಸಿ–"ನೀವು, ಬಹಳ ಬುದ್ಧಿವಂತರೂ ಸ್ವಾಮಿನಿಷ್ಠರೂ ಆದ ನೀವು, ಹೀಗೊಂದು ದೊಡ್ಡ ಅಪರಾಧವನ್ನು ಮಾಡಿ ಮುಚ್ಚಿಟ್ಟುಕೊಂಡಿರುವಿರೆಂದು ನಾನು ಊಹಿಸಲೇ ಇಲ್ಲ. ಹಾಗೆಂದು ನಂಬುವುದೇ ಕಷ್ಟವಾಯಿತು. ನನ್ನ ವೀರ ಕುಮಾರಿಯಾದ ಚಿನ್ನಾದೇವಿಯ ಸಾಹಸದಿಂದ ಎಲ್ಲವೂ ಹೊರಗೆ ಬಂತು. ಅಮಾತ್ಯ ಮಹಾಶಯರೆ, ಅನೇಕ ವರ್ಷಗಳಿಂದ ಗಜ ರಾಜ್ಯಗಳ ಮಂತ್ರಿಯಾಗಿ, ನಮಗೆ ಪರಮ ಆಪ್ತರಾಗಿ, ಮಿತ್ರರಾಗಿ ಇದ್ದ ನೀವು, ಮೊತ್ತಮೊದಲಲ್ಲಿ ಹೀಗೊಂದು ಚಾಂಡಾಲ ಕೃತ್ಯವನ್ನೆಸಗಿ ಮರೆಪಡಿಸಿಕೊಂಡಿರುವುದು ಬಹಳ ಆಶ್ಚರ್ಯ !" ಎಂದನು.

ರಾಮಯ್ಯನು ಕೈ ಮುಗಿದು ನಡುಗುವ ಸ್ವರದಿಂದ "ಪ್ರಭು, ದ್ರೋಹಿಯಾದ ನಾನು ಒಳಗೊಳಗೆ ಅದೇ ಚಿಂತೆಯಿಂದ ಕೊರಗುತ್ತಲೇ ಇದ್ದೆ. ಆ ಮಹಾಪಾಪವನ್ನು ಹೋಗಲಾಡಿಸಿಕೊಳ್ಳಬೇಕೆಂದೇ,

ನಾನು ನಿಮ್ಮ ಏಕನಿಷ್ಠ ಸೇವಕನಾಗಿರುವೆನೆಂದು ಪ್ರತಿಜ್ಞೆ ಮಾಡಿಕೊಂಡೆನು. ಆದರೆ ಆ ಅಪರಾಧಗಳನ್ನು ನಾನು ನಿಮ್ಮ ಸನ್ನಿಧಿಯಲ್ಲಿ ಒಪ್ಪಿಸಬೇಕಾಗಿತ್ತು. ಅದನ್ನು ಬಹಿರಂಗ ಪಡಿಸಲು ಬಾಯಿಬಾರದೆ ಒಳಗೆ ಒತ್ತಿಕೊಂಡಿದ್ದೆನು. ಸ್ವಾಮಿದ್ರೋಹಿಯೂ, ಸತೀದ್ರೋಹಿಯೂ, ಆತ್ಮದ್ರೋಹಿಯೂ ಆದ ನನಗೆ ಇನ್ನೇನು ಗತಿ ? ನನ್ನನ್ನು ದೇವರು ಕೂಡ ಕ್ಷಮಿಸಲಿಕ್ಕಿಲ್ಲ. ಕ್ಷಮಿಸು ಎಂದು ಯಾರನ್ನು ಯಾವ ಮುಖದಿಂದ ಬೇಡಲಿ ?" ಎಂದು ಹಲುಬಿಕೊಂಡನು.

ವೀರರುದ್ರನು ಅವನನ್ನು ಕುರಿತು "ನಿಮಗೀಗ ನಿಜವಾದ ಪಶ್ಚಾತ್ತಾಪವಾಗಿರುವುದಾದರೆ ಕ್ಷಮಾನಿಧಿಯಾದ ಭಗವಂತನು ಕ್ಷಮಿಸುವುದರಲ್ಲಿ ಏನೂ ಸಂದೇಹವಿಲ್ಲ. ಇದುವರೆಗೆ ನೀವು ಅಂತರಂಗದಲ್ಲಿಯೇ ಪಶ್ಚಾತ್ತಾಪ ಪಟ್ಟುಕೊಂಡು. ಆತ್ಮವಂಚನೆಯಿಂದ ಕಾಲಹರಣ ಮಾಡಿದರೂ, ಈಗ ಆತ್ಮ ಸಮ್ಮತವಾಗುವ ಹಾಗೆ ನಾಲ್ಕು ಮಂದಿಯ ಇದಿರಲ್ಲಿ ಒಪ್ಪಿಕೊಳ್ಳುವಿರಿ, ಬೇಡುವಿರಿ. ಆದುದರಿಂದ, ಕ್ಷಮೆಯೇ ರೂಪುಗೊಂಡಿರುವ ಆ ಪರಾತ್ಪರನು ಕ್ಷಮಿಸುವುದರಲ್ಲಿ ಸಂದೇಹವೇ ಇಲ್ಲ. ಆದರೆ ರಾಮಯಾಮಾತ್ಯರೆ, ದೇವರ ಕ್ಷಮೆ ಈಗ ನಿಮಗೆ ಮುಖ್ಯವಲ್ಲ. ಸತೀಮಣಿಯ ಪ್ರಭಾವವು ದೈವಿಕಶಕ್ತಿಗಿಂತಲೂ ಉತ್ಕಟವಾದುದು. ನೀವು ಯಾವ ಸಾಧ್ವೀಮಣಿಯನ್ನು ದುಃಖಾಂತ ಜೀವಿಯನ್ನಾಗಿ ಮಾಡಿದಿರೋ, ಆ ಸುಭದ್ರಾದೇವಿಯೇ ನಿಮ್ಮನ್ನು ಕ್ಷಮಿಸಬೇಕು. ತಾಯಿಗೆ ಪ್ರಾಣಕ್ಕಿಂತಲೂ ಪ್ರಿಯವಾದ ವಸ್ತುವೆಂದರೆ ಅವಳ ಮಗು. ಸುಭದ್ರಾದೇವಿಯ ಮಗುವಾದ ಈ ಚಿನ್ನಾದೇವಿ ಈಗ ನಿಮ್ಮನ್ನು ಕ್ಷಮಿಸಬೇಕು. ನಿಮ್ಮಿಂದಾಗಿ ಚಿನ್ನಾದೇವಿಯೂ ಬಲುಬಲು ಬನ್ನ ಬಟ್ಟಿದ್ದಾಳೆ. ಇವಳ ಕುಲಗೋತ್ರಗಳು ಅಜ್ಞಾತವಾಗಿ ಹೋದುವು. ಇವಳ ಗಂಡನು ನಮ್ಮ ಶತ್ರುವಾದ ಕೃಷ್ಣದೇವರಾಯನೆಂದು ಈಗ ತಾನೇ ಗೊತ್ತಾಗಿ, ಇವಳ, ಹಾಗು ಪರಲೋಕವಾಸಿನಿಯಾದ ನನ್ನ ರಾಣಿ ಸುಭದ್ರಾದೇವಿಯ ಸಂತೋಷಾರ್ಥವಾಗಿ, ನಾನು ವಿಚಾರಹೀನನಾಗಿ ಮಾಡಿದ ಆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ನಮ್ಮ ಶತ್ರುವಿನೊಡನೆಯೇ ಈಗ ಮಿತ್ರತ್ವ ಮಾಡಿಕೊಳ್ಳಬೇಕಾಗಿ ಬಂತು. ಇದಕ್ಕೆಲ್ಲಾ ಮೂಲ ಕಾರಣರು

ನೀವು. ವೀರಕುಮಾರಿ ಚಿನ್ನಾದೇವಿ ತನ್ನ ದೀರ್ಘ ಸಾಹಸಮಯ ವಾದ ಮಹೋದ್ಯಮದಿಂದ ಈ ರಹಸ್ಯವನ್ನು ಬೈಲಿಗೆಳೆಯದಿದ್ದರೆ ನಿಮಗೆ ಈ ಕ್ಷಮಾಯೋಗವು ಪ್ರಾಪ್ತವಾಗುತ್ತಿತ್ತೆ? ಆದುದರಿಂದ ಈಗ ಚಿನ್ನಾದೇವಿ ನಿಮ್ಮನ್ನು ಕ್ಷಮಿಸಿದರೆ ಇವಳ ತಾಯಿಯೂ ಕ್ಷಮಿಸಿದ ಹಾಗಾಯಿತು. ಇನ್ನು ಶರಣಾಗತರನ್ನು ಕ್ಷಮಿಸುವುದೇ ವ್ರತವಾಗಿರುವವನು ಆ ಪರಮಾತ್ಮ! ಅವನು ಕ್ಷಮಿಸುವನೆಂದು ಬೇರೆ ಹೇಳಬೇಕೆ?" ಎಂದು ನುಡಿದನು.

"ಆಹಾ! ಹೌದು! ಹೌದು!" ಎಂದು ಎಲ್ಲರೂ ತಲೆದೂಗಿದರು.

ರಾಮಯಾಮಾತ್ಯನು ದೀನದೃಷ್ಟಿಯಿಂದ ಚಿನ್ನಾದೇವಿಯನ್ನು ನೋಡುತ್ತ ಕೈಮುಗಿದು, "ತಾಯೆ, ಮಹಾಪರಾಧಿ, ಮಹಾ ಪಾಪಿ, ಮಹಾ ಚಂಡಾಲನು ನಾನು! ನನ್ನನ್ನು ಕ್ಷಮಿಸು. ಸಾಧ್ವೀ ಸುಭದ್ರಾ ದೇವಿಯೂ ಕ್ಷಮಿಸುವಂತೆ ಮಾಡು" ಎಂದು ಗದ್ಗದನಾಗಿ ಬೇಡಿಕೊಂಡನು.

ಕಣ್ಣಲ್ಲಿ ತುಂಬಿಬರುವ ನೀರನ್ನು ಕೈಯಿಂದ ಒರೆಸಿಕೊಳುತ್ತ ಚಿನ್ನಾದೇವಿಯೆಂದಳು: "ಶಾಂತರಾಗಿರಿ ಶಾಂತರಾಗಿರಿ! ದೊಡ್ಡವರಾದ ನೀವು ನನಗೆ ವಂದಿಸುವುದೆಂದರೇನು? ಪರಲೋಕವಾಸಿನಿಯಾದ ನನ್ನ ತಾಯಿಯ ಪಾವಿತ್ರ್ಯವು ಸಿದ್ಧವಾಗಿ, ನಾನು ವೀರಕ್ಷತ್ರಿಯ ವಂಶೋತ್ಪನ್ನಳಾದ ಗಜಪತಿನಂದಿನಿ ಎಂಬುದು ಸತ್ಯವಾಗಿ, ಆ ಮೂಲಕವಾಗಿ ನನ್ನ ತಾಯಿಯ ಆತ್ಮಕ್ಕೆ ಶಾಂತಿಯನ್ನುಂಟುಮಾಡಬೇಕೆಂದು ನಾನು ಇಷ್ಟು ಉದ್ಯಮಗಳನ್ನು ಕೈಕೊಂಡೆನು. ಆತ್ಮಚರಿತ್ರೆಯಲ್ಲಿಯೂ ನನ್ನ ತಾಯಿ ಹಾಗೆಯೇ ಬರೆದುಕೊಂಡಿದ್ದಾಳೆ. ಸಾಯುವಾಗಲೂ ಅದೇ ಕೋರಿಕೆ ಅವಳಿಗಿತ್ತು. ಈಗ ದಯಾಮಯನಾದ ಪರಮಾತ್ಮನ ಅನುಗ್ರಹದಿಂದ ನನ್ನ ಕೈಯಾರೆ ಆ ಕಾರ್ಯವು ಸಾಧಿಸಿತು. ತಾಯಿಯ ಕೋರಿಕೆ ಈಡೇರಿತು. ಈ ಘೋರಾಪವಾದವನ್ನು ಗೂಢವಾಗಿಟ್ಟುಕೊಂಡು, ಇಷ್ಟು ವರ್ಷ ಗೌರವಶಾಲಿಗಳಾಗಿ ಮೆರೆದ ನಿಮಗೆ, ನಮ್ಮ ಎಲ್ಲರ ಮುಂದೆ, ವಿಶೇಷವಾಗಿ ನಿಮ್ಮ ಪ್ರಭುಗಳ ಮುಂದೆಯೇ ಅದನ್ನು ಬಾಯಾರೆ ಒಪ್ಪಿಕೊಳ್ಳುವ ಪ್ರಸಂಗವು ಬಂದಿತಲ್ಲವೆ? ಇದಕ್ಕಿಂತ

ಹೆಚ್ಚಿನ ದಂಡನೆ ನಿಮಗೆ ಬೇರೇನಿದೆ? ಸ್ವಾಮಿ, ಈಗತಾನೇ ನೀವು ನಿಜವಾದ ನಿರ್ಮಲ ಹೃದಯವುಳ್ಳವರಾದಿರಿ. ನನ್ನ ತಾಯಿಯೂ ನಿರ್ಮಲಚರಿತ್ರಳಾಗಿ ನಾನೂ ನಿರ್ಮಲೆಯಾದೆನು. ಇನ್ನು ನಾನು ಕ್ಷಮಿಸಲಿಕ್ಕೆ ಏನೂ ಇಲ್ಲ. ತಾವು ಇದುವರೆಗೆ ಅಮಾತ್ಯಪದವಿಯಲ್ಲಿದ್ದು ಮಾಡಿದ ಘನಕಾರ್ಯಗಳೆಲ್ಲವೂ ಈ ಒಂದೇ ಕಳಂಕದಿಂದ ಕಪ್ಪಾಗಿ ಹೋಗದ ಹಾಗೆ, ಈಗ ನಿಷ್ಕಳಂಕ ಹೃದಯಿಗಳಾದ ನೀವು, ಅದೇ ಅಮಾತ್ಯಪದವಿಯ ದ್ವಾರಾ ಉತ್ತಮವಾದ ಕಾರ್ಯಗಳನ್ನು ಮಾಡುತ್ತ ಕೀರ್ತಿಶಾಲಿಗಳಾಗಬೇಕೆಂದು ನಾನು ಮನಃಪೂರ್ವಕವಾಗಿ ಹಾರೈಸುತ್ತೇನೆ."

"ಉತ್ತಮೋತ್ತಮವಾದ ಅಭಿಪ್ರಾಯ!" ಎಂದು ಎಲ್ಲರೂ ಒಮ್ಮೊಗದಿಂದ ಕೊಂಡಾಡಿದರು.

## ೨೫

ಶೈಲಭವನದ ಮೂರನೆಯ ಅಂತಸ್ತಿನ ಒಂದು ಭದ್ರವಾದ ಕೋಣೆಯೊಳಗೆ ತಿಪ್ಪಾಂಬೆ ಸೇರಿಸಲ್ಪಟ್ಟಿದ್ದಳು. ಅವಳು ಚಿನ್ನಾದೇವಿಯ ಹೇಳಿಕೆಗೆ ತಕ್ಕಹಾಗೆ ತಾಳಹಾಕಿದರೂ ಚಿನ್ನಾದೇವಿ ತನ್ನನ್ನು ನಂಬಲಿಲ್ಲವೆಂದು ಆ ವೃದ್ಧೆಗೆ ಗೊತ್ತಾಗಿತ್ತು. ಈ ಅಜ್ಞಾತಾದೇವಿ ಎಂಬವಳು ಕೃಷ್ಣದೇವನ ಹೆಂಡತಿಯೆಂದೂ, ಅವಳ ಪದರಿನೊಳಗೆ ತಾನಿರುವುದು ಬಹಳ ಅಪಾಯುವೆಂದೂ ಮಿಡುಕಿಕೊಂಡಿದ್ದಳು. ಅಜ್ಞಾತಾದೇವಿ ಅಂದೊಮ್ಮೆ ಅವಳೊಡನೆ ಮಾತಾಡಿ ಹೋದನಂತರ ಈವರೆಗೂ ಮತ್ತೆ ಅವಳ ದರ್ಶನವಾಗಿರಲಿಲ್ಲ. ತನ್ನ ಗತಿ ಏನಾಗುವುದೋ ಎಂದು ಅಂಗಾತಬಿದ್ದ ಅಕ್ಕಳಿಯ ಹಾಗೆ ಚಡಪಡಿಸಿಕೊಂಡಿದ್ದ ಆಕೆಯ ಇದಿರಿಗೆ ಇಂದು ಅಕಸ್ಮಾತ್ತಾಗಿ ಅಜ್ಞಾತಾದೇವಿ, ವಿರಕ್ತ ವೇಷದ ಅದೇ ಚಿನ್ನಾದೇವಿ, ಪ್ರತ್ಯಕ್ಷಳಾಗಿ, "ಅಜ್ಜೀರಾಣಿ! ಚೆನ್ನಾಗಿರುವಿರಾ?" ಎಂದು ಕೇಳುತ್ತಾ, ಬಾಗಿಲನ್ನು ಹಾಕಿ, ತಿಪ್ಪಾಂಬೆಗೆ ಮಾತಾಡಗೊಡದೆ, ಏನೋ ಬಹು ಆತುರದಿಂದ, ಮತ್ತೂ ತಾನೇ ಮಾತಾಡಲಾರಂಭಿಸಿದಳು: "ಆಹಾ! ನಿಮ್ಮನ್ನು ನೋಡಿ ತುಂಬಾ ದಿನವಾಯಿತು. ನಾನು ನನ್ನ ಮಗಳನ್ನು ಹುಡುಕಲಿಕ್ಕಾಗಿ ರಾಯಚೂರಿನ ವರೆಗೆ ಹೋದವಳು ಈಗತಾನೇ ಬಂದೆ. ನಾನು ನಿಮ್ಮನ್ನು ಎಲ್ಲಿಗೂ ಹೊರಗೆ ಬಿಡದೆ ಕಟ್ಟೆಚ್ಚರದಿಂದ ಕಾಯಬೇಕೆಂದು ನನ್ನ

ಸೇವಕರಿಗೆ ಆಜ್ಞೆ ಮಾಡಿದ್ದು ಎಷ್ಟು ಒಳ್ಳೆಯದಾಯಿತು ಗೊತ್ತೋ? ಇಲ್ಲದಿದ್ದರೆ ಇಷ್ಟುಹೊತ್ತಿಗೆ ನೀವು ದೊಡ್ಡ ಗಂಡಾಂತರದಲ್ಲಿ ಸಿಕ್ಕಿಬೀಳುತ್ತಿದ್ದಿರಿ. ಇದನ್ನು ನಿಮಗೆ ತಿಳಿಸಲಿಕ್ಕಾಗಿಯೇ ನಾನೀಗ ಅವಸರದಿಂದ ಓಡಿಬಂದಿದ್ದೇನೆ. ಇನ್ನು ನೀವೂ ನಾನೂ ಬೇರೆ ಪ್ರದೇಶದಲ್ಲಿ ಅಡಗಿಕೊಳ್ಳಬೇಕಾಗಿದೆ" ಎಂದಂದು ಸ್ವಲ್ಪ ಉಸಿರುಬಿಡಲಿಕ್ಕಾಗಿ ನಿಲ್ಲಿಸಿದಳು.

ತಿಪ್ಪಾಂಬೆ ಕುತೂಹಲದಿಂದ ಕಣ್ಣುಗಳನ್ನರಳಿಸಿ "ಅದೇನು ?" ಎಂದಳು.

"ಆ ಆಶ್ಚರ್ಯವನ್ನೇನು ಹೇಳಲಿ ಅವ್ವ? ನಿಮ್ಮನ್ನು ಹುಡುಕಿಕೊಂಡು ಕೃಷ್ಣದೇವರಾಯನ ಗೂಢಚಾರರು ಈ ಗಿರೀಸರದೊಳಗೆಲ್ಲಾ ತಿರುಗಾಡುತ್ತಿದ್ದಾರೆ. ನೀವು ಮಾಡಿದ್ದೆಲ್ಲಾ ಬಟ್ಟ ಬಯಲಾಗಿ ಹೋಗಿದೆ. ನೀವೇ ನಾಗಲಾದೇವಿಯನ್ನೂ ದಾಸಿಯನ್ನೂ ಹತ್ಯ ಮಾಡಿದಿರೆಂದು ಗೊತ್ತಾಗಿ ಹೋಗಿದೆ. ನಗರದೊಳಗೆಲ್ಲಾ ಇದೇ ಕೋಲಾಹಲವಾಗಿದೆ. ಅದ್ಭುತವಾದ ಸಂಗತಿ. ಕೊಲೆಯಾದವರೇ ನಿಜ ಸಂಗತಿಯನ್ನು ಹೇಳಿದ್ದಾರಂತೆ!...."

"ಅದು ಹೇಗೆ? ಸತ್ತುಹೋದವರು ಬದುಕುವುದು ಹೇಗೆ?"

"ಮೆಲ್ಲನೆ ಮಾತಾಡಿ ಅಜ್ಜೀರಾಣಿ! ಸತ್ತವರೇ ಬದುಕಿದ್ದಾರಂತೆ!"

"ಏನೇನು ?"

"ಹೌದು. ಕೆಲವರನ್ನುವರು, ನಾಗಲಾದೇವಿ ಬದುಕಿರುತ್ತಾಳೆಂದು. ಇನ್ನು ಕೆಲವರು ಆ ದಾಸಿ ಸಾಯಲಿಲ್ಲವೆನ್ನುತ್ತಾರೆ. ಮತ್ತೆ ಕೆಲವರು ಇಬ್ಬರೂ ಬದುಕಿದ್ದಾರೆ, ಸಾಯುವ ಹಾಗೆ ಗಾಯವಾಗಲಿಲ್ಲ. ಮೂರು ದಿನ ಮೂರ್ಛಾವಸ್ಥೆಯಲ್ಲಿದ್ದು, ಯಾರೋ ಒಬ್ಬ ಸಾಧುವಿನ ಔಷಧೋಪಚಾರದಿಂದ ಬದುಕಿ ಸುಖವಾಗಿದ್ದಾರೆ ಎನ್ನುವರು."

"ಎಲ್ಲವೂ ಸುಳ್ಳು."

"ನನಗೇನೋ ನಿಮ್ಮ ಕಾರ್ಯದಲ್ಲಿ ಸ್ವಲ್ಪ ಸಂಶಯವುಂಟು ಅಜ್ಜೀರಾಣಿ. ನೀವು ಎಷ್ಟಾದರೂ ಮುದುಕರು. ಕೊಲೆ ಮಾಡಬೇಕಾದರೆ ಒಳ್ಳೇ ಬಲ ಬೇಕಷ್ಟೆ? ಪರಂತು ನಿಮ್ಮ ಕೈಯಿಂದ ಪ್ರಯೋಗಿಸಲ್ಪಟ್ಟ ಆಯುಧವು ಸರಿಯಾಗಿ ಕೆಲಸ ಮುಗಿಸಿರಲಿಕ್ಕಿಲ್ಲ."

ತಿಪ್ಪಾಂಬೆ ಕರ್ಕಶ ಧ್ವನಿಯಿಂದ "ನನಗೆ ಬಲವಿಲ್ಲವೆ? ತೊಂಭತ್ತು ವರ್ಷದ ಹಣ್ಣುಮುದುಕಿಯಾದರೂ ಇಪ್ಪತ್ತು ವರ್ಷದ ತರುಣಿಯ ಬಲವು ನನಗುಂಟು. ನಿನಗಿಂತಲೂ ನಾಲ್ಕು ಪಾಲು ಹೆಚ್ಚಾದ ಬಲವು ನನಗುಂಟು. ಆ ಚಾಂಡಾಲಿಯ ಎದೆಯೊಳಗೆ ನಾನು ಕಠಾರಿಯನ್ನು ಬುಡಮುಟ್ಟ ನೆಟ್ಟು ಕೊಂದು, ಆ ದಾಸಿಯ ಬೆನ್ನಿನೊಳಗೆ ಕತ್ತಿಯನ್ನು ಹೊಟ್ಟೆಯಲ್ಲಿ ಹೊರಬರುವ ಹಾಗೆ ತೂರಿಸಿದಾಗ, ಮಹಾ ಚೋರರಾಣಿಯಾದ ನಿನ್ನನ್ನೆ ಕುಟ್ಟಿ ಬೀಳಿಸಲಿಲ್ಲವೇ ನಾನು ?" ಎಂದಳು.

ಆಗ ಆ ಕೋಣೆಯ ಹೊರಗಿನಿಂದ ಒತ್ತಿ ಜೋರಟ ಒಂದು ಬಿಸಿ ಶ್ವಾಸದ ಶಬ್ದವು ಆವೇಶದಲ್ಲಿದ್ದ ತಿಪ್ಪಾಂಬೆಗೆ ಕೇಳಿಸಲಿಲ್ಲ.

ಚಿನ್ನಾದೇವಿಯೆಂದಳು: "ಹಾಗಾದರೆ ಅವರು ಬದುಕಲು ಬೇರೆ ಕಾರಣವೇನಿದ್ದೀತು? ಅಜ್ಜೀರಾಣಿ, ಕೊಲೆ ಮಾಡುವುದಕ್ಕೆ ಮುಂಚೆ ನೀವು ಆ ಯವನ ಸಿಪಾಯಿಗೊಂದು ಪತ್ರವನ್ನು ಬರೆದು ಕೊಟ್ಟಿರಲ್ಲಾ? ಅದನ್ನು ನಾಗಲಾದೇವಿ ಕಸಿದುಕೊಂಡಳಲ್ಲಾ? ಅದರಿಂದೇನಾದರೂ ನಿಮ್ಮ ಗುಟ್ಟು ಬಯಲಾಗಿರಬಹುದೆ?"

"ಆ ಪತ್ರವನ್ನು ನಾನು ಆ ಕೂಡಲೇ ಸುಟ್ಟು ಬೂದಿ ಮಾಡಿದ್ದೆನು!...."

"ಒಮ್ಮೊಮ್ಮೆ ಬೂದಿಯೂ ಅಕ್ಷರಗಳನ್ನು ತೋರಿಸಿ ಬಿಡುವುದುಂಟು. ನೀವು ಆ ಪತ್ರದಲ್ಲಿ ಕೊಲೆಗೆ ಸಂಬಂಧಪಟ್ಟ ವಿಚಾರವೇನಾದರೂ ಬರೆದಿದ್ದಿರೇನು?"

"ಅದೆಲ್ಲಾ ಇಲ್ಲ. ವಿಜಯನಗರವನ್ನೇ ಅದಿಲ್‌ಷಹನ ವಶಪಡಿಸುವುದರಲ್ಲಿ ನನ್ನ ಜವಾಬ್ದಾರಿಕೆಯನ್ನು ಬರೆದಿದ್ದೆ. ಅಷ್ಟೇ. ಅದರ ಬೂದಿ ಕೂಡಾ ಹಾರಿಸಿಬಿಟ್ಟಿದ್ದೇನೆ."

"ಹಾಗಾದರೆ ಜನರ ಮಾತನ್ನು ನಂಬಲೇಬೇಕು. ಬೆಂಕಿಯಿಲ್ಲದೆ ಹೊಗೆ ಬಂದೀತೆ? ಅವ್ವಾ, ಚೌರ್ಯವೃತ್ತಿಯಲ್ಲಿ ಒಳ್ಳೇ ಪಳಗಿದವಳಾದ ನಾನು ಕೆಲವೊಂದು ಮಂತ್ರೌಷಧಿಗಳನ್ನು ಬಲ್ಲೆನು. ಮೃತಸಂಜೀವಿನೀ ಎಂಬೊಂದು ಮೂಲಿಕೆಯನ್ನು ನೀವೂ ಕೇಳಿರಬಹುದು.

ಸರಿಯಾದ ಗಾಯವಾಗದೆ ದೇಹವು ಮೂರ್ಛಾಕ್ರಾಂತವಾಗಿದ್ದರೆ, ಜೀವವು ಮೂರುದಿನಗಳ ತನಕ ಹೊರಟು ಹೋಗದೆ ಶಿರಸ್ಸಿನೊಳಗೇ ಇರುತ್ತದೆ. ಅದಕ್ಕೇ ಯುದ್ಧರಂಗದಲ್ಲಿ ಕುತ್ತಿಗೆಯನ್ನೇ ಕಡಿದು ಹಾಕುವುದು. ಆ ಮೂರು ದಿನದೊಳಗೆ ಮೃತಸಂಜೀವಿನಿಯನ್ನು ಉಪಯೋಗಿಸಿದರೆ, ಸತ್ತವರು ನಿಶ್ಚಯವಾಗಿ ಬದುಕುವರು. ಅವರು ಸರಿಯಾಗಿ ಖೂನಿಯಾಗಿ ಹೋಗಿರುವರೆಂಬ ಬಗ್ಗೆ ನಿಮಗೆ ನಂಬುಗೆಯುಂಟೆ?"

"ಸಂದೇಹವೇ ಇಲ್ಲ. ನನ್ನ ಇದೇ ಕೈಯಿಂದ ಹರಿತವಾದ ಕಠಾರಿಯನ್ನು ಬೆನ್ನಿನಲ್ಲಿ ಕಾಣುವ ಹಾಗೆ ನಾಗಲೆಯ ಎದೆಯೊಳಗೆ ಛುಳ್ಳೆಂತ ಹೊಗಿಸಿದ್ದೇನೆ. ನನ್ನ ಕತ್ತಿಯ ಶಕ್ತಿಯಿಂದ ಆ ದರಿದ್ರದಾಸಿಯ ಹೊಟ್ಟೆಯೇ ಸೀಳಿಹೋಗಿದೆ. ಇಷ್ಟರೊಳಗೆ ಅವರ ಜೀವಗಳು ಯಾವ ಹಾಳು ಜನ್ಮವನ್ನೆತ್ತಿದುವೊ? ಮೂಢಳೇ, ನಿನ್ನನ್ನು ಯಾರೋ ದಬಾಯಿಸಿರಬೇಕು!"

ತಿಪ್ಪಾಂಬೆ ಭಯಂಕರವಾದ ಮುಖಭಾವದಿಂದ ಗರ್ಜಿಸಿ ಹೇಳುತ್ತಿದ್ದಾಗ ಹೊರಗಿನಿಂದ ಇದೆಲ್ಲವನ್ನೂ ಕೇಳುತ್ತಿದ್ದ ಕೃಷ್ಣದೇವರಾಯನು ಇನ್ನು ಸಹಿಸದೆ, "ಓ ಚಾಂಡಾಲಿ!...." ಎಂದು ರೋಷದಿಂದ ಕೂಗುತ್ತ ಕಂಪಿತಗಾತ್ರನಾಗಿ ಒಳಗೆ ಹೊಕ್ಕನು. ಅವನ ಹಿಂದೆಯೇ ತಿಮ್ಮರಸನೂ ಅಚ್ಯುತರಾಯನೂ ಮತ್ತೆ ಕೆಲವು ಮಹನೀಯರೂ ತೋರಿದರು.

ತಿಪ್ಪಾಂಬೆ ಅವಾಕ್ಕಾಗಿ ನಿಂತಳು.

ರಾಯನು ತಿಪ್ಪಾಂಬೆಯನ್ನು ಕೆಂಗಣ್ಣಿನಿಂದ ನೋಡುತ್ತ "ಕೊಲೆಪಾತಕಿ! ನಿನ್ನ ಕ್ರೂರ ಕೈಗಳಿಗೆ ಈ ಜಪಮಾಲೆಯ ಕೇಡು ಬೇರೆಯೆ? ಕುಲಕುಠಾರಿಣಿಯಾದ ನಿನ್ನನ್ನು ಇಲ್ಲಿಯೇ ಬಲಿಹಾಕಿ ನನ್ನ ತಾಯಿಯ ಆತ್ಮಕ್ಕೆ ಶಾಂತಿ ಮಾಡುವೆನು" ಎಂದು ಘುಡಿಘುಡಿಸುತ್ತ ಒರೆಯಿಂದ ಖಡ್ಗವನ್ನು ಸೆಳೆದನು.

ಒಡನೆಯೇ ಚಿನ್ನಾದೇವಿ ಅವನ ಕೈಯನ್ನು ಗಟ್ಟಿಯಾಗಿ ಹಿಡಿದು "ಬೇಡ ಬೇಡ! ಸ್ತ್ರೀ ಹತ್ಯವು ಮಹಾ ಪಾತಕ! ಪಾತಕ!!" ಎಂದು ಕೂಗಿದಳು.

ರಾಯನು ಕೈ ಕೈ ಹಿಸುಕುತ್ತ, "ಪಾತಕ! ಈ ಪಾಪಿ

ಯನ್ನು ತುಂಡು ತುಂಡು ಮಾಡಿ ಕೊಲ್ಲುವುದರಿಂದ ಪುಣ್ಯವುಂಟು. ಪುಣ್ಯ! ಅಯ್ಯೋ! ಅಪ್ಪಾಜಿಯ ಬುದ್ಧಿವಂತಿಯನ್ನು ಕೇಳದೆ, ಈ ಕುಲಘಾತಕಿಯ ಮೇಲೆ ಕರುಣೆಯನ್ನು ತೋರಿಸಿ, ನಿರ್ಬಂಧಿಸದೆ ಬಿಟ್ಟದ್ದೇ ನನ್ನ ತಾಯಿಗೆ ಮೃತ್ಯುವಾಯಿತು. ನಿರಪರಾಧಿಗಳಾದ ನನ್ನ ತಾಯಿಯನ್ನೂ ಆ ದಾಸಿಯನ್ನೂ ಕೊಂದು ನೀನು ಯಾವ ಲಾಭವನ್ನು ಪಡೆದಿ? ನಿನ್ನ ವೈರಿಯಾಗಿರುವವನು ನಾನು. ನಾನು ಇನ್ನೂ ಬದುಕಿರುವುದರಿಂದ ನಿನ್ನ ಕಾರ್ಯವು ಸಂಪೂರ್ಣವಾಗಿಲ್ಲ. ಇಗೋ ಈ ಕತ್ತಿಯನ್ನು ತೆಗೆದುಕೋ" ಎಂದು ಕತ್ತಿಯನ್ನು ತಿಪ್ಪಾಂಬೆಯ ಮುಂದೆ ಎಸೆದು, "ಮಾರೀ ಮಾತೆಯೆ! ನೀನು ನನ್ನ ತಾಯಿಯನ್ನು ಯಾವ ರೀತಿಯಾಗಿ ಹತ್ಯಮಾಡಿದಿಯೋ ಹಾಗೆಯೇ ನನ್ನನ್ನೂ ಕೊಂದು ಶಾಂತಿಯಿಂದ ಸಾಯು!" ಎನ್ನುತ್ತಾ ಎದೆಯನ್ನು ಮುಂದಕ್ಕೆ ಚಾಚಿದನು.

"ಹಾಹಾ! ಬೇಡ ಬೇಡ!" ಎಂದು ಚಿನ್ನಾದೇವಿಯೂ ತಿಮ್ಮರಸನೂ ಗಾಬರಿಯಿಂದ ಕೂಗಿ ಚಟಕ್ಕನೆ ರಾಯನನ್ನು ಹಿಂದಕ್ಕೆಳೆದರು. ಏಕೆಂದರೆ, ತಿಪ್ಪಾಂಬೆ ರಾಯನೆಸೆದ ಖಡ್ಗವನ್ನು ಗಭಕ್ಕನೆ ಎತ್ತಿಕೊಂಡು ಗೆಲುವಿನಿಂದ, ಅದೊಂದು ಪೈಶಾಚಕ ಆವೇಶದಿಂದ ನಿಂತಿದ್ದಳು. ವಿದ್ಯುದ್ವೇಗದಿಂದ ಗೋಡೆಯ ಬಳಿಗೆ ಹಾರಿ ನಿಂತಿದ್ದಳು. ಅವಡುಗಚ್ಚಿಕೊಂಡು ರಾಯನನ್ನು ದುರುಗುಟ್ಟಿ ನೋಡುತ್ತ ಬಿಸಿಬಿಸಿಯಾದ ದೀರ್ಘಶ್ವಾಸವನ್ನು ಬಿಡುತ್ತಿದ್ದಳು. ಅವಳ ಆ ಭಯಂಕರ ಮೂರ್ತಿಯ ಕೈಯಿಂದ ಆ ದೀರ್ಘವಾದ ಕೃಪಾಣವನ್ನು ಕಿತ್ತುಕೊಳ್ಳುವ ಧೈರ್ಯವು ಯಾರಿಗೂ ಬಾರದೇಹೋಯಿತು. ಅವಳೀಗ ಜೀವದ ಹಂಗು ತೊರೆದೇ ನಿಂತಿದ್ದಾಳೆಂದು ಎಲ್ಲರಿಗೂ ಗೊತ್ತು. ಅಂತಹವಳು ಏನು ತಾನೇ ಮಾಡಲಿಕ್ಕಿಲ್ಲ? ಅವಳ ಇದಿರಿನಲ್ಲಿ ಮಂಚವೊಂದು ಅಡ್ಡವಾಗಿತ್ತು ಅಷ್ಟೇ.

"ಬಾ ಇದಿರು! ನನ್ನ ಆಜನ್ಮವೈರಿಯಾದ ನಿನ್ನನ್ನು ಕೊಲ್ಲದೆ ನನ್ನ ಕಾರ್ಯವು ಮುಗಿಯುವುದಿಲ್ಲ. ನನ್ನ ಮಗನಿಗೆ ಮೋಕೆಯ ಕಣ್ಣುಗಳನ್ನು ತೋರಿಸಿ ಮೋಸಪಡಿಸಿದ ನಿನ್ನನ್ನೂ ತಿಮ್ಮರಸನನ್ನೂ ಕೊಲ್ಲದೆ

ನನ್ನ ಹೃದಯಕ್ಕೂ ನನ್ನ ಮಗನ ಹೃದಯಕ್ಕೂ ಶಾಂತಿಯಾಗದು. ಬಾರೋ ಮುಂದೆ!" ಎಂದು ತಿಪ್ಪಾಂಬೆ ಕ್ರೂರವಾದೊಂದು ಅರಣ್ಯ ಮೃಗದಂತೆ ಭೈರವಸ್ವರೂಪಳಾಗಿ ಖಡ್ಗವನ್ನು ಕುಣಿಸುತ್ತಿದ್ದಳು.

ರಾಯನನ್ನು ಎಳೆದುಕೊಂಡು ಎಲ್ಲರೂ ಹೊರಗೆ ಹಾರಿದರು. ಚಿನ್ನಾದೇವಿಯೂ ಹೊರಗೆ ಹಾರುವಾಗ ತಿಪ್ಪಾಂಬೆ ಆ ಕತ್ತಿಯನ್ನು ವೇಗದಿಂದೆಸೆದಳು. ಅಷ್ಟರೊಳಗೆ ಚಿನ್ನಾದೇವಿ ಬಾಗಿಲು ಹಾಕಿ ಹೊರಗೆ ಪಾರಾಗಿಬಿಟ್ಟಿದ್ದಳು. ಆ ಕತ್ತಿ ಬಾಗಿಲಿಗೆ ತಾಗಿ ಝಣಝಣಿಸಿಕೊಂಡು ಕೆಳಗೆ ಬಿದ್ದಿತು. "ಅಬ್ಬಾ! ವೃದ್ಧ ಹಂತಕಿಯೆ! ನಿನ್ನನ್ನು ಕ್ರೂರ ಮೃಗದಂತೆ ಹಿಡಿದು ಬಂಧಿಸಬೇಕಲ್ಲದೆ ಬೇರೆ ಮಾರ್ಗವಿಲ್ಲ. ಬಿದ್ದಿರು ಮೃಗವೇ!" ಎಂದು ಚಿನ್ನಾದೇವಿ ಕೂಗಿ ಸಾರಿದಳು.

ತಿಪ್ಪಾಂಬೆ ತಾನೇ ತಾನಾಗಿ ಅಟ್ಟಹಾಸ ಮಾಡುತ್ತ ಧಾವಿಸಿ ಆ ಕತ್ತಿಯನ್ನು ಪ್ರಿಯವಾದೊಂದು ಹಣ್ಣಿನಂತೆ ಬಾಚಿ ಎತ್ತಿಕೊಂಡು ದೊಡ್ಡದೊಂದು ಪೈಶಾಚಿಕ ನಗುವನ್ನು ನಕ್ಕಳು. "ಹೇಡಿಗಳು! ಓಡಿದರು! ಒಹೊಹ್ಹೊ! ಬಿಡುವೆನೇ! ಬಂಧಿಸುವರೇ ನನ್ನನ್ನು! ನಾನು ರಾಣಿ! ಮಹಾರಾಣಿ ನಾನು! ಬಿಡುವೆನೇ ನಿಮ್ಮನ್ನು! ಪಿಶಾಚಿಯಾಗಿ ಹಿಡಿಯುವೆನು. ಓ—" ಓಡಿಬಂದು ಗೋಡೆಗೆ ತಲೆಯನ್ನು ತಾಗಿಸಿಕೊಂಡು, "ಹೇ! ಯಾರೋ ನೀನು ನನಗಡ್ಡವಾಗಿ!" ಎಂದು ಗೋಡೆಗೆ ಕತ್ತಿಯಿಂದ ಹೊಡೆದಳು. ಬಾಗಿಲನ್ನು ಗುದ್ದಿದಳು! ಅಪ್ಪಳಿಸಿದಳು. ಅವಳ ದೇಹವು ಗಾಯಗೊಂಡಿತು. ರಕ್ತವು ತೋರಿತು. ಕೂಡಲೇ ಇನ್ನಷ್ಟು ಕೆರಳಿದಳು. "ಈ ಹಾಳು ನಾಲಗೆ! ರಕ್ತ! ಇದು ಈ ನಾಲಗೆ ಎಲ್ಲವನ್ನೂ ಹೇಳಿತು!" ನಾಲಗೆಯನ್ನೆಳೆದು ಕತ್ತಿಯಿಂದ ಹರಿದುಕೊಂಡಳು! ತನ್ನನ್ನು ತಾನೇ ಘಾತಿಸಿಕೊಂಡಳು. ಅವಳಿಗೆ ರಕ್ತದ ಹುಚ್ಚು ಹಿಡಿಯಿತು. ಬಾಯಿಯಿಂದ ಏನೇನೋ ಅಸ್ಪಷ್ಟವಾಗಿ ಅರಚುತ್ತಾ ಕಡೆಗೆ ಆ ಹರಿತ ಖಡ್ಗವನ್ನು ತನ್ನೆದೆಗೇ ತೂರಿಸಿಕೊಂಡು ಭೂತಲಶಾಯಿನಿಯಾದಳು! ಅವಳ ದೀರ್ಘಾಯು ಇಹರಂಗದಿಂದ ಹೊರಟುಹೋಗುತ್ತಿರಲು, ರಕ್ತಸಿಕ್ತವಾದ ಅವಳ ಜಡ ದೇಹವು ರಕ್ತದ ಕೆರೆಯಲ್ಲಿಯೇ ಉರುಳಿತು.

ವೀರರುದ್ರ, ರಾಮಯಾಮಾತ್ಯ, ರುಚೀದೇವಿಯರ ಸೇರಿಕೆ ಯಿಂದ ಬರೆಯಲ್ಪಟ್ಟ ಪತ್ರವನ್ನು ನೋಡುತ್ತಲೇ ಪ್ರತಾಪರುದ್ರ ಗಜಪತಿ, ರಾಣೀ ಪರಿವಾರ ಸಮೇತನಾಗಿ ಕಟಕನಗರಿಯಿಂದ ಹೊರಟು ಆ ಶೈಲಭವನಕ್ಕೆ ಬಂದು ಸೇರಿದನು. ಅಲ್ಲಿ ವೀರರುದ್ರನೂ ರಾಮಯಾ ಮಾತ್ಯನೂ, ನಡೆದ ಸಂಗತಿಗಳನ್ನು ಅವನಿಗೆ ವಿವರಿಸಿದರು. ಕೇಳಿ ಪ್ರತಾಪರುದ್ರನು ಬಹಳ ಮೋಸಹೋದಂತಾದನು. ವೀರರುದ್ರ ರಾಮಯಾಮಾತ್ಯರ ಬೋಧನೆಯಿಂದ ಕಡೆಗೆ ಅವನ ಮನಸ್ಸು ತಿರುಗಿತು. ದೈವಯೋಗದಿಂದ ದೃಢಸಂಬಂಧಿತನಾದ ಕೃಷ್ಣದೇವ ರಾಯನ ಮೇಲೆ ಇನ್ನು ವೈರವನ್ನು ಸಾಧಿಸಿ ಪ್ರಯೋಜನವೇನಿದೆ? ಪ್ರತಾಪರುದ್ರನು ನಿರ್ಮಲ ಮನಸ್ಕನಾಗಿ 'ಕಾಲಾಯ ತಸ್ಮೈ ನಮಃ' ಎಂದು ರುಚೀಕಲ್ಯಾಣವನ್ನು ಕೃಷ್ಣದೇವರಾಯನೊಡನೆಯೇ ನೆರವೇರಿ ಸುವ ನಿಶ್ಚಯಮಾಡಿದನು.

ಹೀಗೆ ಗಜಪತಿ ನರಪತಿಗಳ ಸತ್ಸಂಗಮವಾದ ಮೇಲೆ ಆ ಸೊಂಡೂರಿನ ಶೈಲಭವನದಲ್ಲೊಂದು ಪ್ರಚಂಡ ಸಭೆ ನೆರೆಯಿಸಲ್ಪಟ್ಟಿತು. ಆ ಸಭೆಯ ಅಗ್ರಸ್ಥಾನದಲ್ಲಿ ನರಪತಿ ಕೃಷ್ಣದೇವರಾಯನೂ ಉಭಯ ಪಾರ್ಶ್ವಗಳಲ್ಲಿ ಉಭಯ ಗಜಪತಿ ಗಜಪತಿ ನಂದಿನಿಯರೂ, ಕುಮಾರಿ ತಿರುಮಲೆಯೂ, ಉಭಯ ಮಂತ್ರಿಶಿಖಾಮಣಿಗಳೂ ಬೇರೆ ತೋರುವ

ಶೋಭೆ ಅತ್ಯಂತ ಉದಾತ್ತವಾಗಿತ್ತು. ವಿಜಯನಗರದ ಬಂದೀಖಾನೆಯೊಳಗಿದ್ದ ವೀರಭದ್ರ ಕುಮಾರನೂ, ವೀರರುದ್ರನ ದ್ವಿತೀಯ ರಾಣಿಯೂ, ಅವಳ ಮಗಳು ತಿರುಮಲೆಯ ಓರಗೆಯವಳಾದ ಮುಕ್ತಾ ಕುಮಾರಿಯೂ ಬಂಧಮುಕ್ತರಾಗಿ ಬಂದು ಅಲ್ಲಿ ಶೋಭಿಸುತ್ತಿದ್ದರು. ಚಿನ್ನಾದೇವಿಯ ಸಾವಿರ ಸಂಖ್ಯೆಯ ಅಜ್ಞಾತ ಬಂಧುಗಳೂ, ಬಂಧುನಾಯಕರೂ, ವಿಜಯನಗರದ ನಾಗರಿಕ ಪ್ರಮುಖರೂ, ಸೇನಾನಾಯಕರೂ, ಪೌರರೂ, ಪ್ರಜೆಗಳೂ ಕುತೂಹಲದಿಂದಲೂ ಸಂಭ್ರಮದಿಂದಲೂ ನೆರೆದಿದ್ದರು. ಎಲ್ಲರ ಮುಖವೂ ಆನಂದೋತ್ಸಾಹದಿಂದ ತುಂಬಿತ್ತು. ಚಿನ್ನಾದೇವಿ ಇನ್ನೂ ವಿರಕ್ತವೇಷದಲ್ಲಿಯೇ ಒಪ್ಪುತ್ತಿದ್ದಳು. ಆದುದರಿಂದ ಅಪರಿಚಿತರೆಲ್ಲರೂ ವಿಶೇಷ ಕಳೆಯಿಂದೊಪ್ಪುವ ಅವಳನ್ನು ಕೌತುಕದಿಂದ ನೋಡುತ್ತಿದ್ದರು.

ಜಯರವ ಕಲ್ಲೋಲಗಳು ಅಡಗಿದ ಮೇಲೆ ಚಿನ್ನಾದೇವಿ ಅಜ್ಞಾತ ಬಂಧುಗಳನ್ನು ಉದ್ದೇಶಿಸಿ ಕೆಲವು ಮಾತುಗಳನ್ನಾಡಿದಳು. ತನ್ನ ನಿಜವಾದ ಗುಟ್ಟನ್ನು ಆ ಚೋರನಾಯಕರಿಗೆ ಅವಳು ಅದುವರೆಗೂ ಹೇಳಿರಲಿಲ್ಲ. ದುಷ್ಟ ರಾಜರನ್ನು, ಕೆಟ್ಟ ಧನಿಕರನ್ನು ಭಂಗಗೊಳಿಸುತ್ತ ಜನನಾಯಕತೆಯನ್ನು ನೆಲೆನಾಟಿಸುವ ಗುರಿಯನ್ನಿಟ್ಟುಕೊಂಡು ಕೆಲಸ ಮಾಡುವಂತೆ ಅವರನ್ನು ಅವಳು ನಡೆಯಿಸಿಕೊಂಡು ಬಂದಿದ್ದಳು. ಅದಕ್ಕಾಗಿ ಅವಳು ಅವರಿಂದ ಕ್ಷಮೆಯನ್ನು ಕೇಳಿಕೊಂಡು, ಉಳಿದುದನ್ನು ತಿಮ್ಮರಸರು ವಿಶದೀಕರಿಸುವರೆಂದು ಹೇಳಿ ಸುಮ್ಮನಾದಳು.

ಆಮೇಲೆ ಚೋರನಾಯಕ ಮಾದರಸನು ಎದ್ದು ಚಿನ್ನಾದೇವಿಗೆ ಉತ್ತರ ಕೊಡುತ್ತ, ಅವಳ ಯೋಗವಾಗುವುದಕ್ಕೆ ಮೊದಲು, ತನ್ನ ಚೋರವೃಂದವು ಕ್ರೂರವಾದ ಕಾಡುಮೃಗಗಳ ಜಾತಿಯದಾಗಿತ್ತೆಂದೂ, ಅವಳ ಯೋಗದಿಂದಾಗಿ ಈಗ ತನಗೂ ತನ್ನ ವೃಂದಕ್ಕೂ, ಸಭ್ಯತೆ, ಗೌರವ, ಸಮುದ್ದೇಶಗಳು ಪ್ರಾಪ್ತವಾದುವೆಂದೂ ಅದಕ್ಕಾಗಿ ತಾವೆಲ್ಲರೂ ಅತ್ಯಂತ ಕೃತಜ್ಞರಾಗಿ, ಆಜನ್ಮ ಅವಳ ಆಜ್ಞಾಧೀನರಾಗಿಯೇ ಇರುವೆವೆಂದೂ ಹೇಳಿ ಮುಗಿಸಿದನು.

ಅನಂತರ ತಿಮ್ಮರಸನು ಎಲ್ಲರನ್ನೂ ಸಂಬೋಧಿಸಿ ಕೃಷ್ಣದೇವ

ರಾಯನ ಪೂರ್ವಚರಿತ್ರೆ, ಅಜ್ಞಾತ ಕುಲೀನೆಯೊಂದಿಗಾದ ಅವನ ವಿವಾಹ, ನಂತರ ಪತ್ನೀತ್ಯಾಗ, ಪಟ್ಟಾಭಿಷೇಕ, ಚಿನ್ನಾದೇವಿಯ ಭ್ರಾಂತಿ, ಅರ್ಧದಲ್ಲಿ ಬಿಟ್ಟು ಬಂದ ಕಳಿಂಗ ಈಗ ಪೂರ್ಣವಾದ ವಿಧಾನ, ಚಿನ್ನಾದೇವಿಯೇ ರುಚೀದೇವಿಯನ್ನು ರಾಯನಿಗೆ ಕಲ್ಯಾಣ ಮಾಡಿಸುವ ಕೌತುಕ, ಮೊದಲಾದ ವೃತ್ತಾಂತಗಳನ್ನು ಸಂಕ್ಷೇಪ ವಾಗಿಯೂ ಸುಂದರವಾಗಿಯೂ ಅರ್ಥಪುಷ್ಟವಾಗಿಯೂ ವಿವರಿಸಿ. ಸಭೆಯೊಳಗೆಲ್ಲಾ ಸಂತೋಷ ಸಂಭ್ರಮಗಳ ತೆರೆಗಳನ್ನು ಏಳಿಸಿ ಬಿಟ್ಟನು.

ರಾಮಯಾಮಾತ್ಯನ ವಿಷಯವಾಗಿ ಯಾರಿಗೂ ಕಿಂಚಿದ್ಭಾವ ವುಂಟಾಗದಂತೆ, "ಮಹಾ ಮೇಧಾವಿಗಳಾದ ರಾಮಯಾಮಾತ್ಯರಿಂದಾಗಿ ಅಜ್ಞಾತಾದೇವಿಯೇ ವೀರರುದ್ರ ಗಜರಾಜರ ಹಿರೀಕುಮಾರಿಯೆಂಬುದು ಸಿದ್ಧವಾಯಿತು. ಸಾಕ್ಷಾತ್ ವೀರರುದ್ರರೇ ಇಲ್ಲಿರುವಾಗ, ಇನ್ನು ಇದರಲ್ಲಿ ಸಂದೇಹವೇ ಇಲ್ಲ" ಎಂದು ಉಪಾಯದಿಂದ ಮಾತಾಡಿದನು.

"ನನ್ನದೊಂದು ಅಜ್ಞಾನದೋಷದಿಂದಲೇ ಚಿನ್ನಾದೇವಿಯ ವಂಶ ವೃತ್ತವು ಅಜ್ಞಾತವಾಗುವಂತಾಯಿತು. ಅದಕ್ಕಾಗಿ ನಾನು ಎಲ್ಲರ ಕ್ಷಮೆಯನ್ನೂ ಬೇಡುತ್ತೇನೆ" ಎಂದು ರಾಮಯಾಮಾತ್ಯನು ಪುಟ್ಟ ದೊಂದು ಭಾಷಣವನ್ನು ಮಾಡಿ ಪ್ರಾರ್ಥಿಸಿಕೊಂಡನು.

"ಇದರಲ್ಲಿ ನನ್ನ ಅವಿಚಾರವೂ ಸೇರಿಕೊಂಡಿದೆ. ನಿರಪರಾಧಿನಿ ಯಾದ ನನ್ನ ಹಿರಿಯ ರಾಣಿಯನ್ನು ನಾನು ತ್ಯಾಗಮಾಡಿ ಮಹಾ ಪಾಪಿಯಾದೆನು" ಎಂದನು ವೀರರುದ್ರ ಗಜಪತಿ.

ತದನಂತರ ತಿಮ್ಮರಸನು ಚಿನ್ನಾದೇವಿ, ಅಜ್ಞಾತಬಂಧು ವೃಂದ ದಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವನ್ನು ನೆಲೆಗೊಳಿಸಬೇಕೆಂದು ಉದ್ದೇಶ ವಿಟ್ಟುಕೊಂಡುದು ಸ್ತುತ್ಯವಾದುದೆಂದೂ, ರಾಜ್ಯವು ಪ್ರಜೆಗಳಿಗೇ ಸೇರಿದುದು, ರಾಜನು ದುಷ್ಟನಾದರೆ ಅವನನ್ನು ತೊಲಗಿಸುವ ಹಕ್ಕು ಪ್ರಜೆಗಳಿಗುಂಟೆಂದೂ ವಿವರಿಸಿ, ಕೃಷ್ಣದೇವರಾಯನು ಪ್ರಜೆಗಳ ಪ್ರತಿನಿಧಿಸಭೆಯನ್ನೇರ್ಪಡಿಸಿ, ಆ ಮೂಲಕವಾಗಿ ರಾಜ್ಯಭಾರ ಮಾಡುವ ನೆಂದೂ ಪ್ರಜೆಗಳಿಗೆ ಬೇಡವಾದರೆ ಅವರು ಸಿಂಹಾಸನವನ್ನು ತ್ಯಜಿಸಲೂ

ಸಿದ್ಧರಾಗಿರುವರೆಂದೂ ಸ್ಪಷ್ಟಪಡಿಸಿದನು.

ಅದಕ್ಕೆ ಉತ್ತರವಾಗಿ ಆ ಮಹಾಸಭೆಯೊಳಗಿನಿಂದ "ಸಾರ್ವಭೌಮ ಕೃಷ್ಣದೇವರಾಯರೇ ನಮ್ಮನ್ನಾಳಬೇಕು" ಎಂದು ಮೊಳಗು ಎದ್ದಿತು.

ಹೀಗೆ ಸಂತೋಷ ಸಂಭ್ರಮಗಳಿಂದ ಆ ಮಹಾಸಭೆ ಮುಕ್ತಾಯವಾದ ಮೇಲೆ ಆ ಶೈಲಭವನ ಪ್ರಾಂತದಿಂದ ಕೃಷ್ಣದೇವರಾಯನು ದೊಡ್ಡ ಮೆರವಣಿಗೆಯಾಗಿ ವಿಜಯನಗರವನ್ನು ಪ್ರವೇಶಮಾಡಿದನು. ಆಗ ಅವನ ಪಾರ್ಶ್ವದಲ್ಲಿ ಗ್ರಹಣಸೀಗಿದ ಚಂದ್ರನಂತೆ ರಾಣೀ ಚಿನ್ನಾದೇವಿ ಒಪ್ಪಿದಳು.

ಮತ್ತೆ ಬೇಗದಲ್ಲಿಯೇ ರುಚೀದೇವಿಯ ಕಲ್ಯಾಣ ಮಹೋತ್ಸವಕ್ಕೆ ಒಂದು ಶುಭದಿನವು ನಿಶ್ಚಯಿಸಲ್ಪಟ್ಟಿತು. ನಗರವೆಲ್ಲವೂ ಆಮೋದಾನಂದ ಸಂದೋಹಮಯವಾಗುತ್ತಿತ್ತು. ಎಲ್ಲೆಲ್ಲಿಯೂ ಹೊಸ ಹೊಸ ಶೃಂಗಾರವಾಗುತ್ತಿತ್ತು.

* * *

ಈ ಸಮಯದಲ್ಲಿ ಇಸ್ಮಾಯಿಲ್ ಅದಿಲ್‌ಷಹನಿಂದ ರಾಯನಿಗೊಂದು ಪತ್ರವು ಬಂದಿತು. ಅದರಲ್ಲಿ, ತನ್ನ ಕುಮಾರ ಮಾಲೂಖಾನನಿಗೆ ಮದುವೆ ಮಾಡುವ ಪ್ರಯುಕ್ತ ತರಿಸಿಟ್ಟುಕೊಂಡಿದ್ದ ಒಬ್ಬಳು ಹಿಂದೂ ಕನ್ಯೆಯನ್ನು, ಜಯರಾಮನೆಂಬ ಜಟ್ಟಿ ಅಪಹರಿಸಿಕೊಂಡು ಹೋಗಿ, ವಿಜಯನಗರದೊಳಗೆ ಅಡಗಿರುವನೆಂತಲೂ, ರಾಯನಿಗೂ ಅದಿಲ್‌ಷಹನಿಗೂ ಮಿತ್ರತ್ವದ ಒಪ್ಪಂದವಿರುವುದರಿಂದ, ಆ ಮಿತ್ರಧರ್ಮಾನುಸಾರವಾಗಿ ಆ ಕನ್ಯೆಯನ್ನು ಕೂಡಲೇ ತನ್ನೆಡೆಗೆ ಕಳುಹಿಸಿಕೊಡದಿದ್ದರೆ ತಕ್ಕ ಪರಿಹಾರವನ್ನು ಯೋಚಿಸಬೇಕಾಗುವುದೆಂದೂ, ಅದಿಲ್‌ಷಹನು ಆ ಪತ್ರದಲ್ಲಿ ರಾಯನನ್ನು ಹೆದರಿಸಿ ಬರೆದಿದ್ದನು.

ಮಾಲೂಖಾನನು, ಗಜಮಂತ್ರಿಯಾದ ರಾಮಯಾಮಾತ್ಯನು ಬೇರೊಬ್ಬ ಕನ್ಯೆಯನ್ನು ಮುಕ್ತಾ ಕುಮಾರಿ ಎನ್ನಿಸಿ ತನಗೆ ಮೋಸಮಾಡಿರುವುದಾಗಿ ಸಂಶಯವಿರುವುದೆಂದು ತಂದೆಯೊಡನೆ ತಿಳಿಸಿದ್ದನು. ಆ ಸಂಶಯದ ಕನ್ಯೆಯನ್ನು ಜಯರಾಮ ಜಟ್ಟಿ ಹಾರಿಸಿಕೊಂಡು ಹೋಗಿ

ವಿಜಯನಗರದ ಅರಮನೆಯಲ್ಲಿ ಅಡಗಿಸಿಟ್ಟಿರುವನೆಂದು ಗೂಢಚಾರರು ಅದಿಲ್‌ಷಹನಿಗೆ ಸುದ್ದಿ ಹೇಳಿದ್ದರು. ಹೆಚ್ಚಿನ ಯಾವ ವಿಚಾರಗಳೂ ಅದಿಲ್‌ಷಹನಿಗೆ ತಿಳಿಯದು. ಮೊದಲು ಆ ಕನ್ಯೆಯನ್ನು ವಾಪಸ್ಸು ತರಿಸಿಕೊಂಡು, ರಾಮಯಾಮಾತ್ಯನು ಮೋಸಮಾಡಿರುವನಾದರೆ ಅದಕ್ಕೆ ತಕ್ಕ ಮೋಸವನ್ನು ತೋರಿಸಬೇಕೆಂದೂ, ಒಪ್ಪಂದದ ಪ್ರಕಾರ ಅದಿಲ್‌ಷಹನಿಗೆ ಯುದ್ಧಪ್ರಸಂಗ ಒದಗಿಸಿದರೆ ಗಜಪತಿಗಳು ಅವನಿಗೆ ಸಹಾಯ ಮಾಡಬೇಕಾಗುವುದೆಂದೂ, ರಾಯನು ಹೇಗೂ ಈಗ ಗಜಪತಿ ಗಳೊಡನೆ ಹೋರಾಡುತ್ತ ಹಣ್ಣಾಗಿರುವುದರಿಂದ ಆ ಕನ್ಯೆಯ ನೆವ ದಿಂದಾಗಿ ತಾನೂ ಅವನ ಮೇಲೆ ಯುದ್ಧಕ್ಕೆ ತೊಡಗಿದರೆ, ರಾಯನು ಖಂಡಿತವಾಗಿ ಸೋತುಹೋಗುವನೆಂದೂ ಭಾವಿಸಿ, ಅದಿಲ್‌ಷಹನು ಮೇಲೆ ಹೇಳಿದ ಪತ್ರದಿಂದ ರಾಯನನ್ನು ಕೆರಳಿಸಿದನು.

ಆ ಪತ್ರಕ್ಕೆ ಕೂಡಲೇ ಒಂದು ಖಾರವಾದ ಪ್ರತ್ಯುತ್ತರವು ಹೋಯಿತು. ಅದರಲ್ಲಿ ಮಿತ್ರದ್ರೋಹ ಮಾಡಿದವನು ಅದಿಲ್‌ಷಹನೇ ಎಂದು ಸಿದ್ಧಗೊಳಿಸಿ ಬರೆಯಲ್ಪಟ್ಟಿತ್ತು. ಹೇಗೆಂದರೆ, ಒಂದನೆಯದಾಗಿ ಹಿಂದೆ ಕುದುರೆಗಳನ್ನು ತಂದುಕೊಡುವೆನೆಂದು ರಾಯನಿಂದ ನಲವತ್ತು ಸಾವಿರ ವರಹಗಳನ್ನು ಮುಂಗಡ ತೆಗೆದುಕೊಂಡು ಹೋದ ಸೈಯದ್ ಮರ್ಕಾರ್ ಎಂಬವನಿಗೆ ಅದಿಲ್‌ಷಹನು ದುರ್ಬೋಧನೆ ಮಾಡಿ ತನ್ನ ರಾಜ್ಯದೊಳಗೆ ಅವನನ್ನು ಅಡಗಿಸಿಟ್ಟಿದ್ದನು. ಈಗ ಅವನನ್ನು ಕೂಡಲೇ ಕಳುಹಿಸಬೇಕೆಂತಲೂ, ಎರಡನೆಯದಾಗಿ ವಿಜಯನಗರದ ಅಂತಃಪುರದೊಳಗೆ ತಿಪ್ಪಾಂಬೆಯೊಡನೆ ನಡೆಸಿದ ಘಾತುಕ ಸಂಬಂಧವು ತಿಳಿದುಬಂದುದರಿಂದ ಅದಕ್ಕೆ ಕ್ಷಮೆಯನ್ನು ಕೇಳಿಕೊಳ್ಳಬೇಕೆಂತಲೂ, ಮೂರನೆಯದಾಗಿ ವಿಜಯನಗರ ಸಾಮ್ರಾಜ್ಯದೊಳಗಿನ ಕನ್ಯೆಯನ್ನು ಅಪಹಾರ ಮಾಡಿದುದಲ್ಲದೆ ಹೆದರಿಸುವ ಪತ್ರವನ್ನು ಬೇರೆ ಬರೆದುದ ರಿಂದ, ಈ ಮೂರು ಅಪರಾಧಗಳಿಗೆ ಪ್ರಾಯಶ್ಚಿತ್ತವಾಗಿ ಪೂರ್ವಕಾಲ ದಿಂದಲೂ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ್ದ ಕೃಷ್ಣಾನದಿಯ ದಕ್ಷಿಣ ತೀರದ ಪ್ರಾಂತವೆಲ್ಲವನ್ನೂ ವಾಪಸು ಬಿಟ್ಟುಕೊಟ್ಟು ಹೊಸ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದೆಂತಲೂ, ಇಲ್ಲವಾದರೆ ರಾಯಚೂರಿನ

ಯುದ್ಧಕ್ಕೆ ಸಿದ್ಧರಾಗಬೇಕೆಂತಲೂ ಆ ಪ್ರತ್ಯುತ್ತರದ ಅಭಿಪ್ರಾಯವಾಗಿತ್ತು.

ಈ ಪ್ರತ್ಯುತ್ತರವು ತಲಪಿದ ಮೇಲೆ ವಿಜಯನಗರದಲ್ಲಿ ನಡೆದ ಒಂದೊಂದೇ ವಿಚಿತ್ರ ಸಂಗತಿಗಳು ಅದಿಲ್‌ಷಹನಿಗೆ ಗೊತ್ತಾಯಿತು. ಆದರೆ ಮಾಡುವುದೇನು ? ಗಜಪತಿಗಳ ಸಹಾಯವನ್ನು ನಂಬಿ ಅವನೇ ಯುದ್ಧಪ್ರಸಂಗವನ್ನು ಎಳೆದುಕೊಂಡಿದ್ದನು. 'ಅಂತರ್ವೇದಿ'ಯ ಪ್ರಸಿದ್ಧ ದುರ್ಗಗಳಾದ ರಾಯಚೂರು, ಮುದಗಲ್ಲು ದುರ್ಗಗಳ ಸಂರಕ್ಷಣೆಗಾಗಿ ಅವನು ಯುದ್ಧಕ್ಕೆ ಸಿದ್ಧನಾಗಲೇಬೇಕಾಯಿತು.

ಇತ್ತ ಕೃಷ್ಣದೇವರಾಯನು ನಿಶ್ಚಿಂತನಾಗಿ 'ಶುಭಸ್ಯ ಶೀಘ್ರಂ' ಎಂಬಂತೆ ವಿಜಯ ಕಲ್ಯಾಣ ಮಹೋತ್ಸವದಲ್ಲಿ ತೇಲಾಡಿಕೊಂಡಿದ್ದನು. ಅದಿಲ್‌ಷಹನಿಗೂ ನಿಮಂತ್ರಣವು ಹೋಗಿತ್ತು. ಉತ್ಕಲ, ಕುಂತಳ, ಕೇರಳ, ಚೋರ, ತುಳುವಾದಿ ನಾನಾಮಂಡಲಗಳ ನಾಯಕರೂ ಪ್ರಜೆಗಳೂ ರಾಜಧಾನಿಗೆ ಆಗಮಿಸಿದರು. ನಿಯಮಿತವಾದ ಶುಭ ದಿನದಲ್ಲಿ ಪ್ರತಾಪರುದ್ರ ಗಜಪತಿ ತನ್ನ ಕುಮಾರಿ ರುಚೀದೇವಿಯನ್ನು ಕೃಷ್ಣದೇವರಾಯನಿಗೆ ಸಮರ್ಪಣೆಮಾಡಿ ವಿವಾಹ ಮಹೋತ್ಸವವನ್ನು ನೆರವೇರಿಸಿದನು. ಈ ಶುಭ ಸಂಯೋಗವನ್ನು ಹೊಂದಿಸಿದವಳಾದ ಚಿನ್ನಾದೇವಿ ಮಹಾಲಕ್ಷ್ಮಿಯಂತೆ ಶೋಭಾಯಮಾನಳಾಗಿ ಮೆರೆದಳು. ಅವಳ ನಿಷ್ಕಳಂಕವಾದ ಚರಿತ್ರ ದರ್ಶನಗಳಿಂದ ಪ್ರಜೆಗಳೆಲ್ಲಾ ಆನಂದ ಕೋಲಾಹಲಗಳಿಂದ ನಲಿದರು. ಕೃಷ್ಣದೇವರಾಯನ ಎಡಗಡೆಯಲ್ಲಿ ಪ್ರೇಮಪತ್ನಿಯಾದ ಚಿನ್ನಾದೇವಿಯೂ, ಬಲಗಡೆಯಲ್ಲಿ ನೂತನ ವಿಜಯವಧುವಾದ ರುಚೀದೇವಿಯೂ ಒಪ್ಪುತ್ತಿರುವ ಆ ಮಂಗಳ ದೃಶ್ಯವನ್ನು ಪ್ರಜೆಗಳು ಕಣ್ತುಂಬ ನೋಡಿ ಕೊಂಡಾಡಿ ಪಾಡಿದರು. ಪ್ರತಾಪರುದ್ರ ಗಜಪತಿ ಅನರ್ಘವಾದ ವಸ್ತು ಒಡವೆಗಳನ್ನೂ, ಆನೆ ಕುದುರೆ ಮೊದಲಾದ ರಾಜೋಚಿತ ಬಹುಮಾನ-ಬಳುವಳಿ, ಉಡುರೆಗಳನ್ನೂ ಅಳಿಯ ರಾಯನಿಗೆ ಯಥೇಷ್ಟವಾಗಿ ಕೊಟ್ಟನು. ಮಾದರಸನೇ ಮೊದಲಾದ ಬಂಧು ನಾಯಕರೆಲ್ಲರಿಗೂ ಚಿನ್ನಾದೇವಿ ತನ್ನ ಕೈಯಾರೆ ವಿಶೇಷವಾದ ಬಹುಮಾನಗಳನ್ನು ಕೊಟ್ಟು, ಉಚಿತ

ವಾದ ಅಧಿಕಾರಗಳನ್ನು ಕೊಡಿಸಿ ಸಂತೋಷ ಪಡಿಸಿದಳು.

ಹೀಗೆ ಪರಮೋತ್ಸಾಹವನ್ನು ಹೊಂದಿದ ಕೃಷ್ಣದೇವರಾಯನು ನವನವೋತ್ಸಾಹದಿಂದಿದ್ದ ಮಹಾಸೇನೆಯನ್ನು ಸಾಗಿಸಿಕೊಂಡು ರಾಯಚೂರಿನ ಕಡೆಗೆ ದಂಡಯಾತ್ರೆ ಹೊರಟನು. ಆ ಜನಪ್ರಿಯ ಚಕ್ರವರ್ತಿಯ ಮಹಾ ದಂಡಯಾತ್ರೆಯಲ್ಲಿ ಚಿನ್ನಾದೇವಿಯ ಅಜ್ಞಾತ ಬಂಧುವೃಂದವೂ, ಗಜಪತಿಗಳ ಸಹಾಯಕ ಸೇನೆಯೂ ಸೇರಿಕೊಂಡು ಅದು ಚರಿತ್ರ ಪ್ರಪಂಚದಲ್ಲಿ ಅತ್ಯಾಶ್ಚರ್ಯಕರವಾದ ಸಂಖ್ಯೆಯುಳ್ಳದು ದಾಗಿತ್ತು. ಕಾಲ್ಬಲದ ಸಂಖ್ಯೆ ಏಳು ಲಕ್ಷದ ಮೂವತ್ತಾರು ಸಾವಿರ! ರಾವುತರು ಮೂರು ಲಕ್ಷದ ಇಪ್ಪತ್ತಾರು ಸಾವಿರ!! ಮಾವುತರು ಐನೂರ ಐವತ್ತೊಂದು!!!

ರಾಯನು ಈ ಅದ್ಭುತ ಸೇನೆಯ ಧೂಳೀಪಟಲವನ್ನೆಬ್ಬಿಸಿ ಕೊಂಡು, ಕೃಷ್ಣಾ-ತುಂಗಭದ್ರಾ ನದಿಗಳ ಮಧ್ಯ ಪ್ರದೇಶವಾದ 'ಅಂತರ್ವೇದಿಯ' ಮಹಾಪಟಾಂಗಣದಲ್ಲಿ ಗಾವುದ ಗಣನೆಯ ಪ್ರದೇಶವನ್ನಾವರಿಸಿಕೊಂಡು ಸರ್ವ ಸೇನೆಯನ್ನು ಹನ್ನೊಂದು ವಿಭಾಗ ವನ್ನಾಗಿ ಮಾಡಿಸಿ ಸಂಗರರಂಗದಲ್ಲಿ ಆಯತ್ತಗೊಳಿಸಿದನು.

ಇಸ್ಮಾಯಿಲ್ ಆದಿಲ್‌ಷಹನು ಒಂದು ಲಕ್ಷದ ನಲವತ್ತು ಸಾವಿರ ಅಶ್ವೀಕಪದಾತಿವರ್ಗದೊಂದಿಗೆ ರಣಾವನಿಯನ್ನು ಪ್ರವೇಶ ಮಾಡಿದನು. ಇತ್ತಂಡಗಳಿಗೂ ಘನಘೋರ ಸಂಗ್ರಾಮವು ತೊಡಗಿತು. ಯವನ ವೀರರು ಶತಘ್ನೀ ಪ್ರಯೋಗದಿಂದ ರಾಯನ ಸೇನೆಯನ್ನು ಮೊದಲು ಹೆದರಿಸಿ ಬೆದರಿಸಿದರೂ, ರಾಯನು ಮುಮ್ಮಡಿ ನಾಲ್ಮಡಿ ವೇಗದಿಂದ ಮುಂದೊತ್ತಿ, ಅದಿಲ್‌ಷಹನನ್ನು ಕೃಷ್ಣಾನದಿಯಿಂದಾಚೆಗೆ ಓಡಿಸಿಬಿಟ್ಟನು.

ಅನಂತರ ರಾಯನು ರಾಯಚೂರು ನಗರವನ್ನು ಹಿಡಿದು ಕೋಟೆ ಯನ್ನು ಮುತ್ತಿದನು. ವಿರೋಧಿ ವೀರರು ದುರ್ಗದ ಪ್ರಾಕಾರಗಳ ಮೇಲಿನಿಂದ ಶಿಲೆಗಳನ್ನೂ ತಪ್ತತೈಲಗಳನ್ನೂ ವರ್ಷಣ ಮಾಡು ತ್ತಿದ್ದರು. ಈ ಸಂಧಿಯಲ್ಲಿ ರಾಯನ ಸೇನೆಯಲ್ಲಿದ್ದ ಪೋರ್ತುಗೀಸ ಸೈನಿಕರ ಕೈ ತುಪಾಕಿಗಳು ತುಂಬಾ ಪ್ರಯೋಜನಕಾರಿಯಾದುವು.

ರಾಯನ ಸ್ನೇಹಿತನಾದ 'ಕ್ರಿಸ್ತೊವಾ ಡಿ ಫಿಗರಿಡೋ'ನೇ ಪೋರ್ತುಗೀಸ್ ಸೇನಾಧಿಪತಿ. ಅವನ ಚಾತುರ್ಯದಿಂದ ಸೈನಿಕರು ಕೋಟೆಯ ಕಲ್ಲುಗಳನ್ನು ಅಗೆದು, ಸುರಂಗಹಾಕಿ ಭೇದಿಸಿ ಒಳಗೆ ನುಗ್ಗಿದರು. ವಿಜಯ ಲಕ್ಷ್ಮಿ, ರಾಯನನ್ನು ಕೈಹಿಡಿದು ವರಿಸಿದಳು. ಕೋಟೆ ವಶವಾಯಿತು.

ಹೀಗೆಯೇ ಮುದಗಲ್ ದುರ್ಗವನ್ನೂ ರಾಯನು ಸುಲಭವಾಗಿ ಹಿಡಿದುಕೊಂಡನು. ನರಸರಾಜನ ಮರಣಶಾಸನವನ್ನು ವೀರಕುಮಾರ ಕೃಷ್ಣದೇವರಾಯನು ಅಕ್ಷರಶಃ ಪಾಲಿಸಿದಂತಾಯಿತು. ವಿದ್ಯಾನಗರ ಸಾಮ್ರಾಜ್ಯವು 'ತ್ರಿವೇಣೀ ಸಂಗಮ'ದಂತಹ ಪುಣ್ಯ ಸಾಮ್ರಾಜ್ಯ ವಾಯಿತು. ರಾಯನಿಗೆ 'ಮೂರು ರಾಯರ ಗಂಡ' ಎಂಬ ಬಿರುದು ಬಂತು.

ರಾಯಚೂರಿನ ಯುದ್ಧದಲ್ಲಿ ಅತುಲಪರಾಕ್ರಮವನ್ನು ತೋರಿಸಿದ ಆರ್ವೀಡು ರಾಮರಾಜನಿಗೆ ರಾಯನು ನಿಜಕುಮಾರಿ ತಿರುಮಲಾ ದೇವಿಯನ್ನೇ ಧಾರೆಯೆರೆದುಕೊಟ್ಟನು. ಈ ರಾಮರಾಜನೇ ಅಂದಿನಿಂದ 'ಅಳಿಯ ರಾಮರಾಜ'ನೆಂದು ಪ್ರಖ್ಯಾತನಾದನು.

ಹಾಗೆಯೇ ರಾಯನು ಪ್ರತಾಪರುದ್ರ ಗಜಪತಿಯ ಕುಮಾರ ವೀರಭದ್ರನಿಗೆ, ವೀರರುದ್ರ ಗಜಪತಿ ನಂದಿನಿ ಮುಕ್ತಾದೇವಿಯನ್ನು ಕೊಡಿಸಿ ಕಲ್ಯಾಣ ಮಾಡಿಸಿದನು. ಹೀಗೆ ವಿದ್ಯಾನಗರ ಸಾಮ್ರಾಜ್ಯ ವನ್ನು ಕಲ್ಯಾಣರಂಗಸ್ಥಳವನ್ನಾಗಿಸಿ, ಪ್ರೇಮ-ವಿಜಯ ವಧೂಮಣಿ ಗಳಾದ ಚಿನ್ನಾ-ರುಚೀದೇವಿಯರ ಮಧ್ಯದಲ್ಲಿ, ನವರತ್ನಖಚಿತ ಸಿಂಹಾಸನಾಲಂಕೃತನಾಗಿ, ಉಷಾ-ಛಾಯಾ ದೇವಿಯರ ನಡುವೆ ಪ್ರಕಾಶಮಾನವಾಗಿ ಬೆಳಗುವ ಸೂರ್ಯನಂತೆ ಆಸೇತು ವಿಂಧ್ಯಾ ಪರ್ಯಂತ, ಸಮಸ್ತ ದಕ್ಷಿಣ ಭಾರತಧರಾರಂಗ ಮಧ್ಯದಲ್ಲಿ ತೇಜೋ ವಂತನಾಗಿ ಬೆಳಗಿ ಹೋದ ಕನ್ನಡರಾಯ ಕೃಷ್ಣದೇವರಾಯನೇ ಧನ್ಯನು! ಅವನ ಆಳ್ವಿಕೆಯ ಸೊಗವನ್ನು ಸವಿದ ಅಂದಿನ ಕನ್ನಡಿಗಾದಿ ಪ್ರಜೆಗಳೇ ಧನ್ಯರು!

"ಕನ್ನಡ ಚೆಲ್ನುಡಿ ಉನ್ನತಿಗೇರಲಿ!"



# ಈವರೆಗಿನ ಕೈಹೊತ್ತಿಗೆಗಳು

| | | | |
|---|---|---|---|
| ೧. | *ಗೃಹಲಕ್ಷ್ಮಿ | .... | ಅ. ನ. ಕೃ. |
| ೨. | *ಮಲ್ಲಿ | .... | ದೇವುಡು |
| ೩. | *ವಿಮೋಚನೆ | .... | ನಿರಂಜನ |
| ೪. | *ಪರದೇಶಿ | .... | ಕುಲಕರ್ಣಿ ಬಿಂದುಮಾಧವ |
| ೫. | *ಸ್ವರ್ಣರೇಖೆ | .... | ವೀರಕೇಸರಿ |
| ೬. | *ಅಪಸ್ವರ | .... | ತ್ರಿವೇಣಿ |
| ೭. | *ರಾಯರು ಕಂಡ ರಂಗು | .... | ಬೆಳ್ಳೆ ರಾಮಚಂದ್ರರಾವ್ |
| ೮. | *ರುಕ್ಮಿಣಿ | .... | ಅ. ನ. ಕೃ. |
| ೯. | *ವಜ್ರದುಂಗುರ | .... | ನಾ. ರಾಜಣ್ಣ |
| ೧೦. | ಕೇದಿಗೆ ವನ | .... | ತ. ರಾ. ಸು. |
| ೧೧. | *ಸಮಾಜ ಗರ್ಭದಲ್ಲಿ | .... | ಸಿ. ಬಿ. ಚಂದ್ರಶೇಖರ್ |
| ೧೨. | ತೀರಿದ ಆಸೆ | .... | ಸೇವ ನಮಿರಾಜಮಲ್ಲ |
| ೧೩. | ಪ್ರಕೃತಿ | .... | ಶ್ರೀರಂಗ |
| ೧೪. | ಹೊಲ-ಮನೆ | .... | ಶ್ರೀಕೃಷ್ಣ ಪಾಟೀಲ |
| ೧೫. | †ದೇವದಾಸಿ-ಎಚ್ಚಮನಾಯಕ | .... | ದಿವಂಗತ ಕೆ. ಹಿರಣ್ಣಯ್ಯ |
| ೧೬. | ರಾಣೀ ಅಜ್ಞಾತಾ | .... | ನವಗಿರಿನಂದ |

## ಅಚ್ಚಿನಲ್ಲಿ

| | | |
|---|---|---|
| ಗೊಂಡಾರಣ್ಯ | .... | ಶಿವರಾಮ ಕಾರಂತ |
| ರಂಗಮ್ಮನ ವಠಾರ | .... | ನಿರಂಜನ |

## ಮುಂಬರುವ ಕೈಹೊತ್ತಿಗೆಗಳು

| | | |
|---|---|---|
| ತಾಯಿ ಮಕ್ಕಳು | .... | ಅ. ನ. ಕೃ. |
| ನಾಟ್ಯಸರಸ್ವತಿ ಶಾಂತಲಾದೇವಿ | .... | ಅ. ನ. ಕೃ. |

---

*ಪ್ರತಿಗಳು ಮುಗಿದಿವೆ.

†ಈ ಎರಡು ನಾಟಕಗಳ ಪ್ರಕಟನೆಯ ನಿಪ್ಪಳ ಉತ್ಪನ್ನವನ್ನು ಹಿರಣ್ಣಯ್ಯನವರ ಪುತ್ರ ಶ್ರೀ ನರಸಿಂಹಮೂರ್ತಿಯವರಿಗೆ ಒಪ್ಪಿಸಲಾಗುವುದು.

# ರಾಣೀ ಅಜ್ಞಾತಾ

ಕರ್ನಾಟಕ ಸಂಸ್ಕೃತಿ ವೈಭವಶಿಖರದ ತುತ್ತುದಿಯನ್ನೇರಿತ್ತು ಕನ್ನಡ ಸಾಮ್ರಾಜ್ಯ ವಿಜಯನಗರದಲ್ಲಿ. ಅಂದಿನ ಅರಸು ಕೃಷ್ಣದೇವರಾಯ ಪಟ್ಟಕ್ಕೆ ಬರುವ ಮೊದಲು ಅಜ್ಞಾತನಾಗಿದ್ದಾಗ ಪ್ರೇಮಿಸಿ ವರಿಸಿದ ಅಜ್ಞಾತ ರಾಜಕುಮಾರಿಯೇ ಚಿನ್ನಾದೇವಿ. ರಾಯ ಸಾಮ್ರಾಟನಾದರೂ, ಚಿನ್ನಾದೇವಿ ಕೆಲವಾರು ವರುಷಗಳ ವರೆಗೆ ಪಟ್ಟದರಾಣಿಯಾಗದಿರಲು ಕಾರಣ, 'ರಾಣೀ ಅಜ್ಞಾತಾ'ಳಾಗಿದ್ದ ಆಕೆ, ಗಜಪತಿ ನಂದಿನಿ ರುಚೀದೇವಿ ಮತ್ತು ಕೃಷ್ಣದೇವರಾಯ ಇವರ ಸಮಾಗಮ, ಆಗಿನ ಹೃದಯಂಗಮ ವಿದ್ಯಮಾನಗಳು ಇವೆಲ್ಲವನ್ನೂ ಈ ಕಾದಂಬರಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾಗೆ

**ನವಗಿರಿನಂದ**

ಬೆಲೆ 1½ ರೂಪಾಯಿ

The Eastern Press, Bangal